# ಶ್ರೀ ವಿಜಯವಿಠಲ ಪ್ರತಿಮೆ



ಶ್ರೀ ವಿಜಯ ದಾಸರ ಉಪಾಸ್ಯಮೂರ್ತಿ. ಇದನ್ನೇ ತಮ್ಮ ಮನಕ್ಕೆ ಒಪ್ಪಿದ ಶಿಷ್ಯರಾದ, ಉತ್ತನೂರು ಶ್ರೀ ಗೊಪಾಲ ದಾಸರಿಗೆ ಶ್ರೀವಿಜಯದಾಸರು ಅನುಗ್ರಹಿಸಿ ಕೊಟ್ಟಿದ್ದು. ಈ ಪ್ರತಿಮೆ ಅದ್ಯಾಪಿ ಗದ್ವಾಲ ಶ್ರೀ ವೆಂಕೋಬದಾಸರ ಮನೆಯಲ್ಲಿ ಪೂಜೆಗೊಳುತ್ತಿದ್ದಾನೆ. ಶ್ರೀಗೋಪಾಲದಾಸರು ಚಿತ್ರಿಸಿದವಿರಾಟರೂಪಿ ಪರಮಾತ್ಮನ ಪಟಗಳು ಅದ್ಯಾಪಿ ಉತ್ತನೂರು ಶ್ರೀ ಸುಬ್ಬಣ್ಣ ದಾಸರ ಮನೆಯಲ್ಲಿ ಪೂಜೆಗೊಳ್ಳುತ್ತಿವೆ ಭಕ್ತಾದಿಗಳ ದರ್ಶನಾರ್ಥವಾಗಿ ಈ ವಿಷಯ ತಿಳಿಸಿದೆ.

# ಶ್ರೀ ವಿಜಯದಾಸರ ಸೃಷ್ಟಿ ಪ್ರಕರಣ ಸುಳಾದಿಗಳು

ಪ್ರಕಾಶಕರು
ಗುರು ಮಧ್ವ ರಾವ ಉಪ್ಲಿ

ಜ್ಞಾನ ಪ್ರಸಾರ ಪ್ರಕಾಶನ
ರಾಯಚೂರು

# ಶ್ರೀ ವಿಜಯ ದಾಸರ ಸೃಷ್ಟಿ ಪ್ರಕರಣ ಸುಳಾದಿಗಳು

ಪ್ರಥಮ ಮುದ್ರಣ ;- ಕ್ರಿ.ಶ. ೧೯೯೪

ಪ್ರತಿಗಳು :- ೧೦೦೦

ಬೆಲೆ :- ಮೂವತ್ತು ರೂಪಾಯಿಗಳು

*This Book is Published with the aid of T. T D Tirupathi under the scheme of aid to publish Religious Books.*

ಪ್ರಕಾಶಕರು
**ಗುರುಮಧ್ವರಾವ ಉಪ್ಲಿ**
ಜ್ಞಾನ ಪ್ರಕಾಶನ ಮಂದಿರ
ಶ್ರೀ ಸತ್ಯನಾಥ ಕಾಲನಿ, ರಾಯಚೂರು

ಪುಸ್ತಕ ದೊರೆಯುವ ಸ್ಥಳ
**ಎನ್. ಎಸ್. ಕಿತ್ತೂರ**
3-4-18, ಬಾಗಲಿಂಗಂಪಲ್ಲಿ
ಡಾ॥ ಭೂಮಣ್ಣಾ ಗಲ್ಲಿ, ಹೈದರಾಬಾದು - 500027

ಮುದ್ರಕರು
**ಆನಂದ ಪ್ರಿಂಟರ್ಸ್**
3-4-168, ಬಾಗಲಿಂಗಂಪಲ್ಲಿ
ಹೈದರಾಬಾದ - 500027

॥ ಶ್ರೀ ಚಿಂತಲರಾಯ ಪ್ರಸನ್ನೋಭವ ॥

॥ ಶ್ರೀ ಶೇಷದಾಸವರ್ಯ ಗುರುಭ್ಯೋ ನಮಃ ॥

## — ನಾಲ್ಕು ಮಾತು —

ಅಕ್ಷರ ಅಭ್ಯಾಸ ಮಾಡುವ ಬಾಲಕನಿಗೆ ಮೊದಲು ದೊಡ್ಡ ಅಕ್ಷರ ಬರೆದು ಆಮೇಲೆ ಸಣ್ಣ ಅಕ್ಷರಗಳನ್ನು ಬರೆಯಲು ಕಲಿಯುವಂತೆ ಪ್ರತಿಯೊಬ್ಬ ಉಪಾಸಕನಿಗೆ ಮೊದಲು ಸ್ಥೂಲ ಸೃಷ್ಟಿಯ ಅಧ್ಯಯನ, ನಂತರ ಸೂಕ್ಷ್ಮ ಸೃಷ್ಟಿಯ ಜ್ಞಾನವಾಗುವದು ಸ್ವಾಭಾವಿಕ. ಪರಮಾತ್ಮನ ಅಚಿಂತ್ಯ ಅದ್ಭುತ, ಅನಂತ ಮಹಿಮೆಗಳ ವಿಚಾರ ತಿಳಿಯುವಲ್ಲಿ ಮೊದಲನೆಯದೇ ವಿಚಿತ್ರ ಹಾಗೂ ಅದ್ಭುತವಾದ ಸೃಷ್ಟಿ. ವೇದ ಉಪನಿಷತ್ತು ಹಾಗೂ ಪುರಾಣ ಇತಿಹಾಸಗಳಲ್ಲಿ ವಿಶೇಷವಾಗಿ ಸಂಸ್ಕೃತ ಭಾಷೆಯಲ್ಲಿ ತಿಳಿಸಿದ ಸೃಷ್ಟಿ ವಿಚಾರಗಳನ್ನು ಕ್ರೋಢೀಕರಿಸಿ, ಸರಳ ಕನ್ನಡ ಭಾಷೆಯಲ್ಲಿ ಪದ ಹಾಗೂ ಸುಳಾದಿಗಳಲ್ಲಿ ಹರಿದಾಸರು ರಚಿಸಿ ಮಹೋಪಕಾರ ಮಾಡಿದ್ದಾರೆ.

ಶ್ರೀ ಶೇಷದಾಸವರ್ಯರ ಸುಳಾದಿಗಳು, ಶ್ರೀ ಗೋಪಾಲದಾಸರ ಸುಳಾದಿಗಳು, ಶ್ರೀ ವಿಜಯದಾಸರ ತಾರತಮ್ಯ ಸುಳಾದಿಗಳ ಪ್ರಕಾಶನ ನಂತರ ಪ್ರಸ್ತುತ ಶ್ರೀ ವಿಜಯದಾಸರ ಸೃಷ್ಟಿಪ್ರಕರಣ ಸುಳಾದಿಗಳ ಪ್ರಕಾಶನ ಈ ಅಲ್ಪನ ಅಧಿಷ್ಠಾನದಿಂದ ಆಗುತ್ತಿರುವದು ಶ್ರೀ ವಿಜಯದಾಸ, ಶ್ರೀ ಗೋಪಾಲದಾಸ ಹಾಗೂ ಶ್ರೀ ಶೇಷದಾಸರ ಅನುಗ್ರಹವೇ. ಈ ಸಂದರ್ಭದಲ್ಲಿ ಒಂದು ಮುಖ್ಯ ಮಾತು ಮರೆಯುವಂತಿಲ್ಲ. ಅದು ಯಾವುದೆಂದರೆ, ಸುಳಾದಿಗಳ ಸಂಗ್ರಹ ಪ್ರಕಾಶನ ಮಾಡುವವರೆಲ್ಲ ಶ್ರೀ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲಿ ಲಿಂಗಸೂಗೂರು ಸಂಚಾಲಕರಾಗಿದ್ದ ಪೂಜ್ಯ ದಿವಂಗತ ಶ್ರೀ ಗೋರೇಬಾಳ ಹನುಮಂತರಾಯರನ್ನು ಭಕ್ತಿ ಪೂರ್ವಕ ಸ್ಮರಿಸಲೇಬೇಕು. ಅಂದರೆ ದಾಸರಾಯರ ಪ್ರೀತಿ ಹಾಗೂ ಶ್ರೀಹರಿಯ ಕೃಪೆಯಾಗುವದೆಂದು ನನ್ನ ಭಾವನೆ ಇದ್ದುದರಿಂದ ಅವರಿಗೆ ಪ್ರಥಮತಃ ಅನಂತ ನಮಸ್ಕಾರಗಳನ್ನು ಅರ್ಪಿಸುವೆ.

ಶ್ರೀ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲಿ ಲಿಂಗಸೂಗೂರಿನಿಂದ ಪ್ರಕಾಶಿತವಾದ ಸೃಷ್ಟಿ ಪ್ರಕರಣ ಸುಳಾದಿಗಳು, ಶ್ರೀ ಗೋಪಾಲದಾಸರ ವಂಶೀಕರಾದ ಉತ್ತನೂರ ಶ್ರೀ ಸುಬ್ಬಣ್ಣದಾಸರಲ್ಲಿದ್ದ ಸಂಗ್ರಹ, ಗದ್ವಾಲಿ

ಶ್ರೀ ವೆಂಕೋಬದಾಸರಲ್ಲಿ ದೊರೆತ ಕೈ ಬರಹದ ಹಳೆಯ ಸುಳಾದಿಗಳ ಸಂಗ್ರಹ ಹಾಗೂ ಭೀಗಮುದ್ರಿ ತಿಮ್ಮಪ್ಪದಾಸರ ಗ್ರಂಥ ಸಂಗ್ರಹಗಳಿಂದ ಈ "ಶ್ರೀ ವಿಜಯ ದಾಸರ ಸೃಷ್ಟಿ ಪ್ರಕರಣ ಸುಳಾದಿ" ಗ್ರಂಥವನ್ನು ಭಗವದ್ಭಕ್ತರಿಗೆ ನೀಡುವ ಸಾಹಸ ಮಾಡಿದ್ದೇನೆ. ಕೆಲವು ಸುಳಾದಿಗಳ ಬಗ್ಗೆ ವಿವರಣೆಯನ್ನು ನನ್ನ ಅಲ್ಪಮತಿಗೆ ತಿಳಿದಷ್ಟು ಕೊಟ್ಟಿದ್ದೇನೆ.

ಮುಖ್ಯವಾಗಿ ಶ್ರೀ ಗುರು ಜಗನ್ನಾಥದಾಸರ ವಂಶೀಕರಾದ ಶ್ರೀ ಕೆ. ಅಪ್ಪಣಾಚಾರ್ಯರ ಪ್ರೋತ್ಸಾಹನೆ ಹಾಗೂ ಟಿ. ಟಿ. ಡಿ. ಇವರ ಧನ ಸಹಾಯದಿಂದ ಈ ಗ್ರಂಥ ಮುದ್ರಣಗೊಂಡು ಹೊರಬರುತ್ತಿದೆ. ಟಿ. ಟಿ. ಡಿ. ಅಧಿಕಾರಿಗಳಿಗೆ, ಶ್ರೀ ಕೆ. ಅಪ್ಪಣಾಚಾರ್ಯರಿಗೆ ನನ್ನ ಕೃತಜ್ಞತೆಗಳು. ಸೃಷ್ಟಿ ಪ್ರಕರಣ ಸುಳಾದಿಗಳು ಗಹನ ವಿಷಯಗಳನ್ನೊಳಗೊಂಡಿದ್ದು ಸುಲಭವಾಗಿ ಮನನಕ್ಕೆ ಎಟುಕುವದು ಕಷ್ಟ ನಿಜ, ಆದರೆ ಶ್ರದ್ಧೆಯಿಂದ ಪಾರಾಯಣ ಮಾಡಿದರೆ ದಾಸರಾಯರೇ ಪ್ರಮೇಯ ತಿಳಿಸಿ, ಹರಿ ಗುರುಗಳ ಅನುಗ್ರಹಕ್ಕೆ ಪಾತ್ರರಾಗುವಂತೆ ಕರುಣ ಮಾಡುವರೆಂದು ಹಿರಿಯರು ಹೇಳುತ್ತಾರೆ. ಈ ಮಾತುಗಳಲ್ಲಿ ನಂಬಿಗೆ ಇಟ್ಟು ಆಚರಣೆಗಳಲ್ಲಿ ತರಲು ನನ್ನ ಕಳಕಳಿಯ ವಿನಂತಿ. ಈ ಗ್ರಂಥದಲ್ಲಿ ಒಟ್ಟು ೬೦ ಸುಳಾದಿಗಳನ್ನು ಸಂಗ್ರಹಿಸಲಾಗಿದೆ.

೨೭೨ ನೇ ಪುಟದಲ್ಲಿ ' ೫೮ ಸುಳಾದಿ ಎಂದು ತಪ್ಪಾಗಿ ಪ್ರಕಟವಾದದ್ದನ್ನು 'ಸುಳಾದಿ ೫೫' ಎಂದು ನೋಡಬೇಕು.

ಈ ಗ್ರಂಥ ಹೊರಬರಲು ಅನೇಕ ಭಗವದ್ಭಕ್ತರ ಸಹಕಾರ ನನಗೆ ಸಿಕ್ಕಿದೆ. ಅವರಿಗೆಲ್ಲ ದಾಸರಾಯರು ಅನುಗ್ರಹಿಸಲಿ ಎಂದು ಕೋರುತ್ತೇನೆ. ನನಗೆ ವಿಶೇಷ ಸಹಕಾರ ಕೊಟ್ಟು ಅಂದವಾಗಿ ಮುದ್ರಿಸಿದ ಆನಂದ ಪ್ರಿಂಟರ್ಸ ಮಾಲೀಕರಾದ ಶ್ರೀ ರಾಘವೇಂದ್ರಾಚಾರ್ಯ ಪುರಾಣಿಕರಿಗೆ ದಾಸರಾಯರು ಅನುಗ್ರಹಿಸಲಿ.

ರಾಯಚೂರು | ದಾಸರ ಪಾದಧೂಳಿ

೧೬-೩-೧೯೯೪ | **ಗುರು ಮಧ್ವರಾವ ಉಪ್ಲಿ**

# ಅನುಕ್ರಮಣಿಕಾ


| ಕ್ರಮ ಸಂಖ್ಯೆ | ಸುಳಾದಿಗಳು | ಪುಟ |
|---|---|---|
| ೧ | ಚಿನುಮಯ ಮೂರುತಿ ಪ್ರಳಯ ಜಲಧಿಯೊಳು | ೨ |
| ೨ | ಪ್ರಳಯೋದಕದಲ್ಲಿ ವಟಪತ್ರಶಯನ ನಾಗಿದ್ದ | ೪ |
| ೩ | ಶ್ರೀ ಮನ್ನಾರಾಯಣ ದೇವ ನೀನು ಶ್ರೀ ಲಕುಮಿಯು | ೭ |
| ೪ | ನಿನ್ನ ಬೊಮ್ಮ ಮೂರುತಿಗೆ ನಮೊನಮೊ | ೧೦ |
| ೫ | ತ್ರಿಶೂಲ ಡಮರುಗ ಭಸಿತ ರುದ್ರಾಕ್ಷಿಯು | ೧೧ |
| ೬ | ನೀನೆ ಮುಖ್ಯಕಾರಣ ಅಕಾರಣರೊ | ೧೫ |
| ೭ | ಎಂಭತ್ತುನಾಲ್ಕು ಲಕ್ಷಯೋನಿ ಮುಖಂಗಳಲ್ಲಿ | ೧೭ |
| ೮ | ವಿಷ್ಣುಭಕ್ತಿಯೋಗ್ಯ ತಾರತಮ್ಯಂಗಳು | ೧೯ |
| ೯ | ಮುಕುತಿ ಸುಖದೊಳು ಪರಮ ಸುಖನೆಂದಳಿಯದ | ೨೫ |
| ೧೦ | ಒಂದಪರಾಧವೆ ಸಾಕಯ್ಯ | ೨೯ |
| ೧೧ | ವಿಶ್ವವ್ಯಾಪಕ ಮೂರುತಿಯಾಗಿ ಅವ್ಯಾಕೃತವನು | ೩೩ |
| ೧೨ | ಆದಿ ಮೂರುತಿಯಾಗಿ ಅವ್ಯಾಕೃತಾಕಾಶದಲ್ಲಿ | ೩೬ |
| ೧೩ | ಅಣು ಮೂರುತಿಗಳು ನಿತ್ಯವಾಗಿ | ೩೯ |
| ೧೪ | ಅನಂತವೇದಗಳಿಂದ ನಿನ್ನ ತುತಿಸುವ ಅಜಗೆ | ೪೧ |
| ೧೫ | ಗಜದಲ್ಲಿ ಗಜರೂಪನಾಗಿ | ೪೩ |
| ೧೬ | ಪಾಹಿ ಪಂಕೇರು ಹೇಕ್ಷಣ ಸರ್ವ ಕಾಮದಾ | ೪೯ |
| ೧೭ | ಪ್ರಣವ ಮಂತ್ರವಗ್ರಹಿಸು | ೫೫ |
| ೧೮ | ಸತ್ಯ ಸಂಕಲ್ಪ ಸಿದ್ಧ ಅನಾದಿ ದೈವ | ೫೯ |
| ೧೯ | ಚಿಂತನೆ ಮಾಡುಮನವೆ ಚಿನ್ಮಯ ದೇವನ್ನ | ೬೧ |

| | | |
|---|---|---|
| ೨೦ | ಅಣುದ್ವಯ ಪರಮಾಣು ಯಿಂಥಾದೆತ್ರಯವಾಗೆ | ೬೫ |
| ೨೧ | ಸಂಧಿಕಾಲವೆ ತಿಳಿಯುಗ ಮನ್ವಂತರ ಭೇದ | ೭೨ |
| ೨೨ | ಪರಮಾಣ್ವಾದ್ವಿ ಪರಮಾಣು ಮಹಾಕಾಲಾಂತಾ | ೭೭ |
| ೨೩ | ತತುವ ಮೂರುತಿ ಪರತತುವ ಮೂರತಿ | ೮೦ |
| ೨೪ | ಆದಿ ಮೂರುತಿ ಪುರುಷ ಪೂರ್ಣಗುಣಾಂಬುಧಿ | ೮೪ |
| ೨೫ | ಇಂದಿರಾ ದೇವಿ ಮತ್ತೆ ತಂದೆ ವಿಠಲ | ೮೯ |
| ೨೬ | ಮುಕ್ತಿಲ್ಲಿ ಪಂಚಭೇಧ ಜಡಜೀವ ಪರಮಾತ್ಮ | ೯೨ |
| ೨೭ | ಅಂದು ಮಹಾಪ್ರಳಯ ರಾತ್ರಿಸಂಪೂರ್ಣೋಯ | ೯೬ |
| ೨೮ | ಋಜುಗಣಷ್ಟರ ಪ್ರಕರಣವನ್ನು ಕೇಳನಿತ್ಯ | ೧೦೦ |
| ೨೯ | ಪ್ರಳಯೋದಕದಲ್ಲಿ ಯೇಕೋನಾರಾಯಣ | ೧೦೬ |
| ೩೦ | ಗುಣಕಾಲಾದೇಶಾತೀತವ್ಯಾಪ್ತ ಪ್ರಕೃತಿ ರಮಣ | ೧೧೩ |
| ೩೧ | ನೀನಾದಿ ಮೂರುತಿಯಾಗಿ ಅವ್ಯಾಕೃತಾಕಾಶದಲ್ಲಿ | ೧೧೮ |
| ೩೨ | ಕೃತಿಕಾಂತ ಅರ್ಧನಾರಿ ರೂಪವ ಧರಿಸಿ | ೧೨೩ |
| ೩೩ | ಪರನ ಪರಿಯಂಕ (ನಿಂದ) ಅಂಭೃಣಿ ಸ್ತುತಿಗೆ ಮೆಚ್ಚಿ | ೧೨೯ |
| ೩೪ | ಎತ್ತಣ ಭೂತಂಗಳೊ ಯೆಲ್ಲಿ ಪೊಕರೆ ಬಿಡುವು | ೧೩೬ |
| ೩೫ | ತತು ಪೂರ್ವದಲ್ಲಿಯನಗೆ ಹಿತವಾದ ಹಿರಿಯರು | ೧೪೧ |
| ೩೬ | ಗುಣಭಾಗತ್ರಯ ನಿತ್ಯ ಅನಾದಿಯಿಂದಲಿ | ೧೪೫ |
| ೩೭ | ನವ ಪಂಚ ಪಂಚ ಮೇಲೆ ಆರಂಗುಲಿ ಪ್ರಮಾಣ | ೧೫೫ |
| ೩೮ | ತಿಳಿವದನ್ನಮಯಾದಿ ಕೋಶಗಳನು | ೧೬೧ |
| ೩೯ | ಒಂದರೊಳೆಂಟೆ ಒಂದರೊಳಘನ್ನೆರಡೆನೊ | ೧೬೪ |
| ೪೦ | ಚಿದ್ದೇಹಕಾರ ಆನಂದಮಯನಯ್ಯ | ೧೬೬ |
| ೪೧ | ಆತ್ಮಣು ಜೀವವಿದೆ ಅನಾದಿಯಿಂದ ಸಿದ್ಧ | ೧೭೧ |
| ೪೨ | ಜಡ ಕೇವಲತರ ಸೂಕ್ಷ್ಮಪ್ರಕೃತಿಯಿಂದ | ೧೭೫ |

೪೩ ನರಜನ್ಮ ಬಂದುದಕೆ ಯಿಪ್ಪತ್ತು ಆರುಕಳೆ ೧೭೯
೪೪ ಮೂಲ ಮೂರುತಿಯಾಗಿ ಯೇಕಾರ್ಣವದೊಳಗೆ ೧೮೩
೪೫ ಗುಣಕಾಲ ದೇಶ ವೇದ ಜೀವಲಕುಮಿ ನಾರಾಯಣ ೨೦೨
೪೬ ಹರಿ ವಿಷ್ಣು ರೂಪಾತ್ಮಕ ಚತುರ ವಿಂಶತಿ ತತ್ವ ೨೧೭
೪೭ ವಿರಾಟ ಮೂರ್ತಿ ಧ್ಯಾನಾ ಮಾಡುಯಿದೆ ಸ್ಥೌಲ್ಯ ೨೨೪
೪೮ ಮೇರು ಪರ್ವತ ಲಕ್ಷಯೋಜನೋಚ್ಛ್ರಿತ ಹದಿ ೨೩೯
೪೯ ಸುಧಾಂಬುಧಿ ಮಧ್ಯ ಈ ರೈದು ದಶಲಕ್ಷ ೨೫೪
೫೦ ಜಲಜಲೋಚನ ಪ್ರಳಯಜಲಧಿಯೊಳಗೆ ಅಂದು ೨೫೭
೫೧ ರತ್ನಖಚಿತ ಏಳುಸುತ್ತಿನ ಕೋಟೆ ಆಯುತ ೨೬೨
೫೨ ಅಷ್ಟಮಹಾಮಂತ್ರಗಳು ನಿಷ್ಟೆಯಿಂದಲಿ ಕ್ಷತು ೨೬೬
೫೩ ತೊಲಗಿ ಪೋಗುವುದಲ್ಲ ತೊಂಡನಾದ ಕಾಲಕ್ಕೂ ೨೭೨
೫೪ ಆಗರ ಸತಿ ಸುತ ಸೌಖ್ಯವೆಂದೆಂಬೊ ದುಃಖ ೨೭೬
೫೫ ಹತ್ತೈದು ವಿಂಶತಿ ಮ್ಯಾಲೆರಡು ಸಾವಿರ ೨೮೦
೫೬ ಭೌತಿ ಕಾತ್ಮದೇಹ ಬಹುಜನ್ಮ ಕರ್ಮದಿಂದ ೨೮೪
೫೭ ಎಪ್ಪತ್ತೆರಡು ಸಾವಿರ ನಾಡಿ ಅತೀಂದ್ರಿಯ ೨೮೯
೫೮ ವಾರಿಜ ಜಾಂಡದ ವಿಸ್ತಾರವು ಅಂತರ ಬಾಹಿರದಲಿ ೨೯೪
೫೯ ಶೋಭನವೆನ್ನಿರೆ ಶ್ರೀ ದೇವಿ ಅರಸಗೆ ೨೯೮
೬೦ ಜೋ ಜೋ ಕಂದರ್ಪ ಕೋಟಿಲಾವಣ್ಯ ೩೦೦

॥ ಶ್ರೀ ಲಕ್ಷ್ಮೀ ಚಿಂತಲಸ್ವಾಮಿ ಪ್ರಸನ್ನ ॥

॥ ಶ್ರೀ ಪಾರ್ಥಸಾರಥಿ ಸ್ವಾಮಿನೇ ನಮಃ ॥

॥ ಶ್ರೀ ಚಿಂತರೆವುಲಿಭೀಮಾತ್ಮಕ ಶ್ರೀ ಭಾರತಿರಮಣ ಮುಖ್ಯಪ್ರಾಣಾಯನಮಃ॥

॥ ಶ್ರೀ ಪುರಂದರ ವಿಜಯಾದಿಸಮಸ್ತದಾಸವರ್ಯಾಯನಮಃ ॥



# ಸೃಷ್ಟಿಪ್ರಕರಣ ಸುಳಾದಿಗಳು

ಸಂಗ್ರಹಕಾರರು ಮತ್ತು ಪ್ರಕಾಶಕರು

**ಗುರುಮಧ್ವರಾವ ಉಪ್ಪಿ**

ತಾ॥ ಗದ್ವಾಲ ಜಿ॥ ಮಹಬೂಬನಗರ

( ಆಂಧ್ರ ಪ್ರದೇಶ )

# ಸಂಕ್ಷಿಪ್ತ ಸೃಷ್ಟಿ ಪ್ರಕರಣ

## ಶ್ರೀ ಹಯವದನ ( ಶ್ರೀ ವಾದಿರಾಜರ ) ಕೃತಿ

### ೧) ಸುಳಾದಿ

ರಾಗ : ಸಾವೇರಿ ಧ್ರುವತಾಳ

ಚಿನುಮಯ ಮೂರುತಿ ಪ್ರಳಯ ಜಲಧಿಯೊಳು |
ವನಿತೆ ಶ್ರೀ ಭೂಮಿ ದುರ್ಗೆಯ ರೊಡನೆ |
ತನವುದರದಲ್ಲಿ ಲಿಂಗ ವಿಶಿಷ್ಟರಾದ |
ಇನಿತು ಜೀವರ ಹಿಡಿ ತುಂಬಾ ಕೊಂಡು |
ತನಯನ ನೂರು ವರುಷ ಪರಿಯಂತದಿ |
ವನಜಾಕ್ಷ ವಟಪತ್ರ ಶಯನನಾಗಿ |
ಜನರೆಲ್ಲ ತಮ್ಮ ತಮ್ಮ ಗತಿಗೆ ತಕ್ಕ ಸಾ |
ಧನವ ಸಾಧಿಸಿ ಕೊಳ್ಳಲೆಂದು ಕರುಣಿ |
ಪುನರಪಿ ಸೃಷ್ಟಿಯ ಮಾಡುವೆನೆಂದು ಲಾ |
ಲಸಿಗೆ ಪ್ರಕೃತಿಯ ಮಮತೆಯಿತ್ತು |
ಗುಣ ತ್ರಯಾತ್ಮಕ ಸೂಕ್ಷ್ಮ ತತ್ವರಾಶಿಯ ಜೀವ |
ರನು ಸೃಜಿಸಿದ ಹಯವದನ ಪ್ರಭು | ||೧||

#### ಮಟ್ಟತಾಳ

ಮಹತತ್ವವ ಸೃಜಿಸಿ (ಸೃಷ್ಟಿಸಿ) ಮರುತ ಬ್ರಹ್ಮರಿಟ್ಟ |
ಅಹಂಕಾರದಿ ಗರುಡ ಶೇಷ ರುದ್ರರಿಟ್ಟ |
ಅಹಂಕೃತಿ ತೃತಿಯ ಭಾಗವನೆ ಮಾಡಿ |
ಶ್ರೀ ಹಯವದನ ಭೂತೇಂದ್ರಿಯಗಳ ಮಾಡಿದ | ||೨||

### ರೂಪಕತಾಳ

ತಾಮಸದಿಂದ ಪಂಚಭೂತಂಗಳ ಸೃಜಿಸಿ ।
ಯೋಮಾಂತರದಿ ಪಂಚದೇವರ ಕೂಡಿಸಿ ।
ಆಮುನ್ನೆ ತೈಜಸದಿ ಸಾಧಿಸಿದ ದಶೇಂದ್ರಿಯ ।
ಸೋಮ ಸೂರ್ಯಾದಿ ದೇವತೆಗಳನೇ ನೆಲಸಿ ।
ಶ್ರೀ ಮನೋಹರ ಹಯವದನ ವೈಕಾರಿಕದಿ ।
ಆ ಮನವ ದೇವತೆಗಳ ತನುವ ಮಾಡಿದ । ॥೩॥

### ತ್ರಿವಿಡಿತಾಳ

ಇಂತೀ ತತ್ವವೆ ಸೃಷ್ಟಿಗೆ ಮೊದಲು ।
ಕಾಂತಿ–ಯರಪ್ಪಿ ಕೊಂಡಿಪ್ಪ ಶ್ರೀಕೃಷ್ಣ ತಾನೆ ।
ಅಂತವಿಲ್ಲ ಸ್ವರೂಪವಿಲ್ಲ ವಿರೂಪನಲ್ಲಾ ।
ನಂತ ಮೂರುತಿ ಸಿರಿ ಹಯವದನ ॥೪॥

### ಝಂಪಿತಾಳ (ಶ್ಲೋಕ)

ತಥಾ ಸುರಾಣಾಂ ವಿಶದಾಸುರಾಣಾಂ ।
ರೂಪೇಣ ತೇಷಾಂ ಬಲವೀರ್ಯ ಚೋದಿತಾಂ ।
ವಂದೇ ಪರಂದೇವ ಗುಣೈಕ ವಿಷ್ಣೋ ।
ದೇವೇನ ನಾಗೇಂದ್ರ ಮತಃ ಪರೇಣ ॥೧॥

### ಪದ

ತಥ ಬ್ರಹ್ಮ ರುದ್ರಾದಿ ಜೀವರ ಸೃಜಿಸಿ ।
ತತ್ ಸ್ವರೂಪವ ಪೊಕ್ಕು ನಡಿಸಿದನು ಹಯವದನ ॥೫॥

### ಅಟ್ಟ

ಅದರಿಂದ ತತ್ವ ದೇವತೆಗಳೆಲ್ಲರು ಕೂಡಿ
ಮುದದಿ ಬ್ರಹ್ಮಾಂಡ ಮಾಡಲರಿಯದೇ ಪೋಗಿ ।

ಪದುಮನಾಭನ ತುತಿಸಲು ಅವರೊಳು ಪೊಕ್ಕು |
ಅದುಭೂತ ಬ್ರಹ್ಮಾಂಡವನು ರಚಿಸಿದನು |
ಅದರೊಳು ಬಂದು ಬಹುಕಾಲ ಪರಿಯಂತರ |
ಉದಕ ಶಾಯಿಯಾದ ಮುದದಿ ಹಯವದನ ||೬||

**ಆದಿತಾಳ**

ಶಿಷ್ಟರನು ಶುಭ ಪಥಕೆ ನಡೆಸಿ ವು |
ತ್ಕೃಷ್ಟ ಸುಗತಿಯನು ಕಡಿಯಲ್ಲೀವನು |
ದುಷ್ಟರನ್ನು ದುರ್ಗತಿ ಯೈದಿಸುವನು |
(ದುಷ್ಟರನ್ನು ದುಷ್ಪಥಕೆ ನಡೆಸಿ ಕಷ್ಟಗತಿಯ ಕಡೆಯಲೀವನು)
ಹೃಷ್ಟ ಮೂರುತಿ ಶ್ರೀ ಹಯವದನ ಈ |
ಸೃಷ್ಟಿಯೊಳು ಮಧ್ಯಮರನು ಮಾಡಿದ ಯೆ |
ಳ್ಳಷ್ಟು ವೈಷಮ್ಯವಿಲ್ಲ ಕಾಣಿರೊ ||೭||

**ಜತೆ**

ಇಂತೀ ತತ್ವ ಸೃಷ್ಟಿಯ ನೆನೆವ ಮಹತ್ಮರ |
ಸಂತತ ಪೊರೆವ ಶ್ರೀಕಾಂತ ಹಯವದನ ||೮||

## ೨) ಸುಳಾದಿ

ಶ್ರೀ ಪುರಂದರ ವಿಠಲ ವಿರಚಿತ

ರಾಗ : ಭೈರವಿ **ಧ್ರುವತಾಳ**

ಪ್ರಳಯೋದಕದಲ್ಲಿ ವಟಪತ್ರಶಯನ ನಾಗಿದ್ದ ಕಾಲದಲ್ಲಿ |
ಶ್ರೀದೇವಿಯರು ಶ್ರೀ ಭೂ ದುರ್ಗಾರೂಪದಿ ನಿಂದು |
ದಕ್ಷಣಾಯಜ್ಞ ನಾಮದಿಂದ ವೇದಗಳಿಂದ |
ಕೊಂಡಾಡುವ ಮುಖ್ಯಾಭಿಮಾನಿಯಾಗಿ |
ವರ್ಣಾತ್ಮಕದಿಂದ ನಿತ್ಯ ನಿಗಮಾರ್ಥಗಳಿಂದ |

ತುತಿಸುವಳು ಆ ಆ ಆ ತ್ರಿ ಪ್ರಕಾರ ।
ಮಿತಿಯೆಂದು ಬೊಮ್ಮನ ನೂರರೊಳೆಂಟು ಭಾಗ ।
ದೊಳೊಂದು ಭಾಗವಿಲಕುಮಿದೇವಿಗೆ ತಾ ಪ್ರೇರಿಸಲಾಗಿ ।
ತುತಿ ಸುವಂದದಿ ಪ್ರೇರಕನಾಗಿ ಪ್ರಾರ್ಥನೆ ಕೈಕೊಂಡು ।
ತಮ ತಮ್ಮ ಸಾಧನಗಳು ಮಾಡಿಕೊಂಬಲ್ಲಿ ।
ನಿರೂಪಿಸಿದನು ಪುರಂದರ ವಿಠ್ಠಲ ||೧||

**ಮಟ್ಟತಾಳ**

ನೂರು ವರುಷಯಿಂದಾಯಿ ತೆನಲು ।
ಉದಯ ಕಾಲದಿ ಚತುರ್ದಶ ಭುವನಾತ್ಮಕವಾದ ಕಮಲದಲ್ಲಿ ।
ಚತುರ್ಮುಖ ಬೊಮ್ಮನ ಪಡದೆ ನೀನು ।
ಒಮ್ಮೆ ಬಂದು ನಿನ್ನ ಪ್ರಳಯೋದಕವನು
ಥೆರೆಗಳ ನೋಡಿ ಯೇನು ಕಾಣದೆ ಪೊಕ್ಕು ನಾಳದಲ್ಲಿ
ಮತ್ತೊಮ್ಮೆ ಬರಲು ನಿನ್ನ ಘೋರವಾದ ।
ನಿನ್ನ ರೂಪವು ಕಂಡು ಅಂಜಿ ಮತ್ತೆ ।
ನಿನ್ನ (ನನ್ನ) ಮನವೇನೆಂದು ಬಂದದ ಕಂತು ಉದರ ಪ್ರವೇಶವಾದ ।
ಒಂದು ಭಯವು ಎರಡು ಅಜ್ಞಾನವು ।
ನಿನ್ನ ವಿಷಯದಲಿ ಉಂಟಾದಡಾಗಲಿ ।
ಕಂತು ಜನಕ ನೀನೆ ತಪತಪವೆನಲಾಗ ।
ತಪವನು ಮಾಡಿದ ಪುರಂದರ ವಿಠ್ಠಲನ್ನ ।
ಒಲಿಸಿ ಸೃಷ್ಟಿಯ ಮಾಡಿದ ಸರಸಿಜ ಸಂಭವನು ||೨||

**ರೂಪಕತಾಳ**

ಸೂಕ್ಷ್ಮರೂಪವಾದ ಯಿಪ್ಪತ್ತುನಾಲ್ಕು ತತ್ವಗಳ ಹೊರಗೆ ।
ಪಂಚಭೂತಗಳಿಗಭಿಮಾನಿಯಾದ ।
ಗಣೇಶ ಮೊದಲಾದ ಪಂಚಭೂತಗಳ ಸೃಜಿಸಿದನಾಗ ।
ಒಂದೊಂದು ವರ್ಣದ ಅಭಿಮಾನಿಗಳಿಂದ ।

ಮಹತತ್ವಕೀಶ ಅಹಂಕಾರಧೀಶನೆಂದು ।
ಬೊಮ್ಮಾಂಡವ ನಿರ್ಮಾಣವ ಮಾಡಿ
ಪೂರ್ವದಂತೆ ಆ ದೇವತೆಗಳ ಸೃಜಿಸಿ ।
ಬೊಮ್ಮಾಂಡವ ನಾಧಾರವಾಗಿ ತನ್ನ ।
ದೇಹವ ಬೆಳಸಿದ ಚತುರ್ಮುಖನಾಗ ।
ಮೂಲರೂಪದಿಂದ ಪುರಂದರ ವಿಠಲ ।
ವಿರಾಟದಲ್ಲಿ ವಾಸವಾಗಿ ನಿಂದ ಜಗದಾಧಾರ ||೩||

### ಝಂಪಿತಾಳ

ಹಳೆಯ ಬೊಮ್ಮಗ ಅಂದು ಅವ್ಯಾಕೃತದಲ್ಲಿ ವಿರಜೆಯಲಿ ।
ಮುಳುಗಿಸಿ ಉದರದಲ್ಲಿ ಪ್ರವೇಶ ಬೊಮ್ಮಾದಿ ।
ಗಳು ಯಿರಲು ಕೆಲವು ಲೋಕಂಗಳು ಸೃಷ್ಟಿಯಾದ ।
ಬಳಿಕ ಶ್ವೇತದ್ವೀಪದಲಿಯಿದ್ದ ಮೂರುತಿಯ ।
ದರುಶನದಿ ಮುಕುತರೆನೆಸಿಕೊಂಡು ।
ಐದಿದರು ಪುರಂದರ ವಿಠಲನ್ನ ಚರಣ ಕಮಲವ ||೪||

### ತ್ರಿವಿಡಿತಾಳ

ಗಣನೆಯಿಲ್ಲದ ಅಪಾರ ರೂಪಂಗಳಲ್ಲಿ ।
ಒಂದು ರೂಪದಿ ಚತುರ್ಮುಖನಿಗೆ ।
ಸರ್ವಾಂಗ ಸಾಯುಜ್ಯ ವಿತ್ತ ।
ಮಂಗಳಾಂಗನು ಸಾಯುಜ್ಯವಿತ್ತ ।
ಪುರಂದರ ವಿಠಲ ಭಕುತ ರೊಡೆಯ ನೀನು ।
ಭಕುತರಧಿಪ ನೀನು ಸಾಯುಜ್ಯವಿತ್ತ ||೫||

### ಅಟ್ಟತಾಳ

ಶ್ವೇತದ್ವೀಪವು ಸುತ್ತಿದ ಉದಕವು ।
ಬಯಲಾದ ಮೇಲೆ ಅಂಧ ತಮಸು ।

ಏಳುಕೋಟಿ ಪರಿಮಿತವಾದ ನರಕವು |
ಶುಕ್ಲ ಶೋಣಿತ ಮೂತ್ರ ಅಶುದ್ಧದಿಂದ !
ಮಿಶ್ರವಾದ ತಮುಸಿನೊಳು ಪೂರ್ಣ ಸಾಧನವನು |
ಮಾಡಿದ ಜನರಿಗೆ ಹರಿದ್ವೇಷ ಭಕ್ತರಲ್ಲಿ |
ಅನಾದಿ ಕಾಲದಿ ಮಾಡಿ ದುಃಖ ಭಾಜನರಾದ
ಪಾಪಿ ಜೀವರನು ವಾಯು ಭೃತ್ಯರಿಂದ ಪ್ರೇರಿಸಲಾಗ |
ಲಿಂಗಶರೀರವ ಹೋಳುಮಾಡಿ |
ಕೆಡಹಿತು ಅಂಧಂತಮುಸಿನೊಳು
ಕ್ರಿಮಿ ಪಕ್ಷಿಗಳಿಂದ ಭಾಧೆಯಲ್ಲದೆ ಮೇಲೆ |
ಪರ್ವತಂಗಳ ತಂದು ಬಿಸುಟುವರು
ಭೀಮನ ದೂತರಿಂದ ನೊಂದು |
ದುಃಖ ಭಾಜನರಾದ ಪಾಪಿಜೀವರಿಗೆ |
ಎಂತು ಮಾಡಿದ ದದರಂಥ ಫಲವೀವ |
ಕಂತುಜನಕ ಪುರಂದರ ವಿಠ್ಠಲರೇಯ ||೬||

ಆದಿತಾಳ

ಇಂತು ಪ್ರಕೃತಿ ಸಮ್ಮಂಧವಾದಡೆ
ಬೊಮ್ಮ ರುದ್ರಯಿಂದ್ರ ದಿಕ್ಪಾಲಕರು ಮತ್ತೆ |
ದೇವತೆಗಳು ಮನು ಮುನಿಗಳು |
ಶರೀರದಲಿ ವಾಸವಾಗಿ ಪುರಂದರ ವಿಠಲ |
ಸೃಷ್ಟಿ ಸ್ಥಿತಿಲಯಕೆ ಕಾರಣ ||೭||

ಜತೆ

ಕರ್ಮ ಜಾಂಡಗಳ ಮರ್ಮಗಳ ತಿಳಿದು ಫಲವೀವ
ನಿರ್ಮಲ ಚರಿತ್ರ ಪುರಂದರ ವಿಠಲ |೮||



## ೩) ಸುಳಾದಿ

ರಾಗ **ಧ್ರುವತಾಳ**

ಶ್ರೀಮನ್ನಾರಾಯಣ ದೇವ ನೀನು ಶ್ರೀಲ |
ಕುಮಿಯು ಕೂಡ ಸುಖಿಸುತಿದ್ದು |
ಶ್ರೀಮನ್ನಾರಾಯಣದೇವ ಶ್ರೀ ವಾಸುದೇ |
ವ ಮಾಯಾದೇವಿ ಶ್ರೀ ಸಂಕರುಷಣ ದೇವ ಜಯಾದೇವಿ |
ಶ್ರೀ ಪ್ರದ್ಯುಮ್ನ ದೇವ ಕೃತಿದೇವಿ |
ಶ್ರೀ ಅನಿರುದ್ಧ ದೇವ ಶಾಂತಿದೇವಿ |
ಶ್ರೀ ಮನ್ನಾರಾಯಣ ದೇವ ಶ್ರೀ ವಾಸುದೇವ |
ಮಾಯಾದೇವಿಯಲ್ಲಿ ಆ |
ಬೊಮ್ಮ ಕುಮಾರನ ಪಡೆದೆಯಲ್ಲಾ |
ಶ್ರೀ ಸಂಕರುಷಣ ದೇವ ಜಯದೇವಿಯಲ್ಲಿ |
ವಾಯು ಕುಮಾರನ ಪಡದೆಯಲ್ಲಾ |
ಶ್ರೀ ಪ್ರದ್ಯುಮ್ನ ದೇವ ಕೃತಿ ದೇವಿಯಲ್ಲಿ |
ವಾಣಿ ಭಾರತಿ ಯರ ಪಡದೆಯಲ್ಲ |
ಶ್ರೀ ಅನಿರುದ್ಧದೇವ ಶಾಂತಿದೇವಿಯಲ್ಲಿ
ಬೊಮ್ಮ ಸರಸ್ವತಿ–ಯರ ಪಡದೆಯಲ್ಲಾ |
ಆ ಕುವರರಿಗೆ ಈ ಕುವರಿಯರನೆ ಇತ್ತು |
ಮದುವಿಯ ಮಾಡಿದೆ ಪುರಂದರ ವಿಠ್ಠಲಾ ||೧||

**ಮಟ್ಟೆತಾಳ**

ವಾಸುದೇವ ನಿಮ್ಮೊಳು ನೀವೆ ನೀವೆ |
ಕೊಡಲುಳ್ಳವರಾದಿರಿ ನಿಮ್ಮೊಳು ನೀವೆ |
ಬೀಗರಾದಿರಿ ನಿಮ್ಮೊಳು ನೀವು ಬಿಜ್ಜಣರಾದಿರಿ |
ನಿಮ್ಮೊಳು ನೀವೇ ಬಿಜ್ಜಣಗರಿಗಳು |
ನಿಮ್ಮೊಳು ನೀವೆ ಪುರಂದರ ವಿಠಲ ||೨||

### ತ್ರಿವಿಡಿತಾಳ

ಬೊಮ್ಮ ಸರಸ್ವತಿ ಪಡದರಯ್ಯಾ ಶೇಷ ।
ಸುಪರ್ಣ ಗಿರೀಶ ಮಹೇಂದ್ರರ ।
ವಾಯು ಭಾರತಿ ಪಡದರಯ್ಯಾ ।
ಪುತ್ರ ಪೌತ್ರ ಪರಂಪರೆಯಾಗಿಪ್ಪೆ ಪುರಂದರ ವಿಠಲಾ ॥೩॥

### ರೂಪಕತಾಳ

ಆದಿ ಸೃಷ್ಟಿಯಲ್ಲಿ ಜಯವಿಜಯ ರುದಿಸಿದರು ।
ಅವರಿಗಿಂದ ಅಮರರೆ ಅಧಿಕರಯ್ಯಾ ಅಯ್ಯಾ ।
ಅವರಂತರಂತರದಲ್ಲಿ ಅವರ ನೋಡಯ್ಯಾ ।
ತಾರತಮ್ಯ ಅನಾದಿ ಸಿದ್ಧವಯ್ಯಾ ।
ಪುರಂದರ ವಿಠಲನ ಸಂತತಿಯ ನೋಡಯ್ಯಾ ॥೪॥

### ಝಂಪಿತಾಳ

ಸಿರಿ ಚತುರ್ಮುಖ ಪಂಚ ಮುಖಾದಿ ।
ಸುರರು ಮನು ಮುನಿ ಮನುಜೋತ್ತಮರು ।
ತಾರತಮ್ಯ ಯುಕ್ತರು ಪುರಂದರ ವಿಠಲನ್ನ ।
ಚರಣ ಸೇವಕರು ಸಾ ದೇವರು ॥೫॥

### ಅಟ್ಟತಾಳ

ನಿತ್ಯ ಪತ್ನಿಭಾವ ಲಕುಮಿಗಯ್ಯಾ ।
ನಿತ್ಯ ಪುತ್ರಭಾವ ಬೊಮ್ಮ ಪ್ರಾಣರಿಗಯ್ಯಾ ।
ನಿತ್ಯ ಪೌತ್ರಭಾವ ವೈನತೇಯ ಶೇಷ ಗಿರಿಶಗಯ್ಯಾ ।
ನಿತ್ಯ ಜಾರಭಾವ ಅಪ್ಸರ ಸ್ತ್ರೀಯರಿಗೆ ।
ನಿತ್ಯ ಶ್ರೀ ಪುರಂದರ ವಿಠ್ಠಲ ರೇಯಾ ॥೬॥

### ಆದಿತಾಳ

ಸತ್ಯ ಸ್ವರೂಪನೆ ಸತ್ಯನೆ ಮನ್ಯೆ ।
ಸತ್ಯ ಸಂಕಲ್ಪನೆ ಸತ್ಯಕಾಮನೆ ।
ಸತ್ಯ ಸದ್ಗುಣಾಢ್ಯನೆ ಸತ್ಯ ಕರ್ಮನೆ
ಸತ್ಯ ಶ್ರೀ ಪುರಂದರ ವಿಠಲ ॥೭॥

### ಜತೆ

ಮನ ವಚನಗಳಲ್ಲಿ ಕಾಯಾ ಕರ್ಮಗಳಲ್ಲಿ ।
ನೀನೇ ನೀನೇ ಪುರಂದರ ವಿಠ್ಠಲಾ ॥೮॥



## ೪) ಸುಳಾದಿ

ರಾಗ : ಸೌರಾಷ್ಟ್ರ ಧ್ರುವತಾಳ

ನಿನ್ನ ಬೊಮ್ಮ ಮೂರುತಿಗೆ ನಮೊ ನಮೊ ।
ನಿನ್ನ ರುದ್ರ ಮೂರುತಿಗೆ ನಮೋ ನಮೊ ।
ನಿನ್ನ ಇಂದ್ರ ಮೂರುತಿಗೆ ನಮೊ ನಮೊ ।
ನಿನ್ನ ಚಂದ್ರ ಮೂರುತಿಗೆ ನಮೊ ನಮೊ ।
ನಿನ್ನ ಸೂರ್ಯ ಮೂರುತಿಗೆ ನಮೊ ನಮೊ ।
ನಿನ್ನ ಅಗ್ನಿ ಮೂರುತಿಗೆ ನಮೊ ನಮೊ ।
ನಿನ್ನ ಸ್ಥಾವರ ಮೂರುತಿಗೆ ನಮೊ ನಮೊ ।
ನಿನ್ನ ಜಂಗಮ ಮೂರುತಿಗೆ ನಮೊ ನಮೊ ।
ನಿನ್ನ ಪುರಂದರ ವಿಠ್ಠಲ ನಮೊ ನಮೊ ॥೧॥

### ಮಟ್ಟತಾಳ

ಬೊಮ್ಮಾಂಡವೆ ಮಂಟಪ ಜ್ಯೋತಿ-ಶ್ಚಕ್ರವೆ ದೀಪ ।
ಮಹಮೇರು ಸಿಂಹಾಸನ ಮಂದಾಕಿನಿ ಮಜ್ಜನ ।

ಮಂದರ ಪಾರಿಜಾತ ಮಾಲೆ ।
ಪುರಂದರ ವಿಠ್ಠಲಗೆ ಅಮೃತವೆ ನೈವೇದ್ಯ ॥೨॥

### ತ್ರಿವಿಡಿ ತಾಳ

ಆಲಯಾಂಬು ರಾಸಿಯಲ್ಲಿ ಆಲದೆಲೆ ಪೊಂದೊಟ್ಟಿಲು ।
ಅಂಗುಟವೆ ಜೋಕಾಯಿ ಬಾಲ ಮುಕುಂದ ಶ್ರೀ ।
ಪುರಂದರ ವಿಠ್ಠಲಗ ಆಲಯಾಂಬು ॥೩॥

### ಅಟ್ಟತಾಳ

ಜಗವ ಪುಟ್ಟಿಸಿ ನೀನು ಜಗದೊಳಗಿರುವೆ ।
ಜಗದೊಳ ಹೊರಗೆ ನೀನೆ ಪೂರ್ಣ ।
ಜಗದನ್ಯನಾಗಿ ಜಗವ ಸಂಹರಿಸುವಿ ।
ಜಗದೊಳು ಹೊರಗೆ ನೀನೆ ಸ್ವಾತಂತ್ರ ।
ಜಗದೇಕ ವಸ್ತು ಪುರಂದರ ವಿಠಲ ॥೪॥

### ಆದಿತಾಳ

ಬೊಮ್ಮಾಂಡಕಟಹ ಪುಟ ಚಂಡೊ ಪುಟ ಚಂಡೊ ।
ಪುರಂದರ ವಿಠಲಗೆ ಬೊಮ್ಮಾಂಡಕಟಹ ॥೫॥

### ಜತೆ

ಜಯ ಜಯ ಜನಾರ್ದನ ಪುರಂದರ ವಿಠ್ಠಲ ।
ಜಯ ಜಯ ಜಯ ಜಯ ಬಾಢವೋಹನ್ನ ॥೬॥



## ೫) ಸುಳಾದಿ

ರಾಗ ಧ್ರುವತಾಳ

ತ್ರಿಶೂಲ ಡಮರುಗ ಭಸಿತ ರುದ್ರಾಕ್ಷಿಯು ।
ಪಶು ವಾಹನನಾದ ದೊಂದೆ ಮೂರುತಿ ।

ನಸುಲೊಳು ಸಿರಿನಾಮ ಶಂಖ ಚಕ್ರಗದೆ ।
ಬಿಸಿಜ ಮಿತ್ರನಾದದೊಂದೇ ಮೂರುತಿಯು ।
ಕುಶಲದಿ ಜಪಮಣಿ ಮಾಲೆ ಚತುರ್ಮುಖ ।
ವಸುಧೀಯ ಸೃಜಿಸುವದೊಂದೆ ಮೂರುತಿ ।
ಎಸೆವನಂತ ಕೋಟಿವೇದ ವರ್ಣಿಸಲು ಸಂ ।
ತಸದಿ ನೋಡು ತಿಹುದೊಂದೆ ಮೂರುತಿ ।
ಸನ್ಮೋಹನ ಏಕಮೇವ ದ್ವಿತೀಯ ।
ಎಂಬ ನಿರ್ಮಲ ವಾಗಿಹದೊಂದೆ ಮೂರುತಿ ।
ಸುಮ್ಮನಸರಿಗೊಮ್ಮೆ ಸುಳುವು ತೋರುವ ಪಾರಾ ।
ಬೊಮ್ಮನೆಂದು ಕರೆಸುವದೊಂದೆ ಮೂರುತಿಯೂ ।
ನಮ್ಮ ದೇವ ನಿಮ್ಮ ದೇವರೆಂದು ಜಂಬವಮಾಡೆ ।
ಹಮ್ಮಿಲಿಂದ ನೊಡು ತಿಹದೊಂದೆ ಮೂರುತಿಯೂ ।
ಅಮ್ಮಮ್ಮ ಎನ್ನುವ ಕರವ ಪಿಡಿದೆನೆಂದಾಡುವ ।
ಒಮ್ಮೊಮ್ಮೆ ಕುರುವಿಡಲು ಒಂದೆಯಾಗಿ ತೋರುವ ।
ಪುರಂದರ ವಿಠಲನ್ನದೊಂದು ಮೂರುತಿಯೂ ॥೧॥

### ಮಟ್ಟತಾಳ

ಸತ್ವ ರಜೋತಮೊಗುಣದ ಸಕಲ ಮೂರುತಿ ।
ಭೃತ್ಯರಂಗ ಸಂಗದಿಂದಲ್ಲಿ ನಲಿವ ಮೂರುತಿ ।
ತತ್ವ ಪತಿಗಳೊಡನೆ ಇಪ್ಪದಿವ್ಯ ಮೂರುತಿ ।
ಸತ್ಯ ಪುರಂದರ ವಿಠ್ಠಲನು ಒಂದೇ ಮೂರುತಿ ॥೨॥

### ಝಂಪೆತಾಳ

ಸಾಸಿರ ನಾಮಕ್ಕೆ ಸಾಸಿರ ಮೂರುತಿ ।
ವಾಸುಕಿ ಶಯನನಾದ ಅನಂತ ಮೂರುತಿ ।
ಸಾಸಿರನಾಮ ದಿಂದೊಪ್ಪುವ ಮೂರುತಿ ।

ಶಾಶ್ವಿತ ನೆನೆನೆವರ ಸಲಹುವ ಮೂರುತಿ |
ಯಶೋದೆ (ದೆ) ವೊಳೆವುಂಡ ನಮ್ಮ ಪುರಂದರ ವಿಠಲ |
ಅಸಮ ಕಾರುಣ್ಯ ಸಾಗರ ಮೂರುತಿ ||೩||

ತ್ರಿವಿಡಿತಾಳ

ಅನಂತ ಮುಕುಟ ಅನಂತ ಶಿರಸ ಅನಂತ ಚಕ್ಷು ।
ಅನಂತ ಕರಣ ಅನಂತ ನಾಶಿಕ ಅನಂತ ಕದಪು |
ಅನಂತ ಓಷ್ಟ ಅನಂತ ವದನ ಅನಂತ |
ಅನಂತ ಜಿಹ್ವೆ ಅನಂತ ಕಂಠ ಅನಂತ ಬಾಹು |
ಅನಂತ ವಕ್ಷ ಅನಂತ ಶ್ರೀ ತುಲಸಿ ವೈಜಯಂತಿ
ಮಾಲೆಯಿಂದೊಪ್ಪುವ |
ಅನಂತನಾಭಿ ಅನಂತ ಉದರ ಅನಂತ ತ್ರಿವಳಿ |
ಅನಂತ ಕಟಿಯು ಅನಂತ ಜಘನ ಅನಂತ ಊರು |
ಅನಂತ ಜಾನು ಅನಂತ ಜಂಘೆ ಅನಂತ ಗುಲ್ಫ ಅನಂತ ಪೆಡೆ |
ಅನಂತ ಚರಣ ಅನಂತ ನಖವು
ಅನಂತ ಜಗಗಳ ಒಳಗೆ ಹೊರಗೆ ಇಪ್ಪಾಸಾನಿಧ್ಯ |
ಪುರಂದರ ವಿಠ್ಠಲನೊಬ್ಬನೆ ಕಾಣಿರೊ ||೪||

ರೂಪಕತಾಳ

ಅಣು ಮಹತ್ತಾಗಿ ತೋರುವ ಮೂರುತಿ |
ತೃಣ ಕಾಷ್ಟಗಳಲ್ಲಿ ಪರಿಪೂರ್ಣ ಮೂರುತಿ |
ಗಣನೆ ಇಲ್ಲದ ಮೂರ್ತಿ ಘನಗರುಡ ವಾಹನ ಮೂರುತಿ |
ಸನಕಾದಿಗಳಲ್ಲಿ ಸಾನಿಧ್ಯ ಮೂರುತಿ |
ಮನುಜೋತ್ತಮರಲ್ಲಿ ಮಿನುಗುವ ಮೂರುತಿ
ಎನ್ನ ಸ್ವಾಮಿ ಪುರಂದರ ವಿಠ್ಠಲ ಮೂರುತಿ ||೫||

### ಅಟ್ಟತಾಳ

ಬೊಮ್ಮಗೆ ಸಿರಿರಂಗ ಮೂರುತಿ ।
ರುದ್ರಗೆ ನರಸಿಂಗ ಮೂರುತಿ ।
ಇಂದ್ರಗೆ ಉಪೇಂದ್ರ ಮೂರುತಿ ।
ಚಂದ್ರಗೆ ದಧಿವಾಮನ ಮೂರುತಿ ।
ಸೂರ್ಯಗೆ ನಾರಾಯಣ ಮೂರುತಿ ।
ಅಗ್ನಿಗೆ ಪರಶುರಾಮ ಮೂರುತಿ ।
ಸಕಲ ಬೊಮ್ಮಾಂಡ ಕೋಟಿಗಳಿಗೆ ಕಾಲ
ಪುರುಷ ಶ್ರೀ ವಿಷ್ಣು ಮೂರುತಿ ಎಮಗೆ ಮೂರುತಿ
ಪರಿ ಪೂರ್ಣ ಸಿರಿ ಪುರಂದರ ವಿಠ್ಠಲ ಮೂರುತಿ ||೬||

### ಆದಿತಾಳ

ಏಕಾನೇಕ ಮೂರುತಿ ಲೋಕವೆಲ್ಲ ಈತನ ಮೂರುತಿ ।
ಗೋಪಾಳ ಗೋವಳ ಗೋವಿಂದ ಮೂರುತಿ ।
ಗೋಕುಲ ಗೋಪಾಲರನ್ನ ಕಾಯ್ದ ಮೂರುತಿ ।
ಏಕಮೇವಾ ಪುರಂದರ ವಿಠ್ಠಲನೆಂಬೊ ಮೂರುತಿ ಏಕಾನೇಕ ಮೂರುತಿ ||೭||

### ಜತೆ

ಅನಂತ ಮೂರುತಿ ಅನಂತಕೀರುತಿ ।
ಅನಂತ ನಾಮ ಪುರಂದರ ವಿಠಲ ಮೂರುತಿ ||೮||

—●—

## ೬) ಸುಳಾದಿ

## ಹರಿ ಸ್ವಾತಂತ್ರ ಗಾಯತ್ರಿ

ರಾಗ ಸೌರಾಷ್ಟ್ರ ಧ್ರುವತಾಳ

ನೀನೆ ಮುಖ್ಯಕಾರಣ ।
ಅಕಾರಣರೊ ಬೊಮ್ಮಾದಿಗಳು ।
ನೀನೇವೇ ಕರ್ತು ಅಕರ್ತುಗಳವರು ।
ಸರ್ವ ಸ್ವತಂತ್ರನೀನು ಅಸ್ವತಂತ್ರರವರು ।
ಮೂಲ ನೀನು ಮಧ್ಯಮರವರು ।
ನಿತ್ಯನೆಂದೆನಿಪ ನೀನು ಲಯರಾಗುವರವರು ।
ಭೋಕ್ತನೆಂದೆನಿಸುವೆ ಸರ್ವರಂತ ರಾತ್ಮಕನಾಗಿ ।
ಸ್ವೀಕರಿಸುವ ಶಕ್ತಿ ನಿನ್ನಾಧಿನವಯ್ಯಾ ।
ಅನಾದಿ ಕಾಲ ಕರ್ಮಗುಣಗಳನುಸರಿಸಿ ।
ಫಲಗಳನುಣಿಸುವೆ ಪುರಂದರ ವಿಠ್ಠಲಾ ॥೧॥

### ಮಟ್ಟತಾಳ

ತನ್ನಿಂದೊಂದೆರಡು ಜ್ಞಾನ ಗುಣಧಿ ಕರ ।
ಮೊದಲು ಮಾಡಿಕೊಂಡಬೊಮ್ಮನ ಪರಿಯಂತ ।
ತಾರತಮ್ಯ ಪಂಚಭೇದ ಮಾರ್ಗವರಿತು ।
ನವವಿಧ ಸದ್ಭಕ್ತಿಯುಕ್ತನಾಗಿ ನಿತ್ಯ ।
ಜನನ ಮರಣ ದೂರ ಪುರಂದರ ವಿಠ್ಠಲನ್ನ ।
ಗುಣರೂಪ ಕ್ರಿಯವನ್ನೇ ತಿಳಿಯಬೇಕು ॥೨॥

### ತ್ರಿವಿಡಿತಾಳ

ಪುರುಷ ಸೂಕ್ತವೇ ಮೊದಲಾದ ವೇದಗಳಿಂದ ।
ಮತ್ತೆ ಕೆಲವು ಉಪನಿಷದ್ವೇದ್ಯನು ನೀನೇ।

ಮಹಾಭಾರತ ಪುರಾಣಗಳಲಿದ್ದ ರೂಪ |
ಗುಣ ಕ್ರಿಯಾಗಳು ಸಾರ್ವಭೌಮ ಬೊಮ್ಮಬಲ್ಲ |
ಆತನಿಂದಲಿ ವಾಣಿ ಭಾರತೀರ್ಬಲ್ಲರು |
ವಾಣಿಯಿಂದಲಿ ಮಹಾದೇವ ತಾಬಲ್ಲನು |
ರುದ್ರನಿಂದಲ್ಲಿ ಉಮಾದೇವಿಯು ಬಲ್ಲಳು |
ಉಮೆಯಿಂದ ಇಂದ್ರ ಕಾಮರು ಬಲ್ಲರು |
ಸಕಲ ದೇವತೆಗಳು ಪುರಂದರ ವಿಠ್ಠಲನ |
ಬಲ್ಲರರಿಯರೋ ಸಾಕಲ್ಯದಿಂದ ||೩||

### ಅಟ್ಟತಾಳ

ಓಂಕಾರ ಪ್ರತಿ ಪಾದ್ಯ ವ್ಯಾಹೃತಿ ಯೊಳಗಿದ್ದು |
ಗಾಯತ್ರಿ ಎನಿಸುವೆ ಪುರುಷಸೂಕ್ತಮೇಯ |
ಏಕೋತ್ತರ ಪಂಚಾಶದ್ವರಣಗಳಲ್ಲಿ |
ವರಣ ಮಾನಿಗಳಿಂದ ವರಣೀಯನಾಗಿಪ್ಪೆ |
ವರ ಕಲ್ಪ ಕಲ್ಪಕ್ಕು ವರದ ಪುರಂದರ ವಿಠ್ಠಲ |
ವಾಹೃತಿ ಯೊಳಗಿದ್ದು ಗಾಯತ್ರಿ ಎನಿಸುವೆ ||೪||

### ಆದಿತಾಳ

ಓಂ ಅಶೇಷಗುಣಧಾರ ಇತಿ ನಾರಾಯಣಪ್ಯ ಸೋ
ಪೂರ್ಣೋ ಭೂತಿ ವರೋನಂತಗುಣೋ |
ಸುಖೋ ಯದ್ವಾವ್ಯಹೃತಿರಿತಾ |
ಗುಣೈಸ್ತತಃ ಪ್ರಸವಿತಾ |
ವರಣೀಯಾನ್ ಗುಣೋನ್ನತೆ |
ಭಾರತಿ ಜ್ಞಾನರೂಪತ್ವಾತ್ |
ಭರ್ಗೋಧೇಯೊಽಖಿಳೈರ್ಜನೈಃ |
ಪ್ರೇರಕಃಽಶೇಷ ಬುದ್ಧಿನಾಂ |

ಸಗಾಯತ್ರ್ಯರ್ಥ ಈರಿತಃ ।
ಪುರಂದರವಿಠ್ಠಲ ಸರ್ವೋತ್ತಮ ಕಾಣಿರೋ ॥೫॥

ಜತೆ

ನಿನ್ನ ಮಹಿಮೆಗಳ ನೀನೆ ಬಲ್ಲೆಲ್ಲದೆ ।
ಅನ್ಯರೇನು ಬಲ್ಲರು ಪುರಂದರ ವಿಠಲಾ ॥೬॥

## ೭) ಸುಳಾದಿ

## ಸಾಧನ ವಿ॥ ಪ್ರಾರ್ಥನಾ

ರಾಗ ಧ್ರುವತಾಳ

ಎಂಭತ್ತುನಾಲ್ಕು ಲಕ್ಷಯೋನಿ ಮುಖಂಗಳಲ್ಲಿ ಪುಟ್ಟಿ ಪುಟ್ಟಿ ।
ಹೊಂದಿ ಹೊಂದಿ ಬಳಲಿದೆನಯ್ಯ ನಾನು ।
ಸುಕೃತ ದುಷ್ಕೃತವೆಂಬೊ ಕರ್ಮಕೋಟಲೆಯಿಂದ ।
ತಾಪತ್ರಯದಿ ಬೆಂದು ಬಳಲಿದೆನಯ್ಯಾ ನಾನು ।
ಇಪ್ಪತ್ತೆಂಟುಕೋಟಿ ನಾಯಕ ನರಕಂಗಳಲಿ ಕಾಲನವರಿಗೆ ಸಿಕ್ಕಿ ।
ಕಡುನೊಂದೆನಯ್ಯಾ ನಾನು ।
ಎಂದಿಗೆ ಮಾನುಷ ಜನ್ಮ ದೊರಕೊದಯ್ಯ ಹರಿ ಹರಿ
ಎಂದಿಗೆ ನಿನ್ನವರಂಘ್ರಿ ದೊರಕೋದೆ ।
ಇನ್ನು ನಿನ್ನ ಬಿಟ್ಟು ಬಳಲಲಾರೆನಯ್ಯಾ ನಾನು ।
ಮೊರೆ ಹೊಕ್ಕೆ ಪುರಂದರ ವಿಠ್ಠಲರಾಯ ದಮ್ಮಯ್ಯಾ ॥೧॥

ಮಟ್ಟತಾಳ

ಅನಂತಾನಂತ ದೇವರ್ಕ್ಯದರೆ ಅನಂತಾನಂತ ಕರ್ಮಗಳ್ಳೈದರೆ ।
ಅನಂತಾನಂತ ಪರಿಯಲಿ ಅವರಾಡಿಸಿ ಉಡಿಸಿನೋಡನೋಡಲಾಗದೆ ।
ಅನಂತಾನಂತ ಪರಿಯಲಿ ಎನ್ನೊಬ್ಬನ ಸಂಸಾರಿಯು ಮಾಡದಿದ್ದರೆ
ಕಡಿಮೆಯೆ ನಿನಗೆ ಪುರಂದರ ವಿಠ್ಠಲ ಅನಂತಾನಂತಾ ॥೨॥

### ಅಟ್ಟತಾಳ

ಸಂಸಾರಿಗೆ ಮನಸೋತು ಮೆಚ್ಚಿದ ಹೆಣ್ಣು |
ಸಂಸಾರವನೆಂದು ಸಂತ ವಿಟ್ಟರಯ್ಯಾ |
ಕಂಸಾರಿಗೆ ಮನಸೋತ ಮಾಧವಿಯರು |
ಸಂಸಾರವ ನೆಂತು ಸಂತವಿಟ್ಟರಯ್ಯ |
ಹಂಸ ಮೂರುತಿ ಪುರಂದರ ವಿಠ್ಠಲನಲ್ಲಿ |
ಹಂಸಿ ಹತ್ತಿದ ಬಳಿಕನ್ಯವ ನರಿಯರು ||೩||

### ಝಂಪೆತಾಳ

ಹರಿಯ ಭಕುತಿ ನರಹರಿಯ ಭಕುತಿ |
ಸಿರಿ ಹರಿಯ ಭಕುತಿ ಎಂಬ ಸುಧೆಯ ಸಾಗರವಿರೆ |
ಅರಿವರೆ ವಿಷಯ ವೆಂಬರೆ |
ಕೊಳಚೆಯ ನೀರಾ ಎಲೆ ಎಲೆ ಮನವೆ |
ನಳಿನ ನಾಭನ ನೆನೆ ಎಲೆ ಎಲೆ ಮನವೆ |
ಜಲರುಹಾಕ್ಷನ ನೆನೆ ಮರಳಿ ಮರಳಿ ಬಹ ಸಂಸಾರವ |
ಗೆಲುವರೆ ಪುರಂದರ ವಿಠ್ಠಲನ ಸ್ನೇಹ ಶಿಷ್ಯರನೆನೆ | ||೪||

### ಏಕತಾಳ

ಸಾದೃಷ್ಟ ದೈವವೆಂಬ ಸಾಸಿರ ಮಂದಿದ್ದಲ |
ವಾದಿಗಳ ಕಾಲ್ಪಿಡಿದು ಬದುಕಿರಯ್ಯಾ |
ವಿಠ್ಠಲನೆಂಬಂತೆ ಕಾರಣ ಕಾಲ್ಪಿಡಿದು ಬದುಕಿರಯ್ಯಾ |
ಸೃಷ್ಟಿ ಸ್ಥಿತಿ ಲಯಕೆ ಪುರಂದರವಿಠ್ಠಲ ನೊಬ್ಬನೆ ಕರ್ತೃಕಾಣಿರೊ ||೫||

### ಜತೆ

ಅಹಂಕಾರ ಮಮಕಾರ ಮಮತೆ ಉಂಬಾ |
ದಿಂದಿ ದಿಂದಿ ದಿಂದಿ ಪುರಂದರ ವಿಠ್ಠಲ ||೬||

## ೮) ಸುಳಾದಿ

## ಆರೋಹಣ ತಾರತಮ್ಯ

ರಾಗ : ಗೌಳ ಧ್ರುವತಾಳ

ವಿಷ್ಣು ಭಕ್ತಿಯೋಗ್ಯ ತಾರತಮ್ಯಂಗಳು ।
ಸ್ಥಾವರ ಜಂಗಮರ ಮೊದಲು ಮಾಡಿ ।
ಅವರಿಂದ ಸರ್ವಗುಣಾಧಿಕಾರಿಗಳು ಅವರಿಂದ ।
ದೇವ ಗಂಧರ್ವರು ಶತಗುಣಾಧಿಕರು ।
ಅವರಿಂದ ನೂರು ಎಂಟುಮುಂದಿ ಅಲ್ಲದೆ ।
ನೂರು ಕೋಟಿ ಋಷಿಗಳು ನೂರು ಗುಣಾಧಿಕರು ।
ಅವರಿಂದ ಚಿರಾಖ್ಯನಾಮ ಪಿತೃಗಳು ಐವತ್ತು ಗುಣದಿಂದಧಿಕರು ।
ಅವರಿಂದ ಕೃಷ್ಣ ಭಕ್ತರಾದ ಅಪ್ಸರ ಸ್ತ್ರೀಯರು ಎರಡು ಗುಣಾಧಿಕರು ।
ಅವರಿಂದ ಅಜಾನಜ ದೇವತೆಯರು ಓಜಸರು ಎಂಭತ್ತು
ಋಷಿಗಳು ಮತ್ತು ಗಂಧರ್ವರು ತುಂಬರರು ಶತ ।
ಊರ್ವಶಿ ಮೊದಲಾದ ಶತಸ್ಥರು ಅಜಾನಜ ಎಂಬವರು ।
ಮತ್ತೆ ಅಗ್ನಿ ಪುತ್ರರಾದ ಕ್ರತ್ವಾದಿಗಳು ಅಜಾನಜ ದೇವ ಸಮರು ।
ಇವರು ಹದಿನಾರು ಸಹಸ್ರನೂರುಮುಂದಿ
ಸ್ತ್ರೀಯರು ಸರಿ ಗುರು ಪುರಂದರ ವಿಠ್ಠಲ ॥೧॥

### ಮಟ್ಟತಾಳ

ಕಶ್ಯಪರುಗಳು ಯಶೋದಾದೇವಿ ಧರಾದೇವಿ
ಅಜಾನಜ ದೇವತೆಯರಿಂದಧಿಕರು ।
ಅದಿತಿ ದೇವಿಕಿಂತ ಕಶ್ಯಪನುತ್ತಮನು ।
ಅಜಾನಜರಿಂದ ಪುಷ್ಕರ ಕರ್ಮಪಾಲಕನು ಅಧಿಕನು ।
ಅವರಿಂದ ಶನೈಶ್ಚರನಧಿಕ ।

ಉಷಾದೇವಿ ದಶಗುಣಧಿಕಳು |
ಆಕೆಯಿಂದ ಬುಧನಧಿಕನು |
ಬುಧನಿಂದ ಸ್ವಾಹಾದೇವಿ ದಶಗುಣಧಿಕಳು |
ಸ್ವಾಹಾದೇವಿಯಿಂದ ಕೆಲವು ದೇವತೆಗಳಧಿಕರು |
ಅವರಿಂದ ಅನಿರುದ್ಧನ ಸ್ತ್ರಿ ಉಷಾಗಂಗಾ |
ಶಾಮಲಾ ಸಂಜ್ಞಾದೇವಿ ರೋಹಿಣಿ |
ಪರ್ಜನ್ಯ ಇವರು ದ್ವಿಗುಣಾಧಿಕರು |
ಗುರು ಪುರಂದರ ವಿಠ್ಠಲನೇಮಿಸಿದಾ ||೨||

## ಆದಿತಾಳ

ಇವರಿಂದ ಕರ್ಮಜ ದೇವತೆಗಳಧಿಕರು |
ಅವರಿಂದ ಕಾರ್ತವೀರ್ಯ ಶಶಿಬಿಂದು ಮಾಂಧಾತಾ |
ಭರತ ಪ್ರಿಯವ್ರತ ಪರಿಕ್ಷಿತ ಮೊದಲಾದ ಶತಪುಣ್ಯಶ್ಲೋಕರು |
ಬಲಿಚಕ್ರವರ್ತಿ ಮೊದಲಾದ ಸಪ್ತ ಇಂದ್ರರು |
ಮುನಿಗಳು ಹನ್ನೊಂದು ಉಚತ್ಥ್ಯ ಚವನ ಋಷಿಯು
ಗಂಧರ್ವರು ಎಂಟು ಪಿತೃಗಳು ಸಪ್ತ |
ಪ್ರಲ್ಹಾದ ಪಾವಕನು | ಇವರು ಕರ್ಮಜ ದೇವತೆ ಸಮರು |
ಅಜಾನಜ ದೇವತೆಯಿಂದ ದಶಗುಣಾಧಿಕರ
ಮಾಡಿದ ಗುರು ಪುರಂದರ ವಿಠ್ಠಲರೇಯಾ ||೩||

## ರೂಪಕತಾಳ

ರುದ್ರರೇಕಾದಶ ವಸುಗಳೆಂಟು ದ್ವಾದಶಾದಿತ್ಯ ಮರುದ್ಗಣರು
ಋಭುಗಣತ್ರಯ ಒಂದು ಋಭು ಒಬ್ಬವಿಶ್ವದೇವ |
ಅಶ್ವಿನಿ ದೇವರಿಬ್ಬರು ಪೃಥ್ವಿಪುತ್ರರು |
ಮುವ್ವರು ಶತಫರೊಳು ಇಂದ್ರ ವಿಶ್ವಾಮಿತ್ರ |

ವರುಣ ರುದ್ರರೊಳು ಸದಾಶಿವನು ।
ವಸುಗಳೊಳು ಅಗ್ನಿಯೊಬ್ಬ ಮರುತ ।
ಅಹಂಕಾರಿಕ ಪ್ರಾಣ ಪ್ರವಹ ಮೂವರು ।
ನವ ದೇವೋತ್ತಮರು ನವಕೋಟಿ ದೇವತೆಗಳು ।
ಮರುತಗಳೊಳು ಪ್ರಾಣಪಾನ ವ್ಯಾನೋದಾನ ಸಮಾನ ವಾಯು ಸ್ವಲ್ಪಧಿಕ ।
ಗುರು ಪುರಂದರ ವಿಠ್ಠಲನ ಪರಮ ಪ್ರಿಯರು ॥೪॥

## ಝಂಪಿತಾಳ

ಇವರಿಂದ ವಿಷ್ವಕ್ಸೇನ ಧನಪ ಗಣೇಶಾಧಿಕರು ।
ಅವರಿಂದ ತಾರಾದೇವಿ ಮಿತ್ರನಿಋುಋುತಿ ಯಮ ।
ಪರ್ಜನ್ಯಕ್ಕಿಂತ ಎರಡು ಗುಣಾಧಿಕರು ।
ಅವರಿಂದ ಮರೀಚಿ ಅತ್ರಿ ಅಂಗೀರಸ ಪುಲಸ್ತ್ಯ ಪುಲಹಕ್ರತು ವಶಿಷ್ಟ ।
ವಿಶ್ವಾಮಿತ್ರ ವೈವಸ್ವತ ಒಂಬತ್ತು ಅಧಿಕರು ।
ಇವರಿಂದ ಅಗ್ನಿ ಭೃಗು ಪ್ರಸೂತ್ಯುತ್ತಮ ಮಿತ್ರಗಳು ।
ನೋಡಲು ಎರಡು ಗುಣಾಧಿಕರು ।
ಇವರಿಂದ ನಾರದ ಉತ್ತಮ ವರುಣೋತ್ತಮ ।
ಅಗ್ನಿದೆಶೆಯಿಂದ ವರುಣ ನೋಪಾದಿ ।
ಅಧಿಕರು ಗುರು ಪುರಂದರ ವಿಠ್ಠಲನ ಭಕ್ತರು ॥೫॥

## ತ್ರಿಪುಟೆತಾಳ

ಯಮ ಚಂದ್ರ ಸೂರ್ಯ ಶತರೂಪಾದೇವಿ ।
ಕ್ರಮದಿಂ ಅರ್ಧಾನರ್ಧ ಗುಣಾಧಿಕರು ।
ಅವರಿಂದ ಸನಕಾದಿಗಳು ಉತ್ತಮರು ।
ಅವರಿಂದ ಪ್ರವಹ ಉತ್ತಮ ।
ಚಂದ್ರನಿಂದ ದ್ವಿಗುಣಾಧಿಕನು ।

ಪ್ರವಹನಿಂದ ಸ್ವಾಯಂಭು ದಕ್ಷ ಗುರುಶಚಿರತಿ ಅನಿರುದ್ಧರು |
ಇವರು ಆರುಮಂದಿ ಪಂಚ ಗುಣಾಧಿಕರು |
ಅವರಿಂದ ಆಹಂಕಾರಿಕ ಪ್ರಾಣ ದಶಗುಣಾಧಿಕರು |
ಪ್ರವರ ಕಾಮೇಂದ್ರರು ಹತ್ತು ಗುಣಾಧಿಕರು |
ಇವರಿಂದ ಸೌಪರ್ಣಿ ವಾರುಣಿ ಪಾರ್ವತಿಯರು ದಶಗುಣಾಧಿಕರು
ನೀಲಾ ಮಿತ್ರ ವಿಂದೆ ಕಾಳಿಂದಿ ಲಕ್ಷಣೆ ಜಾಂಬುವತಿ ದ್ವಿಗುಣಾಧಿಕರು |
ನೀಲಾದಿಗಳಿಂದ ಜಾಂಬವತಿ ಅಧಿಕಳು |
ಉಮೆಯಿಂದ ಗರುಡ ಶೇಷ ರುದ್ರರು ಹತ್ತು ಗುಣಾಧಿಕರು |
ಅವರಿಂದ ವಾಣಿ ಭಾರತಿ ಶತ ಗುಣಾಧಿಕರು |
ಅವರಿಂದ ಬ್ರಹ್ಮ ವಾಯು ಶತ ಗುಣಾಧಿಕರು |
ಸಿರಿ ಕೋಟಿ ಗುಣಾಧಿಕಳು |
ಸಿರಿಯಿಂದ ಅನಂತಾನಂತ ಗುಣಗಳೊಳಿಂದ |
ಗುರು ಪುರಂದರ ವಿಠಲ ಉತ್ತಮೋತ್ತಮನು |

### ಅಟ್ಟತಾಳ

ತ್ರಿವಿಧ ಜೀವನರ ಸ್ಥಿತಿಯು ಸಾತ್ವಿಕ ರಾಜಸ ತಾಮಸ |
ಇವರಲ್ಲಿ ಯೊಂದೊಂದು ಮೂರು ವಿಧವಾ |
ದವರು ತಾಮಸ ಸಾತ್ವಿಕರು ಮನುಷಾಧಮರಿ |
ಗವರರು ತಾಮಸ ರಾಜಸರು ದೈತ್ಯ ಭೃತ್ಯರಿ |
ಗವರರು ತಾಮಸದ ತಾಮಸರು ದೈತ್ಯರೊಳು ಶ್ರೇಷ್ಠರು |
ತ್ರಿವಿಧ ರಾಜಸರು ರಾಜಸ ತಾಮಸ ಅಷ್ಟ ಜನರು |
ಇವರಲ್ಲಿ ರಾಜಸ ರಾಜಸರು ಮೂರು ವಿಧ |
ಪ್ರವರ ರಾಜಸ ರಾಜಸ ಸಾತ್ವಿಕ ಮನುಷ್ಯರು |
ಇವರೊಳು ರಾಜಸ ರಾಜಸರಲ್ಲಿ ಬ್ರಾಹ್ಮಣರಿ |
ಗವರರು ರಾಜಸ ರಾಜಸ ರಾಜ ಕ್ಷತ್ರಿಯ |

ರಿವರಿಗಧಮರು ರಾಜಸ ರಾಜಸ ವೈಶ್ಯರಿ ।
ಗವರರು ರಾಜಸ ರಾಜತಾಮಸರು ಚತುರ್ಥರು ।
ತ್ರಿವಿಧವಾದ ರಾಜಸ ಸಾತ್ವಿಕಪರ ಸ್ವಲ್ಪ ಹಂಸರು ।
ಇವರೊಳು ಸಾತ್ವಿಕ ಭಾಗ ಯತ್ಕಿಂಚಧಿಕ ರಾ ।
ದವರು ಹಂಸಾಧಿಕ ರಾಜಸ ಹಂಸರು ।
ಹವಣದಿ ರಜೋರಾಜಸ ಅಧಿಕ ಸಾತ್ವಿಕ ಭಾಗ ಯತ್ಕಿಂಚಿದಧಿಕ ।
ರವರೆ ರಜೋರಾಜಸ ಸಾತ್ವಿಕ ಪರಮ ಹಂಸರು ।
ಇವರಲ್ಲಿ ಸಾತ್ವಿಕಭಾಗ ಯತ್ಕಿಂಚಿದಧಿಕರಾ ।
ದವರು ಹಂಸರಧಿಕ ರಾಜ ಹಂಸರು ।
ತ್ರಿವಿಧ ರಾಜಸ ರಾಜಸ ಅಧಿಕ ।
ರಿವರಲ್ಲಿ ಭಾಗ ಯತ್ಕಿಂಚಿತ್ತು ಅಧಿಕರು ಈ
ಹಯಣದಿ ರಾಜಸಾಧಿಕ ಯುಕ್ತರಾ ।
ದವರು ವಾನಪ್ರಸ್ಥರಿಗೆಲ್ಲ ।
ಪ್ರವರರ ರಾಜಸಾಧಿಕರಾದ ಬ್ರಹ್ಮಚಾರಿಗಳು ।
ಇವರಿಂದ ರಾಜಸಗುಣಾಧಿಕ ಗೃಹಸ್ಥರು ।
ತ್ರಿವಿಧ ಸಾತ್ವಿಕ ಪ್ರಭೇದವಾದ ಸಾತ್ವಿಕ ತಾಮಸ ರಾ ।
ದವರೆ ಪಿತೃಗಂಧರ್ವ ಚಕ್ರವರ್ತಿಗಳು ।
ಪವಿತುರ ಸಾತ್ವಿಕ ರಾಜಸರು ಅಧಿಕ ದೇವತೆಗಳಿಗೆ ।
ಪ್ರವರ ಸಾತ್ವಿಕ ಸಾತ್ವಿಕ ರಾಜಸ ಶಚಿ ರತಿ ಪತಿ ಇಂದ್ರಕಾಮರು ।
ಕವಳ ವಿಲ್ಲದ ಸಾತ್ವಿಕ ಸಾತ್ವಿಕ ಸಾತ್ವಿಕ ವಾಯು ಬ್ರಹ್ಮರಿ ।
ವರಿಂದ ವಂದ್ಯ ಗುರು ಪುರಂದರ ವಿಠಲ ।೭।।

### ಏಕತಾಳ

೧) ಜಯ ವಿಜಯ ಸೂರ್ಯ ಸಂಜ್ಞಾ ಪ್ರಾಣಜ್ಯೋತಿ ನಾಮ ।
ಭಾರತಿ ರಾಜ್ಞೆಯಿಂದ ಪೂರ್ವದ್ವಾರದಿ ಮನುಷೋತ್ತಮರು ।
ಶಾಂತಿ ಅನಿರುದ್ಧನ ಸೇವಿಪರು ।

೨) ನಂದ ಸುನಂದನ ಶ್ರೋತ್ರಾಭಿಮಾನಿ ಚಂದ್ರ ರೋಹಿಣಿ |
ಅಪಾನ ದ್ಯುನಾಮ ಭಾರತಿ ಅಜ್ಞೆಯಿಂದ |
ದಕ್ಷಿಣ ದ್ವಾರದಿಂದಲಿ ಕರ್ಮಜ ದೇವತೆ |
ಪಿತೃ ಸರ್ವರು ಕೃತಿ ಪ್ರದ್ಯುಮ್ನನ ಪಾದ ಸೇವೆಯ ಮಾಡುವರು |

೩) ಕುಮುದ ಕುಮುದಾಕರ ಅಗ್ನಿ ಸ್ವಾಹಾ ದೇವಿಯರ |
ವ್ಯಾನ ವಾಯು ಪೃಥ್ವಿ ಶ್ರದ್ಧೆ ಭಾರತಿ ದೇವಿಯರ ಆಜ್ಞಾಧಾರಕರಾಗಿ |
ಗಂಧರ್ವ ತುಂಬರ ಕಿನ್ನರ ಕಿಂಪುರುಷರು |
ಪಶ್ಚಿಮ ದ್ವಾರದಿ ಬಂದು ಜಯದೇವಿ ಸಂಕರುಷಣನ ಧೇನಿಪರು |

೪) ಬಲ ಪ್ರಬಲ ಇಂದ್ರ ಶಚಿ ಸಮಾನ ವಿದ್ಯುನ್ನಾಮ |
ಭಾರತಿ ಅನುಜ್ಞೆಯಲಿ ಶತಕೋಟಿ ಋಷಿಗಳು |
ಉತ್ತರ ಬಾಗಿಲಲ್ಲಿ ಬಂದು ವಾಸುದೇವನ ನರ್ಚಿಪರು |
ಗಂಗಾ ಸಹ ವರುಣ ಉದಾನ ಆಕಾಶನಾಮ ಭಾರತಿ ಅಪ್ಪಣೆಯಿಂದ |

೫) ಊರ್ಧ್ವದ್ವಾರದಿ ಬಂದು ಸರ್ವ ದೇವತೆಗಳು |
ಲಕ್ಷ್ಮೀನಾರಾಯಣ ಗುರು ಪುರುಂದರ ವಿಠಲ ಉಪಾಸ್ತಿಯನು
ಮಾಡುವರು ||೮||

**ಜತೆ**

ಮುಕ್ತಾ ಮುಕ್ತರಿಂದ ಸೇವಿಪಚರಣ
ಶ್ರೀಧಾಮದಲಿ ವಾಸವಾದ ಗುರು ಪುರಂದರ ವಿಠಲ ||೯||



## ಮುಕ್ತರ ಸುಖಾನಂದ, ಮುಕ್ತರಾನಂದ ತಾರತಮ್ಯ

### ೯) ಸುಳಾದಿ

ರಾಗ : ಮೆಚ್ಚು ಬಹುಳಿ ಧ್ರುವತಾಳ

ಮುಕುತಿ ಸುಖದೊಳು ಪರಮ ಸುಖವೆಂದಳಿಯದ ।
ಸರ್ವ ವಿಷಯ ಭೋಗಂಗಳು ಅಲ್ಲಿ ಅಪ್ರಾಕೃತವಾದ ।
ಶುದ್ಧ ಸಾತ್ವಿಕರು ಕೃತಿ ಸಂಬಂಧ ದಿಂದಯಿರೆ ।
ಸೃಷ್ಟಿಯಿಂದ ನಿರ್ಮಾಣಿಸಿ ಸುಖ ಭೋಗಕೆಂತೊ ।
ಅನುಭವವಾಗುವಂತೆ ಸರ್ವಜೀವರಿಗೆ ಮುಕುತಿ ಸುಖದೊಳು ।
ಅತಿ ಸೂಕ್ಷ್ಮ ಜೀವರು ಅದರೊಳು ಮೂರು ಬಗೆಯಾದ ।
ಉತ್ತಮರು ಮಧ್ಯಮರು ಅಧಮರು ।
ಕಡಿಮೆ ಸೂಕ್ಷ್ಮಗಳುಳ್ಳ ಇವರಿಗೆ ಸೂಕ್ಷ್ಮದಲ್ಲಿ ಸುಖಾನುಭವವೆಂತೊ ।
ದೇವತೆಗಳಲ್ಲದೆ ಕೆಲ ಮನು ಮುನಿಗಳು ಮತ್ತೆ ಕೆಲವು
ಭೋಗ ಬೇಕೆಂದರೆ ಇದ್ದ ಸೃಷ್ಟಿಯಾದ ಶರೀರಗಳಿಂದ ಭೋಗಿಪರು ।
ನೀಚ ಜೀವರಿಗೆ ಶರೀರ ಯೋಗ್ಯತೆಯಿಲ್ಲ ದಿದ್ದರೆ ।
ಅತಿ ಸೂಕ್ಷ್ಮವಾಗಿ ಯೆಂತು ಜೀವಕೆ ಭೋಗಾನುಕೂಲ ।
ಅಂಥಯಿದ್ದ ಸೃಷ್ಟಿಯಿಂದ ಅನಾದಿ ಸುಖವಿತ್ತು ।
ಪಾಲಿಪ ಗುರು ಪುರಂದರ ವಿಠಲರೇಯಾ ।

#### ಮಟ್ಟತಾಳ

ತ್ರಿವಿಧ ಕರ್ಮಂಗಳು ನಿನ್ನಾಧೀನವಾಗಿ ।
ಅನಂತ ಕಾಲದಲ್ಲಿ ಪರ ಬೊಮ್ಮಾದಿಗಳು ।
ನಿನ್ನ ದಾಸರೆಂಬ ತಾರತಮ್ಯದಿಂದ ।
ಶ್ರವಣ ಮನನ ನಿಧಿಧ್ಯಾಸನಗಳನ್ನು ।
ಮಾಡುತಲಿರಲಾಗವು ಸಂಚಿತಗಳ ಕಳೆದು ।
ಪ್ರಾರಬ್ಧ ಭೋಗವು ಅನುಭವಿಸದಲ್ಲದೆ ।

ಕೊಡದ ಲಕ್ಷಣ ಕಾರಣ ಸಂವತ್ಸರದ ಭೋಗವು ।
ಒಂದು ದಿನದಲ್ಲಿ ಕಡೆಗೈದು ವಂತೆ ।
ಶ್ವಾನ ಸೂಕರಾದಿ ಜನ್ಮಂಗಳು ಕ್ಲಪ್ತಿಗೆ ಕಡಿಮ್ಯಾಗದು ।
ಅಂದೆ ಪುಟ್ಟಿ ಅಂದೆ ಮೃತವಾಗಿ ಜನುಮ ನೀಗುವ ನಿನ್ನ ।
ಪರಮಾನುಗ್ರಹದಿಂದ ಸ್ವರೂಪ ಸುಖವನ್ನು ।
ವ್ಯಕ್ತ ಮಾಡುವಲ್ಲಿ ನೀ ಕಾರಣನಾದ ಕಾರಣ ।
ಈಪರಿಯಲಿ ಕಡೆಗೈದಿಸುವೆ ಗುರ ಪುರಂದರ ವಿಠಲ ಮುಕುತಿ ಪ್ರದ ನೀನು॥೨॥

## ರೂಪಕತಾಳ

ಸಾಲೋಕ್ಯ ಸಾಮೀಪ್ಯ ಸಾಯುಜ್ಯ
ಸಾರ್ಷ್ಟಿಯಂಗಳು ಯೋಗ್ಯ ಜೀವರಿಗೆ ಆಲೋಕದಲಿಪ್ಪುದು ।
ಸಾಲೋಕ್ಯವೆಂಬೋದು ಪಟ್ಟಣದ ಸಮೀಪದಲಿಪ್ಪುದು ।
ಸಾಮಿಪ್ಯವೆಂಬೋದು ಶಂಖ ಚಕ್ರಗದೆ ಪದುಮಧರನಾಗಿ ಸರ್ವರು ।
ಸಾರೂಪ್ಯವೆಂಬೋದು ಮುಕುತಿ ಸಮ ವುಹರಿಯ
ವಾಯುಗಳಲ್ಲಿ ತತ್ವಭಿಮಾನಿ ದೇವತೆಗಳಿಗೆ ।
ಸಾಯುಜ್ಯವೆಂಬೊ ಮುಕುತಿಯು ।
ಹರಿ ಸರ್ವಾಂಗದಿ ಇಪ್ಪುದು ಚತುರ್ಮುಖಗೆ ।
ಸಾರಿಷ್ಣಿ ಎಂಬೋದು ಪಂಚ ವಿಧ ಮುಕುತಿ ।
ಋಷಿ ಮನುಜೋತ್ತಮರು ಚತುರ್ಮುಖನಿಂದ ಕೂಡಿ ।
ಶ್ರೀ ವಾಸುದೇವ ಶ್ವೇತದ್ವೀಪವಾಸ ಸಂದರುಶನದಿಂದ ।
ಇದ್ದಾವರಕಗಳ ಬಿಟ್ಟು ಸಮುದಾಯದಿಂದ ಕ್ರಮಭಾಗವಾಗಿ ॥
ಚತುರ್ಮುಖನಿಂದ ನಾರದ ಪರಿಯಂತಯಿಪ್ಪ ಆವರಕವನೀಗೆ ।
ಮುಕುತರಾದರು ಮನುಜೋತ್ತಮ ರಿಂದ
ಮೊದಲಾಗಿ ತೃಣಜೀವರಿಂದ ಕಡೆಯಾಗಿ ।
ಜೀವಾಚ್ಛಾದಕ ಪರಮಾಚ್ಛಾದಕವೆಂದು ಬೇರಿಪ್ಪುದು ।
ಜೀವಾಚ್ಛಾದಕವನು ಸಂಹರಿಸೆ ಪರಮಾಚ್ಛಾದಕ ।

ಕಡೆ ಕಡೆಗೊತ್ತಿ ಮುಕುತರ ಮಾಡುವೆ |
ಅನಾದಿ ಕಾಲದಿ ಮುಕುತಿದಾಯಕ ಗುರು ಪುರಂದರ ವಿಠಲ
ಆಲೋಕದಲಿಪ್ಪುದು ||೩||

### ಝಂಪಿತಾಳ

ಕಾಲ ಚಕ್ರದಿಂದ ಬೆಳಗುತಿಪ್ಪ ಬೊಮ್ಮಾಂಡದೊಳು |
ಚಕ್ರಧಾರವಾಗಿ ತಿರುಗುತ್ತ ಬರಲು |
ಅಪ್ರಾಕೃತವಾದ ಶ್ವೇತದ್ವೀಪವು ಅನೇಕ ಉನ್ನತವಾದ |
ಗೋಪುರ ಪ್ರಾಕಾರದಿಂದ ವೊಪ್ಪುವ ಪಟ್ಟಣಕ್ಕೆ |
ಸಂಬಂಧವಾಗುವ ಅಲ್ಲಿ ನಿನ್ನ |
ಇದ್ದ ಮಾತ್ರದಿ ಧಗಧಗನೆ ಉರಿಯುವ ಉರಿಯೊಳು ಕಾಷ್ಟವ ತಿರುಗಿಸಿದಂತೆ |
ಅತಿ ವೇಗದಿಂದ ತಿರುಗುವ ಕಾಷ್ಟವೆಂತು |
ಲಗ್ನವಾಗುವದಿಲ್ಲ ಅಂತು ಅಪ್ರಾಕೃತ |
ತನ್ನ ಶ್ರೀ ಭಾಗದಿಂದ ಒಪ್ಪುವದು ಸರ್ವವು ನಿನ್ನಾಧೀನ |
ನಿನ್ನ ಇಚ್ಛೆ ಬಂದಂತೆ ಸಿರಿ ಅಜ ಭವಾದಿಗಳು |
ಅನುಸರಿಸಿ ಕೊಂಡಿಪ್ಪರೈ ಗುರು ಪುರಂದರ ವಿಠಲಾ ||೪||

### ತ್ರಿಪುಟತಾಳ

ಇಲ್ಲೆಂಥ ಸುಖಗಳುಂಟು ಅಲ್ಲೆಂಥ ಸುಖಗಳುಂಟು |
ದುಃಖವಿಲ್ಲಲ್ಲಿ ಸರುವಾ ಸುಖ ಉಂಟು |
ಲೋಕಗಳಿಲ್ಲಿ ನಾಶಉಂಟು |
ದಿನಕೊಂದು ಬಗೆ ಯಾಡಿಯಾಡಿ ಸುಖವಾಗಿ |
ನಾಶವಿಲ್ಲದೆ ಅಪ್ರಾಕೃತವಾದ ಸುಖವನನು ಭವಿಸುತ |
ಕ್ರಮದಿ ತಿರುಗುವ ಅಲ್ಲಿ ತನ್ನ ತನ್ನಯ |
ಚಾಮರಗಳಿಂದ ಪೀತಾಂಬರ ಶಂಖ ಚಕ್ರಗಳಿಂದೊಪ್ಪುವ |
ನಾಶವಿಲ್ಲದ ಪುಷ್ಪವಾಸನೆಯಿಂದ ಬಪ್ಪುವ ಗುರು ಪುರಂದರ ವಿಠಲಾ ||೫||

### ಅಟ್ಟತಾಳ

ಅಲ್ಲಿ ವನಗಳುಂಟು ಅಪ್ರಾಕೃತವಾದ |
ಫಲ ಪುಷ್ಪಗಳಿಂದ ಲೊಪ್ಪೊದು |
ಪಕ್ಷಿ ಜಾತಿಗಳು ಅತಿ ವಿಲಕ್ಷಣವಾದ ಮುಕುತರು |
ತಮ್ಮ ಜಾತಿಗಳಲ್ಲಿ ಸಮುದಾಯದಿಂದ ಸಾಮಗಾಯನವನ್ನು |
ಖಿಲಿ ಖಿಲಿ ಶಬ್ದದಿಂ ರ(ಂ)ಜಿಸುವ ನುಡಿಗಳು |
ಮುಕ್ತರು ಬಂದು ಜಲಕ್ರೀಡೆಯಂ ಮಾಡೆ ಕುಳಿಕುಳಿತು ಸುಖಿಸರು |
ಇಂಥ ಸುಖಬೇಕಾದರೆ ನಿಜಗುಣವ ಬಿಟ್ಟು |
ಪರಲೋಕ ಸುಖವೀವ ಗುರು ಪುರಂದರ ವಿಠಲನ ಭಜಿಸುವಾ ||೬||

೧) ಅಂದು ಗೋಕುಲದಲ್ಲಿ ಗೋಪಾಲರಾದ | ಅನಿಮಿಷರು ಸಾರೂಪ್ಯವ ಪಡೆದರು |

೨) ಅಂದು ಗೋವುಗಳಾಗಿ ಸಾಧನವನು ಮಾಡಿ |
ಸಾಲೋಕ್ಯವೆಂಬ ಮುಕುತಿಯ ಪಡೆದರು |

೩) ಅಂದು ನಿನ್ನ ಕೂಡಾಡಿ ಕೆಲ ಕೆಲರು |
ಸಾಮೀಪ್ಯವೆಂಬ ಮುಕುತಿಯ ಪಡೆದರು |

೪) ಅಂಗ ಸಾಯುಜ್ಯ ಸರ್ವಾಂಗದಲ್ಲಿ ಅಜಗಿತ್ತೆ |

೫) ಸಾರಿಷ್ಟಿಯ ಒಂದೊಂದವಯುವಗಳಲ್ಲಿ |
ತತ್ವಾಭಿಮಾನಿ ದೇವತೆಗಳಿಗೆ ಸಾಯುಜ್ಯವಿತ್ತು ಸಲಹಿದೆ |
ಅನುಪಮ ಗುಣ ನಿಧಿಯು ಗುರು ಪುರಂದರ ವಿಠಲ
ಮುಕುತರ ಶಿರೋಮಣಿ ||೭||

### ಜತೆ

ಎಂದೆಂದು ಮುಕುತಿ ಬೇಕೆಂದವರ್ಗೆ |
ಜೀವರ ತಾರತಮ್ಯ ತಿಳಿದು ಗುರು ಪುರಂದರ ವಿಠಲ ಮುಕುತಿಯ ನೀವಾ ||೮||

## ಉಪಾಸನಾ ಬಿಂಬಾರೋಕ್ಷ ವಿಧಾನ

## ೧೦) ಸುಳಾದಿ

ರಾಗ ಸೌರಾಷ್ಟ್ರ ಧೃವತಾಳ

ಒಂದಪರಾಧವೆ ಸಾಕಯ್ಯಾ ಮ |
ತ್ತೊಂದಪರಾಧವು ದುಃಖ ವ್ಯಾಧಿಗೆ ಕಾರಣ |
ಮುಕ್ತಿಯೋಗ್ಯರಿಗೆ ಅಪರೋಕ್ಷ ನಂತರದಿ |
ಮಾಡಿದ ಕರ್ಮವು ಶ್ರವಣ ಮನನಾದಿಗಳು |
ಸ್ವರೂಪಾನಂದ ವೃದ್ಧಿಗೆ ತಂದಿಪ್ಪವು
ಉತ್ತಮರಾದ ದೇವತೆಗಳಿಗೆ ಸ್ವರೂಪ ಮೀರಿ ಅಧಿಕವಾದಡೆ |
ಒಂದಪರಾಧವೇ ಸಾಕಯ್ಯಾ ತ |
ನ್ನಿಂದುತ್ತಮರಾದ ದೇವತೆಗಳ ದ್ರೋಹ |
ಸೋತ್ತಮ ರೆಂಬುದು ರುದ್ರನಿಂದ ಪುಷ್ಕರ ಪರಿಯಂತವಾಗಿ
ವೃದ್ಧಿಗೆ ನಾಶವು ಕ್ಲಪ್ತಿಗೆ ಹಾನಿಯಿಲ್ಲ ನೀಚರಾದವರು |
ಸೋತ್ತಮರ ದ್ರೋಹದಿಂದ ವೃದ್ಧಿಯೊಳು ಹ್ರಾಸ |
ಇಂಥಾ ವೃದ್ಧಿ ಹ್ರಾಸಗಳು ಇಂಥಾದೆ ಮುಕ್ತಿಗೆ ಅಂಥಾಪೆ |
ತವೋ ಯೋಗ್ಯರಿಗೆ ಅರಿತು ಫಲವೀವ |
ಗುರು ಪುರಂದರ ವಿಠಲ ರೇಯಾ ||೧||

### ಮಟ್ಟತಾಳ

ಮಿಥ್ಯಾಜ್ಞಾನ ವೆಂಬದೊಂದೆ ಸಾಕು |
ಅಂಧ ತಮಸ್ಸಿಗೆ ಕಾರಣ ವಾಗುವಲ್ಲಿ |
ಚತುರ್ಥ ಅಪರಾಧ ಅಯೋಗ್ಯನಿಂದ ಉಪದೇಶನಾಗದೆ |
ಉಪದೇಶ ಮಾಡದಿಪ್ಪ ಆತನೆ ಸುಖಿ ಎಂದು ಪೇಳುವರು |
ಎರಡನೆ ಅಪರಾಧ ಅಂಧಂತಮಸಿಗೆ ಬೀಳುವ |

ಜೀವರಿಗೆ ದುಃಖಾಧಿಕವನ್ನು ತಂದಿಕ್ಕುವದು
ಗುರು ಪುರಂದರ ವಿಠಲನ್ನ ಇಚ್ಛಾ ಅಂಥದ್ದೆ ||೨||

### ರೂಪಕತಾಳ

ಇಂಥದೆಂಥ ದೆನ್ನಲಾಗದ ಸಮನಾದ ವಸ್ತುವಿಗಾಳುಳ್ಳರೆ
ಇಂಥದೆಂಥ ದೆನ್ನಬಹುದು ಸರ್ವ ವಸ್ತುಗಳಿಂದ ಭಿನ್ನವಾದುದ |
ಜ್ಯೋತಿರ್ಮಯ ಕಾಂತಿಯಿಂದ |
ದಿನ ದಿನ ವಿಚಿತ್ರ ವೈಚಿತ್ರಕನಾದ |
ಹರಿಯ ಚರಿತ್ರೆಗಳು ನಿತ್ಯಾನಿತ್ಯ |
ಗುರು ಪುರಂದರ ವಿಠಲ ನಿತ್ಯ ||೩||

### ಝಂಪೆತಾಳ

ಭಕ್ತಿಯಿಂದಲಿ ತನ್ನ ಒಮ್ಮೆ ನೆನೆದರೆ |
ಪರಲೋಕ ಸುಖವೀವ ಅನಂತ ಜನ್ಮದೊಳು |
ಒಂದೆ ಜನುಮದಲಿ ನಾನು ನೀನೆಂಬುದು ಬಗೆದರೆ |
ನಿತ್ಯ ನರಕವನೀವ ಶಕ್ತ ಗುರುಪುರಂದರ ವಿಠಲ ಅನಾದಿ
ಮೂರ್ತಿ ಕಾಣೋ ||೪||

### ತ್ರಿವಿಡಿ ತಾಳ

ನಿಗಮಾರ್ಥಗಳಿಂದ ನಿನ್ನನು ಮನು ಮುನಿ |
ದೇವತೆಗಳು ಹೃದಯಾಂಬರ ಮಂದಿರದಿ |
ಕಮಲದ ದಳದಲಿ ವಾಸವಾಗಿಪ್ಪ ಮುಖ್ಯಪ್ರಾಣರೂಪದಿಂದ | ಸೇವಿತನಾಗಿ
ಜೀವನ ಸ್ಥೂಲ ಅಂಗುಟ ಪ್ರಮಾಣ ರೂಪ |
ತತ್ಪ್ರಮಾಣ ಷಡ್ದಳ ಹೃದಯ ಕಮಲವು |
ಊರ್ಧ್ವಮುಖಾ ಕರಣಿಕೆಯಲ್ಲಿ ಲಕುಮಿ ಸಮೇತ |

ಮೂರ್ತಿಯನ್ನು ಸುಷುಮ್ನಾ ನಾಡಿಯಲ್ಲಿ ।
ನಾಭಿಯಲ್ಲಿ ಪುಟ್ಟಿರ್ದ ಕಂದನಾಳ ।
ಅಷ್ಟದಳ ಪದ್ಮ ಅಧೋಮುಖವಾಗೆ ।
ಕೆಳಗೆ ಷಡ್ದಳ ಪದ್ಮ ಕೇಸರ ಕಂದದಲ್ಲಿಪ್ಪ ।
ಸಂಪುಟದಂತೆ ಅಲ್ಲಿ ಇಪ್ಪದು ।
ಅದೇ ಬಿಂಬಮೂರ್ತಿ ಅವಸ್ಥಾ ಪ್ರೇರಕನು ।
॥ಸ್ಮೃತಿ ಪದ್ಮಕೋಶಂ ಪ್ರತಿ ಕಾಶಂ ಹೃದಯಂ ಚಾಪ್ಯಧೋಮುಖಂ ।
ಅಧೋ ನಿಷ್ಠ್ಯಾತತಸ್ಯಾಂತಿ ನಾಭ್ಯಮುಪರಿತಿಷ್ಟತಿ ॥೧॥

ಹೃದಯಸ್ಥ ಹರೇಮೂರ್ತಿ ಜೀವೋಯತ್ರಾತಿ ಬಿಂಬಕಾ ।
ಯದ್ವಸೇವರ್ತತೇಜೀವ ಸಾತುಜೀವಕಳಾಸ್ಮೃತಾ ॥೨॥

ಇತ್ಯಾದಿ ಓಂಕಾರ ಪೂರ್ವಕದಿಂದ ।
ವಿಜ್ಞಾನ ರವಿಣಾ ಪ್ರಕಾಶ ನಂತರದಿ ।
ಆವಾಹನೆ ಮಾಡಿ ಮಾನಸ ಪೂಜೆ ಮಾಡಿ ।
ನಿನ್ನ ಪಾದ ಕಮಲ ಸೇವಿಸುವರು ಸಕಲಾ ।
ಸುರ ರೊಡಿಯು ಗುರು ಪುರಂದರ ವಿಠಲ ।
ನಿನ್ನ ಪಾದ ಕಮಲ ಸೇವಿಸುವರು
ನಿನ್ನ ಅಮೃತವ ಸುರಿಯೆ ಅಧೋಮುಖ ।
ಪಾದ ಕಮಲ ವಿಕಸಿತವಾಗೆ ಬಿಂಬ ಮೂರುತಿಯನ್ನು
ಉಪನಿಷದ್ವಾಕ್ಯ ತಂತ್ರಸಾರ ಪೂರ್ವಕದಿಂದ ಪೂಜಿಪರು
ಗುರು ಪುರಂದರ ವಿಠಲನ ॥೩॥

## ಅಟ್ಟತಾಳ

ಅಪರೋಕ್ಷವೆಂಬೋದರಲ್ಲಿ ಬಾಹ್ಯ ।
ರೂಪಗಳ ಕಂಡು ನಲಿವದಿದು ಅಪರೋಕ್ಷವೆ ।

ಭಕ್ತಿಯಿಂದ ಮೆಚ್ಚಿ ಕಣ್ಣಿಂದ ನೋಡುವಂಥ ।
ಅಪರೋಕ್ಷ ಹೃದಯಾಂಬರದಲ್ಲಿ ಕಾಣೋದು ।
ಅಪರೋಕ್ಷ ಕುಣಿವಾದು ಅಪರೋಕ್ಷಗಳಲ್ಲ ।
ಬಿಂಬಾಪರೋಕ್ಷವೆ ಮುಕ್ತಿಗೆ ಸಾಧನ ।
ಗುಣ ಸಿಂಧು ಗುರು ಪುರಂದರ ವಿಠಲನ್ನ ।
ಬಿಂಬಾಪರೋಕ್ಷವೆ ಮುಕ್ತಿಗೆ ಕಾರಣ ॥೬॥

### ಆದಿತಾಳ

ವರ ಮೂರುತಿ ವರವನೀವಲ್ಲಿ ನಿನ್ನಸಮರುಂಟೆ ನೀನಿತ್ತ ।
ವರಗಳು ಕೆಣ್ಣೆತ್ತಿ ನೋಡುವರಿಲ್ಲ ಬೊಮ್ಮರುದ್ರ ।
ವರಗಳ ಹಿಂದು ಮುಂದು ಮಾಡಿ ।
ತಂದೊಟ್ಟೆ ಹುಯಲು ಎಬ್ಬಿಸವೆ ।
ತಾವು ಕೊಡುವದಕೆ ನಿನ್ನಸೇವಿಸದ ।
ಅಂಧಂತಮಸಿಗೆ ಬೀಳುವ ಜೀವರಿಗೆ ದುಷ್ಟ ।
ವರಗಳನಿತ್ತು ನಿನ್ನ ಅಪಾರ ಬಲ ಕಂಡು ಶಂಕಿಸದೆ ।
ವರನೀವರು ರಾವಣ ಬಾಣರ ತರಿದೆ
ಸಂಕರುಷಣ ಗುರು ಪುರಂದರ ವಿಠಲನ ಸಂಖ್ಯ ಶಂ ।
ಕೈ ರಾವಣ ಬಾಣರ ತರಿದೆ ॥೭॥

### ಜತೆ

ಆಧೀನರೆಲ್ಲರೂ ಸ್ವಾತಂತ್ರ ನೀನು ಗುಣಸಿಂಧು ।
ಗುರು ಪುರಂದರ ವಿಠ್ಠಲರೇಯಾ ॥೮॥



## ಅಪರೋಕ್ಷ ತಾರತಮ್ಯ ಪ್ರಮೇಯ

## ೧೧) ಸುಳಾದಿ

ರಾಗ : ಧ್ರುವತಾಳ

ವಿಶ್ವವ್ಯಾಪಕ ಮೂರುತಿಯಾಗಿ ಅವ್ಯಾಕೃತವನು ।
ವ್ಯಾಪಿಸಿ ಸುಗಂಧ ವಾಸಿಸಿದಂತೆ ಬೊಮ್ಮಾಂಡ ಅವ್ಯಾಕೃತವು
ಬಿಗಿದಪ್ಪುವ ನಿನ್ನ ।
ವಿಶ್ವಮೂರುತಿ ಒಂದಿಪ್ಪದು ಸರ್ವಕಾಲದಲ್ಲಿ ।
ಬೊಮ್ಮಾಂಡವೆಲ್ಲವೆ ಒಂದು ಘನ ಅಂಗುಷ್ಟವೇ ವ್ಯಾಪ್ತ ।
ಸರ್ವ ದೇಹಾವಕಾಶವಾಗಿಪ್ಪ । ಅವ್ಯಾಕೃತವೆ ವಿಶ್ವ ।
ಈ ಮಹಾ ಮೂರುತಿಯಲ್ಲಿ ಒಂದನಂತವಾಗಿಪ್ಪ ಶ್ರೀಮೂರುತಿಗಳು ।
ಅದರಲ್ಲಿಪ್ಪವು ಒಂದೊಂದು ಮೂರುತಿಯಲ್ಲಿ ಸಹಸ್ರ ಬ್ರಹ್ಮಕಲ್ಪದ ।
ಜೀವರಲ್ಲಿರುವರು ರೋಮ ರೋಮ ಬೊಮ್ಮಾಂಡಗಳೆಲ್ಲ ಕಾರಣ ।
ಈ ಮೂರುತಿ ವ್ಯಾಪ್ತಿಯಿಂದ ।
ಲಕುಮಿದೇವಿ ಉಪಾಸನೆಯ ಮಾಡುವೆನೆಂದು ಧ್ಯಾನಿಪಳು
ಪ್ರತ್ಯಕ್ಷವಾಗುವದು ।
ಗುಣಗಳು ಕಡೆಗಾಣಲಾರದೆ ಸಾಕಲ್ಯವಾಗಿ
ಲಕುಮಿದೇವಿ ಗುರು ಪುರಂದರ ವಿಠಲ ವಿಶ್ವಾ

### ಮಟ್ಟತಾಳ

ಸಿರಿ ಸರಸಿಜೋದ್ಭವ ವಾಣಿ ಭಾರತಿಯರು ।
ಪರಶುಕ್ಲ ತ್ರಯರಿವರು ಮೂಲವಾಯು ಕೂಡಿ ।
ಲಕುಮಿ ಒಡೆಯನ ಗುಣಂಗಳನು ಇವರು ಕಡೆಗಾಣದೆ ।
ಮೂರುತಿಯಿದ್ದು ಸರಸಿಜೋದ್ಭವ ಮಹತತ್ವದಿ ಕುಳಿತ ಪರಿಯಂತವು ।
ತನ್ನಭಿಮಾನಿಯಲ್ಲುಳ ಅಲ್ಲಿ ಪರಿಯಂತ ಬಲ್ಲ ಕೆಲವುರೂಪ ।

ಅವ್ಯಾಕೃತದಲ್ಲಿ ವ್ಯಾಪ್ತವಾದುದಾ ತಾರಾಮಂಡಲದಂತೆ
ಕಾಂಬ ಪಂಚಮುಖದಿ |
ದೇವತೆಗಳು ಗರುಡ ಶೇಷ ರುದ್ರ ತನ್ನ ಭಿಮಾನ |
ಯಲ್ಲುಳ ಅಲ್ಲಿ ಪರಿಯಂತ ಬಲ್ಲರು |
ಕೆಲವು ರೂಪು ಮಹತತ್ವದಲ್ಲಿ ವ್ಯಾಪ್ತವಾದುದಾ |
ತಾರಾ ಮಂಡಲ ದಂತೆ ಕಾಂಬರು |
ಮತ್ತೆ ದೇವತೆಗಳು ತಮ್ಮ ಸ್ವರೂಪದಂತಿಪ್ಪರು |
ಅಳವಿಲಿ ಕೆಲರು ನಖವ ಕಾಂಬೊರು |
ಇಂಥ ವ್ಯಾಪ್ತಿಗಳುಳ್ಳ ಮೂರುತಿ ಯಾಗಿಪ್ಪ |
ಗುರು ಪುರಂದರ ವಿಠಲನ್ನ ಮಹಿಮೆಗೆ ನಮೊ ನಮೋ ||೨||

### ರೂಪಕತಾಳ

ಸ್ಪಷ್ಟದಲ್ಲಿ ಭೇದವುಳ್ಳ ಕಾರಣ |
ಪರಿಮಾಣದೊಳು ಕಡಿಮೆಯುಳ್ಳ ಕಾರಣ |
ಒಬ್ಬರಿಂದೊಬ್ಬರು ಉತ್ತಮರಾಗಿ ಸೇವಿಪರು |
ನಿನ್ನ ಚರಣ ಕಮಲವ ಗುರು ಪುರಂದರ ವಿಠ್ಠಲನೆ ತಮ್ಮೊಳು ತಾವು ||೩||

### ಝಂಪೆತಾಳ

ಅಪಾರ ಮಹಿಮೆ ನೆರಹಿಕೊಂಡು ಅಪ್ರಮೇಯನಾಗಿ ನೀನು |
ಸರ್ವ ದೇವತೆಗಳ ಒಂದೊಂದು ವ್ಯಾಪಾರದಲ್ಲಿಯಿಟ್ಟೆ |
ಭೀಷಾಸ್ಮಾ ಎಂಬ ಶ್ರುತ್ಯರ್ಥದಿಂದ ಭೂತವಾಯು ತನ್ನಿಂದ ಮಿಕ್ಕ ದೇವತೆಗಳ
ಪ್ರೇರಣೆ ಕರ್ಮದಿಂದ ಸೂತ್ರನಾಮಕನು ತಾ ಸರ್ವ ದೇವತೆಗಳೊಳು |
ಒಬ್ಬ ಗಾಳಿಯಾಗುವ ಅಗ್ನಿಯಾಗಿ ದಹಿಸುವ ಒಬ್ಬ |
ಅಗ್ನಿಯಾಗಿ ದಹಿಸುವ ಒಬ್ಬ ಸದಾ ಬೆಳಗುತಿಪ್ಪ ಒಬ್ಬ |
ಸರ್ವರ ದಂಡಿಸುವ ಒಬ್ಬ ಶೀತಳವಾಗಿ |

ತನ್ನಿಂದಲನು ಸುಖವ ಜಗಕೆ ಎಂತು ಮಾಡುವರು ।
ಬಿಡದೆ ಮೃತ್ಯು ಬಂದು ಅರಸಿಕೊಳು ತಿಪ್ಪದು !
ಈ ಸರ್ವ ವ್ಯಾಪಾರವು ಹರಿಯ ಆಧೀನದಿಂದ ಚತುರ್ಮುಖನು ।
ಅನಂತ ಚತುರ್ಮುಖರಿಂದ ಸೇವಿತ ಪಾದವುಳ್ಳ ।
ಪಟ್ಟದರಸು ಗುರು ಪುರಂದರ ವಿಠಲಯ್ಯಾ ||೪||

### ತ್ರಿಪುಟತಾಳ

ಪ್ರಾಣಾಪಾನ ವ್ಯಾನೋದಾನ ಸಮಾನ ವಾಯು ।
ನಾಮಕನಾಗಿ ಮುಖ್ಯಪ್ರಾಣ ಅವರಲ್ಲಿದ್ದು ಪ್ರೇರಿಸುವ ।
ಮುಖ್ಯನೀತನು ಅಮುಖ್ಯರವರು ।
ಪ್ರಾಣನಿಂದ ನಿನ್ನ ರೂಪವು ಪ್ರಾಣ ಶಬ್ದವು ಮೂಲದಿಂದುಳ್ಳ ।
ಪರಮ ಸುಖನಿಧಿ ಮುಖ್ಯನೀತನು ವ್ಯಾಪ್ತನಾಗಿ ಪ್ರೇರಿಸುವಿ ।
ಗುರು ಪುರಂದರ ವಿಠಲ ರೇಯನ ಅನಾದಿನಾಮಾ ||೫||

### ಅಟ್ಟತಾಳ

ನಾಭಿದೇಶದಲ್ಲಿ ವಾಯುರೂಪದಲ್ಲಿ ವಾಯು ಬೀಜನಾಗಿ ।
ವಾಯುವಂತರ್ಗತನಾಗಿ ಶೋಷಿಸುವಿ ದುಷ್ಕರ್ಮಿಯ ।
ಹೃದಯ ಸ್ಥಳದಲ್ಲಿ ತ್ರಿದಳ ಮಂಡಲದಿ ಕಮಲದಲ್ಲಿ ಅಗ್ನಿ ಬೀಜನಾಗಿ ।
ಅಗ್ನ್ಯಂತರ್ಗತನಾಗಿ ದಹಿಸುವಿ ಮತ್ತೆ ಕೆಲವು ಪಾಪವ ।
ಶಿರೋ ಭಾಗದಲ್ಲಿ ವರುಣ ರೂಪದಲ್ಲಿ ವರುಣ ಬೀಜನಾಗಿ ।
ವರುಣಾಂತರ್ಯಾಮಿಯಾಗಿ ।
ವೃಷ್ಟಿಯ ಸುರಿಸುವಿ ಅಮೃತವಾ ।
ತತ್ತ ನಾಮಕನಾಗಿ ಸರ್ವ ಫಲವನೀವಿ ಕರ್ಮದ ।
ಸುಖ ಗುರು ಪುರಂದರ ವಿಠಲಾ ।೬||

### ಏಕತಾಳ

ಪ್ರಾರಬ್ಧ ಸಂಚಿತ ಆಗಾಮಿಗಳಿಂದ ಅಧಿಕವಾದುದ ಮಹಾ |
ದುಷ್ಕರ್ಮಿಗಳಿಗೆ ಮುಕುತಿ ಯೋಗ್ಯರಿಗೆ ಕರುಣೆನೀದಯ ಮಾಡಿ |
ಮೀರಿದ ದುಷ್ಕರ್ಮವ ಕಲಿಗೆಈವಿ, ತಮ್ಮ ಸ್ವರೂಪವ |
ಮೀರಿ ಸುಕೃತವ ಮಾಡಿದರೆ ದೇವತೆಗಳಿಗೆ ಈವೆಯಾಗಿ |
ಎಂಥಾದರೆ ಸ್ವರೂಪ ಸುಖವಿತ್ತು ಸಲಹುವ
ಅನುಪಮ ಗುಣ ಗುರು ಪುರಂದರ ವಿಠಲಾ ||೭||

### ಜತೆ

ಸರ್ವಕರ್ಮಗಳ ಪ್ರಾಣಾಂತರ್ಯಾಮಿಯಾದ ಶ್ರೀಹರಿಗೆ |
ಒಂದೊಂದು ಅನಂತ ಫಲಮಾಡಿ ತೋರುವ
ಗುರು ಪುರಂದರ ವಿಠಲರೇಯನನು ಅನಾದಿಕಾಲದಲಿ ||೮||

....●....

ಸೃಷ್ಟಿ-ಅನಂತ ರೂಪಗಳ ಕಾರ್ಯ ಒಂದೇ ರೂಪದಲ್ಲಿ ಸಾಯುಜ್ಯಾದಿ ಮುಕ್ತಿ

## ೧೨) ಸುಳಾದಿ

ರಾಗ : **ಶಂಕರಾಭರಣ** **ಧ್ರುವತಾಳ**

ಆದಿ ಮೂರುತಿಯಾಗಿ ಅವ್ಯಾಕೃತಾಕಾಶದಲ್ಲಿ ಅ |
ನಾದಿ ನಿತ್ಯನೆನಿಸಿ ಸತ್ಯವಾದ ಜಗದೊಳು |
ಸುತ್ತಿ ನೀ ಅವತಾರಗಳ ಮಾಡುತಿಹೆ |
ಅನಾದಿ ಸ್ವಭಾವದಿಂದ ಸತ್ಯ ಸಂಕಲ್ಪನೆನಿಪೆ |
ನಿನ್ನಿಚ್ಛೆಯಿಂದಲಜ ಭವಾದಿ ಜೀವರ | ಸೃಜಿಸುವೆ ಆದಿಯಲ್ಲಿ

ಸೂಕ್ಷ್ಮವಾದ ಇಪ್ಪತ್ತುನಾಲ್ಕು ತತ್ವಂಗಳ ।
ಬೊಮ್ಮಾಂಡದವಳಗೆ ಇರಿಸೀ ।
ಗುಣತ್ರಯ ಉಪಾದಾನ ಕಾರಣವನೆ ಮಾಡಿ ।
ಇಂತು ಲೋಕಂಗಳ । ಮಹ ತತ್ವಹಂಕಾರಗಳಿಂದ ।
ರಾಜಸ ತಾಮಸ ಸತ್ವಯುಕ್ತ ಜಗವ ।
ನಿರ್ಮಿಸಿದೆ ಗುರು ಪುರಂದರ ವಿಠಲರೇಯಾ ಅನಾದಿಕಾಲದಲ್ಲಿ ॥೧॥

## ಮಟ್ಟತಾಳ

ಗೋವಿಂದ ನೆನಸಿ ನೀನು ವೇದ ಪ್ರತಿಪಾದ್ಯನಾಗಿ ।
ಶ್ವೇತ ದ್ವೀಪದಿ ವಾಸವ ಮಾಡಿದೆ ।
ಅನಂತ ನೆನಿಸಿ ನೀನು ಅನಂತ ಮೂರುತಿಗಳಿಗೆ ಭೇದವಿಲ್ಲದೆ ।
ಅನಂತಶಯನನಾದೆ । ನಾಶರಹಿತವಾದ ಅಚ್ಯುತನೆಂಬೊ
ನಾಮ ನಿನ್ನದು । ವೈಕುಂಠ ಪತಿಯೇ ಗುರು ಪುರಂದರ ವಿಠಲ ॥೨॥

## ತ್ರಿವಿಡಿತಾಳ

"ಯತೋ ವಾಚೋ ನಿವರ್ತಂತೆ ಅಪ್ರಾಪ್ಯ ಮನಸಾಸಹ"
ಎಂದು ಶ್ರುತಿಗಳು ನಿನ್ನ ಅನಾದಿಯಿಂದ ತುತಿಸಿ ।
ಗುಣಗಳ ಕಡೆಗಾಣದಲೆ ಮರುಳಾದವು ।
ಅನಂತ ವೇದಗಳಿಂದ ಭಾರತ ಪುರಾಣದಿಂದ।
ಮತ್ತೆ ಕೆಲವು ಗುಣಕಾಂಬ ಚತುರ್ಮುಖನು ।
ಇದರ ಅನಂತ ಮಡಿಯಿಂದ ಲಕುಮಿನಿನ್ನ
ಆನಂದ ಗುಣಗಳು ತುತಿಸಿ ತುತಿಸೀ ।
ನಖದ ಬಣ್ಣಗಾಣದೆ ಆನಂದ ವಾರಿಧಿಯೊಳು ಮುಳುಗಿದಳು ।
ಮುಕ್ತಾಮುಕ್ತರಿಂದ ವಂದಿತ ಚರಣಾಬ್ಜ ।
ಗುರು ಪುರಂದರ ವಿಠ್ಠಲ ಅಗಾಧ ಮಹಿಮಾ ॥೩॥

## ಅಟ್ಟತಾಳ

ಅನಂತ ದೇಶದಲ್ಲಿ ಅನಂತ ಕಾಲದಲ್ಲಿ |
ಅನಂತ ಗುಣಗಳಿಂದ ಅಪರಿಚ್ಛಿನವಾದ |
ಸಮಾಭ್ಯಧಿಕ ನಿನ್ನಾನಂತ ರೂಪ |
ರೋಮ ಕೂಪಗಳಲ್ಲಿ ಪ್ರತಿ ಪ್ರತಿ ಬೊಮ್ಮಾಂಡ |
ಡೊಳಗಜ ಭವಾದಿ ಸುರರು ತುತಿಸುತಿರೆ |
ಮೇರೆ ಗಾಣದಲಿಪ್ಪ ನಿಬಿಡವಾದ ವಿಶ್ವ |
ರೂಪನ ಕಂಡು ಅಚಿಂತ್ಯ ಮಹಿಮನೆಂದು
ಲಕುಮಿ ಭ್ರಾಂತಳಾಗಿ ಕಡೆಗಾಣದೆ | ನಿಂದು |
ಗುರು ಪುರಂದರ ವಿಠಲ ಸರ್ವೋತ್ತಮನೆಂದು ಧೇನಿಪಳೊ ಸುಖಭರಿತಳಾಗಿ ||೪||

## ಆದಿತಾಳ ಏಕತಾಳ

ಒಂದೊಂದವಯವದಲ್ಲಿ ಸಾಯುಜ್ಯವಿಪ್ಪದು |
ಗರುಡ ಶೇಷ ಇಂದ್ರ ಕಾಮರಿಗೆ
ಚಂದ್ರ ಸೂರ್ಯ ಮೊದಲಾದಮರರು ಪ್ರತಿ |
ಪ್ರತಿ ಅವಯವದೊಳು ಮುಕ್ತರೆನಿಸುವರೊ |
ಅಚ್ಛಿನ್ನ ಭಕ್ತ ಮುಖ್ಯಪ್ರಾಣಗೆ ಸರ್ವಾಂಗ
ಸಾಯುಜ್ಯ ಕೊಡುವೆ ಗುರು ಪುರಂದರ ವಿಠಲ
ಎಣಿಸಲಳವೆ ನಿನ್ನ ಗುಣಂಗಳನೂ ||೫||

## ಜತೆ

ಆದಿ ಮಧ್ಯಾಂತಗಳಿಲ್ಲದೆ ಅಪಾರ |
ಗುಣಪೂರ್ಣ ಗುರು ಪುರಂದರ ವಿಠಲರೇಯಾ ||೬||

## ೧೩) ಸುಳಾದಿ

ರಾಗ : ಧ್ರುವತಾಳ

ಅಣು ಮೂರುತಿಗಳು ನಿತ್ಯವಾಗಿ ।
ಒಂದಾನಂತ ನಿನ್ನಲ್ಲಿ ಇಪ್ಪವು ಗಡಾ ।
ಮಹಾಮೂರುತಿಗಳು ನಿತ್ಯವಾಗಿ ।
ಒಂದಾನಂತ ನಿನ್ನಲ್ಲಿಪ್ಪವು ಗಡಾ ।
ಅಣು ಮಹಾಮೂರುತಿಗಳು ತಮ್ಮೊಳುಭೇದ ।
ಇನಿತು ಯಿಲ್ಲದ ಪರಬೊಮ್ಮ ಗಡಾ ।
ಎಂತೊಪ್ಪುವದು ಭೂತವಾಗಿಪ್ಪುವದು ಅನಂತಾನಂತ ಮಹಿಮಗಡಾ ।
ಎಂತೊಪ್ಪ ಮೂರುತಿಯಾ ।
ಒಂದಾಡಡೆ ಒಮ್ಮೆ ಚಿಂತಿಸುವ ಭಕುತರಿಗೆಲ್ಲ ।
ಸಂತತ ನಿನ್ನನೆ ತೆತ್ತಯ್ಯ ಸುಲುಭತೆ ಆ
ಅಂದೆಂತೊಘೋ ಗುರು ಪುರಂದರ ವಿಠಲ ॥೧॥

### ಮಟ್ಟತಾಳ

ಸಕಲ ಸುರರು ತಮ್ಮ ಮತಿಯೊಳಲ ವಿನಲಿ ।
ಸಕಲೇಶನ ಸ್ವರೂಪವರಿವರು ಮಹಾ ।
ಸಕಲ ವೇದ ರಚಿಸುವ ಚತುರ್ಮುಖ।
ಹರಿಯು ಸ್ವರೂಪ ವರಿವವನು ಹಾಹಾ
ಸಕಲ ವೇದ ವರಿಯದವನ ಹಲವ ।
ಲಕುಮಿ ಅರಿಯದದನಂತ ಸ್ವರೂಪ ।
ನಿಕರ ಗುರು ಪುರಂದರ ವಿಠಲಗೆ ॥೨॥

### ರೂಪಕತಾಳ

ಸತ್ಯಲೋಕದಿಂದ ಮತ್ತೆ ಮೇಲಾದ ।
ಹನ್ನೆರಡು ಕೋಟಿ ಯೋಜನದಲ್ಲಿ ವೈಕುಂಠ ಪಟ್ಟಣದಲ್ಲಿ ।
ಶ್ರೀಭಾಗ ಭೂಭಾಗ ದುರ್ಗಾಭಾಗಂಗಳನ್ನೆ ಏರ್ಪಡಿಸೀ ।
ಅದರೊಳು ಮುಕ್ತರ ಭಾಗ ಪಟ್ಟವನಾಳುವ ಅಜಗೆ ।
ವರಗಳೀವ ವಾಸುದೇವನು ಒಂದು ರೂಪನಾಗಿ ।
ಮುಕ್ತ ಭಾಗದಲ್ಲಿ ಉಳ್ಳ ರೂಪದಲ್ಲಿ ಸಾಯುಜ್ಯ
ಕೊಟ್ಟನು ಕೋಟಿ ಅನಂತಾನಂತ
ಬೊಮ್ಮರನು ಒಂದೊಂದು ರೋಮ ಕೂಪದಲ್ಲಿ
ಅವಿರಳ ಬೊಮ್ಮಾಂಡನಂತಿರಿಸಿರದ್ಭುತ ಚರಿತ
ಗುರು ಪುರಂದರ ವಿಠಲ ಮಹಮಹಿಮಾ ॥೩॥

### ಅಟ್ಟತಾಳ

ಅನಂತ ದೇಶದಲ್ಲಿ ಅನಂತ ಕಾಲದಲ್ಲಿ ।
ಅನೇಕ ಗುಣಗಳಿಂದ ಅಪರಿಚ್ಛಿನ್ನನಾಗಿ ।
ಸಮಭ್ಯಧಿಕ ರಹಿತನಾಗಿ ಬೊಮ್ಮಾಂಡ ।
ಒಂದೊಂದು ರೋಮ ಕೂಪದಲ್ಲಿ ತುರಗಿಪ್ಪೆ ।
ಪ್ರತಿ-ಬೊಮ್ಮಾಂಡಗಳಲ್ಲಿ ಅಜ ಭವಾದಿ ಸುರರು
ಅನಂತ ಜೀವರಾಸಿಯಿಂದ ಭರಿತರಾಗಿ ।
ನಿನ್ನನಂತ ರೂಪಗಳ ನಿಬಿಡಿಯಾದ ವಿಶ್ವವ
ನು ಕಂಡು ಭ್ರಾಂತಳಾಗಿ ಲಕುಮಿ ಚರಣಕಮಲವನ್ನು ।
ವಂದಿಸಿ ಗುರು ಪುರಂದರ ವಿಠಲ ಸರ್ವೋತ್ತಮ ।
ನೆಂದು ಧೇನಿಸಿಪಳೆಂತೊ ಸುಖಭರಿತಳಾಗಿ ॥೪॥

### ಆದಿತಾಳ

ಶ್ರೀಭಾಗದಿ ಭೂ ಭಾಗದಿ ದುರ್ಗಾ ಭಾಗದಿ ತ್ರಯ ರೂಪಳಾಗಿ
ಭೂ ದುರ್ಗಾಳೆನಿಪ ಸಿರಿದೇವಿ ತನ್ನ ನಿಜರೂಪಗಳಿಂದ |
ಮುಕ್ತ ಸರ ಸಿರಿದೇವಿಯರು ನಿಂತೋಲಗವನು ಮಾಡಲು ಲಕುಮಿ
ಹರಿಯಂ ಪೂಜೆಯ ಮಾಳ್ಪಳು ಮುಕುತಿ-ದಾಯಕ
ಗುರು ಪುರಂದರ ವಿಠಲ ತನ್ನ ಶರಣರಿಗೆ ನಿಜ ಮುಕ್ತಿಸೇವಾ ||೫||

### ಜತೆ

ಸೇವೆಯೊಳಧಿಕ ಲಕುಮಿ ದೇವಿಯಂತೆ ಮಾಳ್ಪರಿಲ್ಲಲ್ಲಿ |
ಅದೆ ಪ್ರಸಾದದಿಂದ ಚತುರ್ಮೊಗ ಮೊದಲಾದ ಸುರರಿಗೆ |
ನಮ್ಮ ಗುರು ಪುರಂದರ ವಿಠಲ ಸಲಹುವನಲ್ಲದೆ ಸರ್ವಕಾಲದಲಿ ||೬||



## ಜೀವರ ಸ್ವರೂಪ ತದ್‌ಬಿಂಬ ಹರಿರೂಪ ಲಯ ಸೃಷ್ಟ್ಯಾದಿ ವಿಸ್ತಾರ

### ೧೫) ಸುಳಾದಿ

**ರಾಗ : ಶಂಕರಾಭರಣ** **ಧ್ರುವತಾಳೆ**

ಗಜದಲ್ಲಿ ಗಜರೂಪನಾಗಿ |
ಅಶ್ವದಲ್ಲಿ ನೀನು ಅಶ್ವರೂಪನಾಗಿ |
ದೇಹಾಂತರ್ಯಾಮಿ ದೇಹದಲ್ಲಿ |
ಎಂಥ ಅವಯವಗಳಂಥಾ ರೂಪ |
ಚಲನೆ ಶಕ್ತಿಯಲ್ಲಿ ದೇಹಪ್ರಮಾಣ |
ಯೆಂಥದೊ ಅಂಥ ರೂಪವೆ ಗಜದಲ್ಲಿ |
ಗಜರೂಪನಾಗಿ ಕಾಲನಾಮಕನಾಗಿ
ಕಾಲಾಗ್ನಿ ಯೋಪಾದಿಯಲ್ಲಿ |
ನೀ ನುಂಗುವೆ ಭುವನಂಗಳ ತಡವಿಲ್ಲದಲೆ |

### ತ್ರಿವಿಡಿ ತಾಳೆ

ವಾಮನ ರೂಪನಾಗಿ ಪಾದದಲ್ಲಿ ಭೂಮಿನಿಯೊಳಡಗಿದ್ದ ಬಲಿಯರಿನೆ ಹಾಹಾ |
ಅಮ್ಮಿಯೊಳುಂಬ ಮುದ್ದು ಬಾಯೊಳು ಬೊಮ್ಮಾಂಡವಿದ್ದದ್ದೆಳೆಶೋದೆ
ಅರಿಯಳೆ ಹಾಹಾ |

ನಮ್ಮಗುರು ಪುರಂದರ ವಿಠಲನ್ನ ಮಹಿಯೊಳನುಭವ
ಪ್ರಮಾಣವಲ್ಲವೆ ಹಾಹಾ ||೩||

### ಅಟ್ಟೆತಾಳೆ

ಹರಿ ಇಲ್ಲದಿರೆ ಜಗವಿರಲರಿಯದಾಗೀ |
ಹರಿ ಇಚ್ಛೆಯ ಮೀರಿ ಸ್ಮರಿಸಲರಿಯದಾಗಿ |
ಹರಿಯ ಸೋಜಿಗ ವೆಂದು ಭ್ರಮಿಸುವರು ಅಲ್ಲಿ |
ವಿರುದ್ಧ ಧರ್ಮವ ವಿಚಾರಿಸರು ವಂಪು |
ಹರಿಯೇ ಜಗ ಪರಾಧೀನ ಈ ಜಗವೆಲ್ಲವು |
ನಮ್ಮಗುರು ಪುರಂದರ ವಿಠಲ ಸ್ವಾತಂತ್ರ ||೪||

### ಆದಿತಾಳೆ

ಅರಿದೀಗರಿದು ಶ್ರೀಹರಿಯ ಮಹಿಮೆ ಇದ |
ನರಿವಾರರು ಜಗದೊಳಗಿದೆ ನರಿವರಾರು ನಮ್ಮ |
ಗುರು ಪುರಂದರ ವಿಠಲನ್ನ ಮಹಿಮೆ ಇದನಮ್ಮ |
ಗುರು ಮಧ್ವಮುನಿಯೊ ಸೇವಕನಲ್ಲದೆ ||೫||

### ಜತೆ

ಅಂತಿಂತೆನ್ನಬಹುದೆ ಅಚಿಂತ್ಯೆ |
ಗುರು ಪುರಂದರ ವಿಠಲರೇಯಾ ಅಗಾಧಮಹಿಮಾ ||೬||



## ೧೪) ಸುಳಾದಿ

ರಾಗ ಧ್ರುವತಾಳ

ಅನಂತ ವೇದಗಳಿಂದ ನಿನ್ನ ತುತಿಸುವ ಅಜಗೆ ।
ಅನಂತ ವೇದಗಳಿಂದ ಅಗೋಚರನಾಗಿ ।
ಅನಂತ ವೇದಗಳಲ್ಲವೆ ಮತ್ತಾಪಾರ ।
ಗುಣಂಗಳ ಬಲ್ಲ ಚತುರ್ಮುಖನಿಂದರಿಯದ ।
ಅಪರಿಮಿತ ಮಹಿಮೆಯ ।
ಎಲ್ಲೆಲ್ಲಿ ರೂಪ ಮತ್ತಲ್ಲಲ್ಲಿ ಗುಣಂಗಳು ।
ಸರ್ವ ರೂಪಗಳಲ್ಲಿ ವ್ಯಾಪ್ತಳಾಗೀ ।
ಲಕುಮಿ ತಾ ದೇಶತಾ ಕಾಲತಾ ವ್ಯಾಪ್ತಳೆನಿಪಳಲ್ಲದೆ ।
ಗುಣಗಳ ಕಡೆಗಾಣದ ಮಿತಿಯ ಪರಾಧೀನತೆ ಎಂಬಲ್ಲಿ ।
ಸರಸಿಜ ಸಂಭವನ ಸ್ತೋತ್ರದಂತೆ ವೇದಗಳು ।
ತದಾನುಸರವಾಗಿ ವರ್ತಿಸುವದಲ್ಲದೆ ।
ಇದು ಬೇರೆ ಆತನ ಸ್ತುತಿ- ಬೀರೆಲ್ಲ ।
ವೇದಾನುಸಾರವಾಗಿ ಪುರಾಣಂಗಳು । ವಿರಚಿಸಿದ ವ್ಯಾಸನೆನಿಪ ।
ಗುರು ಪುರಂದರ ವಿಠಲರೇಯ ಅನಾದಿ ಕಾಲದಲ್ಲಿ ॥೧॥

### ಮಟ್ಟತಾಳ

ಅಧಿಕಾರ ಪರವರಿತು ಅವರ ಸ್ವರೂಪದಿರವ ।
ಅನಾದಿ ಕಾಲದಿಂದ ಬಲ್ಲನಾಗೀ ।
ಸೋಮ ಸೂರ್ಯ ಇಂದ್ರಾದಿ ಪದಗಳ ನೀವಲ್ಲಿ ।
ಅನಾದಿ ಕಾಲದ ಗತಿಗಳ ನೋಡಿ ।
ಕೊಡುವ ನೀತನೊ ಪರಮ ಮುಕುತಿ-ದಾಯಕ ।
ನಮ್ಮ ಗುರು ಪುರಂದರ ವಿಠಲ ಅನಂತಚರಿತಾ ॥೨॥

ಮಕ್ಕಳಾಟಿಕೆ ಮನೆಯಂತೆ ಯಿಚ್ಛೆಯಿಂದಲಿ ।
ಸೃಜಿಸುವೆ ಯೆಂದರೆ ಭಕುತರಾಧೀನನಾಗಿ ।
ಪರಿ ಪರಿಯಲಿ ಮತ್ಸ್ಯಮೂರುತಿ- ।
ಗುರು ಪುರಂದರ ವಿಠಲರೇಯ ॥೧॥

## ಝಂಪೆತಾಳ

ನಿಧಿ ಯೆನಗುಂಟೆಂದು ನಿಧಿಯೆನ್ನದೆಂಬರು ।
ನಿಧಿಯ ನೀನು ಆಳುವೆ ನಿಧಿಯೆಂಬ ಜಡಪ್ರಕೃತಿ ।
ಯಿಂದ ಸರಸಿಜ ಭವರಿಗೆ ಪರಿಮಿತವಾದ ಕಾಲದಲಿ ।
ನಿಧಿಯನೀವ ಕಾರಣ ನೀನು ನಿನ್ನ ಪ್ರೇರಣೆ ।
ಯಿಂದ ಅಜಭವಯಿಂದ್ರವಸು ದಿಕ್ಪಾಲಕರಿಗೆ ।
ನಿನ್ನ ಪ್ರೇರಣೆಯಿಂದ ಸ್ವರಮಣನು ನೀನು ।
ಸುರರಿಗೆಯಿತ್ತೆ ಅಪಾರಗುಣನಿಧಿ ಗುರು ಪುರಂದರ ವಿಠಲ ॥೨॥

## ಆದಿತಾಳ

ರತ್ನನಾಳಗಳುಂಟು ಪರಿಮಿತಿ ವುಂಟು ।
ಪರಾಧೀನತೆವುಂಟು ನಿರುಪಾಧಿಕವಾಗಿ ।
ಆ (ಅ)ಧೀನವಲ್ಲದ ಸರ್ವಧಾರ ನೀನು ।
ಅಜನ ಶತಾಬ್ಧ ಹನ್ನೆರಡುವರೆವರುಷವಿರೆ ।
ಹಗಲೆ ಆರಂಭದಿ ಲಯದಿ ಮಾನುಷ ನೂರು ವರುಷ
ಆಧೀನ ವಲ್ಲದ ಸರ್ವಾಧಾರ ನೀನು
ಅನಾವೃಷ್ಟಿಯಿಂದ ಸಮಸ್ತ ಪ್ರಾಣಿಕ್ಷಯವೊ (೧)
ಅನಂತ ತೇಜದಿಂದ ಸೂರ್ಯ ಶತವತ್ಸರ ತಪಿಸೆ ।
ಪಾತಾಳದಲ್ಲಿದ್ದ ಶೇಷಮುಖದಿಂದ ।
ಸಂಪೃತಾಗ್ನಿ ಪೊರವಂಟು ಸಮಸ್ತವನು ದಹಿಸೆ (೨)

ಪ್ರಚಂಡವಾಯು ಶತವತ್ಸರ ಬೀಸೆ (೩)
ಸಂವ್ರರ್ತ ಮೇಘ ಶತವತ್ಸರ ಮಳೆಗರೆಯೆ ।
ಕರಿಯ ಸೊಂಡಿಲ ಪೋಲ್ವ ಧಾರೆಯಿಂದ ಕೆಡಲು (೪)
ಸರ್ವಾಧಾರಕ ಗುರು ಪುರಂದರ ವಿಠಲ ।
ಸರ್ವಾಧಾರ ನೀನು ಸಮ್ಮ ಮಹಾಪ್ರಳಯ ವಿಭಾಗ ॥೩॥

## ರೂಪಕತಾಳ

ಪೃಥಿವಿಗೆ ಅಪ್ಪು ಅಪ್ಪುವಿಗೆ ತೇಜ ।
ತೇಜಸ್ಸಿಗೆ ವಾಯು ಮರುತಗೆ ಆಕಾಶ ।
ಆಕಾಶಲೆಂದ್ರಿಯ ರೂಪವಾದ ।
ಮನಸು ವೈಕಾರಿಕ ತೈಜಸ ದೇವತೆಗಳು ।
ಮನಸು ತತ್ವದ ಲಯವು ।
ಮಹತತ್ವ ತ್ರಯೋದಶ ಭಾಗದಿ ಕೂಡಿಪ್ಪದು ।
ದ್ವಾದಶ ರಜಸಿನೊಳು ದಶಸತ್ವದಲ್ಲಿಪ್ಪುದು ।
ಒಂದು ರಜಸು ರಜಸಿನಲ್ಲಿ ।
ಒಂದು ರಾಜಸ ತಾಮಸದಲ್ಲಿ ।
ತಾಮಸ ವೊಂದು ಕೂಡಿ ಹದಿ ।
ಮೂರುಭಾಗ ವಕ್ಷಸ್ಥಳದಲ್ಲಿಪ್ಪುದು ।
ಸಾಮ್ಯಾವಸ್ಥೆಯಲ್ಲಿ ಸ್ಥಳಬಿಟ್ಟು ಮಹತತ್ವ ಕೂಡಿಹುದು ।
ವಿಷಮಾವಸ್ಥೆ ಸೃಷ್ಟಿಯರಚಿಸುವ ಗುರು ಪುರಂದರ ವಿಠಲ ॥೪॥

## ಝಂಪಿತಾಳ

ಸಾತ್ವೀಕ ಭಾಗಗಳ ಮಾಡಿ ನೀನು ವೊಂದು ವರಹದ ತೂಕ ।
ಸೂಕ್ಷ್ಮವನು ಪೇಳಿದ ಸಾಸಿರ ವರಹದ ತೂಕ ।
ಸಾತ್ವಿಕ ವೊಂದು ವರಹದ ತೂಕ ತಾಮಸವು ।

ತಾಮಸದ ಹತ್ತು ಮಡಿ ರಾಜಸದಿಂದ ।
ಬೊಮ್ಮನ ಶರೀರದಲ್ಲಿ ಯೀಹವು ।
ಸಾತ್ವಿಕ ಭಾಗದೊಳು ಹತ್ತುಮಡಿಯೊಳಗೆ ।
ಒಂದು ಭಾಗದಿ ನೂರು ಭಾಗದೊಳೊಂದೊಂದು ಹತ್ತುಮಡಿ ರಾಜಸ ।
ತಾಮಸಾವಸ್ಥೆ ಯಿಂತು ರುದ್ರನ ದೇಹಮೂಲಕೆಯಿದ್ದು ।
ತಾಮಸ ಭಾಗವಂ ಮೂರು ಭಾಗವಂ ಮಾಡಿ ।
ಒಂದು ಭಾಗದಿ ಪಂಚ ಭೂತಗಳನ್ನು ದಶೇಂದ್ರಿಯಂಗಳನ್ನು ಸೃಜಿಸಿ ।
ಇಂತು ತಾರತಮ್ಯಾನು ಸಾರದಿ ।
ಗುಣಭಾಗವಂ ಮಾಡಿ ಮೆರೆವ ।
ಗುರು ಪುರಂದರ ವಿಠಲಯ್ಯ ॥೫॥

## ತ್ರಿವಿಡಿತಾಳ

ಉತ್ತುಮರಲಿ ನೀಚರಲಯ ।
ದೇವತೆಗಳಿಗೆ ಧನಪ ವಿಷಕ್‌ಸೇನಗೆ ವರುಣ ।
ವರುಣಗೆ ಚಂದ್ರ ಚಂದ್ರಗೆ ಅನಿರುದ್ಧ ।
ಅನಿರುದ್ಧ ಸನಕಾದಿಗಳಿಗೆ ಕಾಮ ।
ಕಾಮಗೆ ವಾರುಣಿ ವಾರುಣಿಗೆ ಶೇಷ ।
ಇದುಶೇಷ ಮಾರ್ಗವಿದು ।
ಅವಶಿಷ್ಟ ದೇವತೆ ಗಗ್ನಿ ಅಗ್ನಿಗೆ ಆದಿತ್ಯ ।
ಸೂರ್ಯಗಾಕಾಶ ಪೃಥಿವಿಗಭಿಮಾನಿಗೆ ಗುರು (೧) ।
ಮಾನುಷೋತ್ತಮರು ಸರ್ವಪಿತರು
ನಿಋಋತಿಗೆ ಯಮನು ಯಮ ಕೆಲವು ಮನುಗಳು ।
ಪ್ರಿಯವ್ರತನಿಗೆ ಸ್ವಾಯಂಭುವ (೨) ಭೃಗ್ವಾದಿಗೆ ದಕ್ಷ (೩) ।
ಸ್ವಾಯಂಭು ದಕ್ಷ ಗುರು ಮರುತಗಳಿಗೆ (೪) ಯಿಂದ್ರ ।
ಇಂದ್ರಗೆ ಸೌಪರಣಿ ಸೌಪರಣಿಗೆ ಗರುಡ ಗರುಡಮಾರ್ಗವಿದು ।
ಗರುಡ ಶೇಷಗೆ ವಾಣಿ ವಾಣಿಗೆ ಚತುರ್ಮುಖನು । (೧)

ಆತಗೆ ಪುನ್ನಾಮಕ ಬೊಮ್ಮ ಆತಗೆ ಕಾಲಬೊಮ್ಮ। (೨)
ಪುನ್ನಾಮಕಗೆ ಸಿರಿದೇವಿ ಸಿರಿದೇವಿಗೆ ।
ಅಚ್ಯುತನ ಅತಿ ಸಾಮಿಪ್ಯದಿ ಲಯವು ।
ಬೊಮ್ಮಾದಿಗಳನು ಅವ್ಯಾಕೃತದ ವಿರಜೆಯಲ್ಲಿ ।
ಮುಳುಗಿಸಿ ಲಿಂಗ ಶರೀರ ಭಂಗವನ್ನು ಮಾಡಿ ।
ಉದರ ದೊಳಿಟ್ಟುಕೊಂಡು ಪ್ರಳಯೋದಕದಿ ।
ಸಿರಿಯಾಗೆ ಭೂದೇವಿ ವಟಪತ್ರವಾಗೆ ।
ಏಳುಕೋಟಿಯೋಜನಮಿತ ಬಾಲಕನಾಗಿ ದುರ್ಗೆ ತನು ವ್ಯಾಪಿಸೆ
ಆಲದೆಲೆಯ ಮೇಲೆ ಗುರು ಪುರಂದರ ವಿಠಲ ಪವಡಿಸಲು
ಸಕಲ ಜಗವೆಲ್ಲ ಸುಷುಪ್ತಿಯನ್ನೈದಲು
ಮುಖ್ಯಪ್ರಾಣನೊಬ್ಬ ನೆಚ್ಚತ್ತಿಹನುಗಡ ।
ಆರಾತ್ರಿಯ ನೂರುವರುಷ ಯಂಟನೆ ।
ಭಾಗದೊಳಿಂದಿರೆ ದುರ್ಗೆ ಜಯ ಜಯವೆಂದು ಸ್ತುತಿಸಲು
ಸೃಷ್ಟಿಯ ಮಾಡೆನೆಂದು ಯೆಚ್ಚತ್ತನು ||೬||

## ಅಟ್ಟತಾಳ

ಅನಾಲೋಚನೆಯಿಂದ ಲಕ್ಷ್ಮಿದೇವಿಯು
ಅಂಗೈಯ ಗೆರೆಯಂತೆ ಕಾಂಬೊಳು ।
ಇಂತು ಬೊಮ್ಮಾಂಡದ ವೊಳಹೊರಗುಳ್ಳ ।
ಗುಣಂಗಳ ಪ್ರವಹದಂದದಿ ಕಾಂಬಳಯ್ಯ ।
ಆಲೋಚನೆಯಿಂದ ಮಹತತ್ವಗುಣತ್ರಯ ।
ಮೂಲದಿಂದಕಾಂಬನು ಯಿದರೊಳೊಂದು ।
ಲಕ್ಷುಮಿ ಕಂಡಂತೆ ನಿರ್ದುಷ್ಟದಿಂದ ಕಾಣುವಲ್ಲಿ ಭೇದ ।
ಅನಾಲೋಚನೆಯಿಂದ ತೆರೆಮರೆಯಿಂದ ।
ಕಾಣುವಂತೆ ಈಶ ಗರುಡ ಶೇಷ ಅನಂತಗುಣದಿಂದ ।
ಬೊಮ್ಮ ನಿಂಗ ಕಡಿಮೆ ಕಾಣುವರು ।

ಎಲ್ಲರಿಂದ ಭೇನಿಸಿ ಕೊಂಡು ಅಪ್ರಮೇಯನಾಗಿ ।
'ಪ್ರೀತಿ' ಎಂಬ ಶ್ರುತಿ- ಪ್ರತಿಪಾದ್ಯ ।
ಗುರು ಪುರಂದರ ವಿಠಲರೇಯ ।
ಇಂತು ಬೊಮ್ಮಾಂಡ ಹೊರಗೊಳಗುಳ್ಳ ।

### ಏಕತಾಳ

ಚತುರ್ಮುಖ ತನ್ನ ಸೃಷ್ಟಿ ವ್ಯಾಪಾರ ಕಾಲದಲ್ಲಿ ।
ಅನಂತ ಮೂರುತಿಗಳ ಉಪಾಸನೆಯಿಂದ ಕಾಂಬನು ।
ಧ್ಯಾನದಿ ಕುಳಿತು ಪರಿಮಿತವಾದ ಕಾಲದಲ್ಲಿ ।
ಬಿಂಬ ಮೂರುತಿಯನು ಪ್ರವಾಹದಿಂದ ಕಾಂಬುವನು ।
ಗಿರೀಶನು ಯೆಂಟರೊಳೊಂದು ಭಾಗದಿ ।
ಪ್ರವಹ ದಂದಲಿ ನೋಡುವನು ।
ಜೀರ್ಣ ವಸ್ತ್ರ ತೆರೆಯಿಂದ ಕಾಂಬಂತೆ ।
ಪ್ರವಾಹದಿಂದ ಯಿಂದ್ರಾದಿಗಳಿಗೆ ಇಂದ್ರಕಾಮ ।
ಗರುಡ ಶೇಷ ರುದ್ರರ ಅಪರೋಕ್ಷಕಾಲ ।
ಎಂಟು ಭಾಗವ ಮಾಡಲು ವೊಂದು ಭಾಗದಿಂದ ಪ್ರವಾಹೆ
ಅಪರೋಕ್ಷ ದಿಂದ ಕಾಂಬುವರು ಸ್ಪಷ್ಟಾರ್ಥದಲ್ಲಿ ಭೇದ ।
ಗುರು ಪುರಂದರ ವಿಠಲನ ಕೀರುತಿಯೇನಂಬೆ
ಧ್ಯಾನದಿ ಕುಳಿತು ಪರಿಮಿತ ಕಾಲದಲ್ಲಿ

### ಜತೆ

ಸನಕಾದಿಗಳು ಹಂಸೆಯಂತೆ ಕಮಲದಿನಲಿದ ಮೂರುತಿಯನು ।
ಮನುಜೋತ್ತಮರೆಂಬ ಮನ ಅಂಬರದಲಿ ಕೋಲುಮಿಂಚಿನಂತೆ ।
ಥಳಥಳಿಸುವ ಗುರು ಪುರಂದರ ವಿಠಲ ॥೯॥

## ಓಂಕಾರ, ಮಂತ್ರವರ್ಣಗಳ ಉತ್ಪತ್ತಿ

(ತಂತ್ರಸಾರ) (ಪ್ರಕಾಶಸಂಹಿತೆ ಅಧ್ಯಾಯ ೧ ರಲ್ಲಿರುವಂತೆ)

### ೧೬, ಪದ

ರಾಗ : **ಸಾವೇರಿ** **ಝಂಪಿತಾಳ**

ಪಾಹಿ ಪಂಕೇರು ಹೇಕ್ಷಣ ಸರ್ವ ಕಾಮದಾ |
ಪಾಹಿ ಪದ್ಮಾಲಯ ನಿಕೇತನ ಸದಾ ||ಪಲ್ಲ|
ಜಯತು ಚತುರಾನನ ಭವೇಂದ್ರಾದಿ ವಿಭುದನುತ |
ಜಯತು ಚತುರಾನನ ರಮಾವಲ್ಲಭಾ ||
ಜಯತು ಸುಖಪೂರ್ಣ ಚಿತ್ಸುಖಮುಖ ಸುಗುಣ ನಿಲಯ |
ಜಯತು ಜನ್ಮಾದಿ ಕಾರಣ ದೋಷಹ ||೧||

ಕಮಲಾಕ್ಷ ಪರಮ ಸಂಭ್ರಮದಿಂದ ಲಕ್ಷ್ಮಿಕರ |
ಕಮಲದಿಂ ಸೇವೆಗೊಳುತಿರಲು ಆಗ ||
ಅಮರ ನಿಕರಾರಾಧ್ಯ ಕಮಲಾಸನನು ಬಂದು |
ನಮಿಸಿ ಬಿನ್ನೈಸಿದನು ತನ್ನ ಪಿತಗೆ ||೨||

ಆವ ಸರ್ವೋತ್ತಮನು ಆವಾವಗುಣಗಳಿಹ್ಯ |
ವಾವಾವ ಶಬ್ದ ವಾಚ್ಯಾವರೀತೆ ||
ಈ ವಿಚಾರವನು ಪೇಳೆನಲು ನಸುನಗುತ ರಾ |
ಜೀವ ಸಂಭವಗೆ ಯಿನಿತೆಂದು ನುಡಿದ ||೩||

ವನಜ ಸಂಭವ ಕೇಳು ನಾನೇ ಸರ್ವೋತ್ತಮನು |
ಯನಗೆ ನಂತಾನಂತ ಮಂಗಳಗುಣ ||
ಪ್ರಣವ ವಾಚ್ಯನು ನಾನೆ ಅಷ್ಟವರಣೋಪೇತು |

ಪ್ರಣವ ವಿಚಾರವನು ಪೇಳ್ವೆನಿನಗೆ ||೪||
ಸಾದರದಿ ಕೇಳಿನ್ನ ಕಾರುಕಾರ ಮಕಾರ |
ನಾದಬಿಂದು ಘೋಷ ಶಾಂತತಿಶಾಂತವು |
ಈ ದಿವ್ಯ ವರ್ಣದಲಿ ವಿಶ್ವತೈಜಸ ಪ್ರಾಜ್ಞ |
ಮೋದಮಯ ತುರ್ಯಾತ್ಮ ಅಂತರಾತ್ಮ ||೫||

ಪರಮಾತ್ಮ ಜ್ಞಾನಾತ್ಮ ಯೆಂಬಷ್ಟ ರೂಪದಿಂ |
ದಿರುತಿಹನು ವೇದಾದಿಯಲಿ ಸರ್ವದ |
ಪರಮ ಋಷಿಗಳು ಈ ಮಹಮಂತ್ರ ಜಪಿಸೆನ್ನ |
ಪುರವ ನೈದಿದರೊ ಸತ್ವರ ದಿಂದಲಿ ||೬||

ವಾರಿರುಹ ಸಂಭವನೆ ಕೇಳಕಾರದಲಿ ಹದಿ |
ನಾರು ಅಚ್ಚುಗಳು ಜನಿಸಿದವೊ ಕ್ರಮದಿ |
ಚಾರು ಅಜ ಆನಂದ ಇಂದ್ರೇಶ ಮೊದಲಾದ |
ಯಿಾರೆಂಟು ರೂಪಗಳು ವಿಶ್ವಜನಿತ ||೭||

ಉಮ ನಾದ ಬಿಂದು ಘೋಷಗಳಿಂದ ಕಚ ಟತಪ |
ವಿಮಲ ವರ್ಗ ಗಳು ಪುಟ್ಟಿದವು ಐದು |
ಕಮಲಭವ ಕೇಳು ತೈಜಸ ಪ್ರಾಜ್ಞತೂರ್ಯ ಆ |
ತುಮ ಅಂತರಾತ್ಮ ಮೂರ್ತಿಗಳಿಂದಲಿ ||೮||

ಪಂಚವಿಂಶತಿ ರೂಪ ಅಭಿವ್ಯಕ್ತವಾದವು ವಿ |
ರಂಚಿಕೇಳ್ ಶಾಂತದಿಂ ಯರಲವ ಗಳು ||
ಸಂಚಿಂತಿಸ್ಯೆತಿ ಶಾಂತದಿಂದ ಶಷಸಹಳ |
ಪಂಚಾಕ್ಷರಗಳು ಜನಿಸಿದವೊಯಿಲ್ಲಿ |೯||

ಪರಮಾತ್ಮ ಜ್ಞಾನಾತ್ಮ ರೂಪದಿಂದೊಭತ್ತು |
ನಿರುಪಮ ಸ್ವಮೂರ್ತಿಗಳು ಶೋಭಿಸಿದವು ||
ಪರಮೇಷ್ಠಿ ನಾರಾಯಣಷ್ಟಾಕ್ಷರ ಮಂತ್ರ |
ವರವೆನಿಸಿನಗಾನು ಸಾಂಗೋಪಾಂಗದಿಂ ||೧೦||

### ( ನಾರಾಯಣ ಅಷ್ಟಾಕ್ಷರಮಂತ್ರ ಉತ್ಪತ್ತಿ )

ತಾರಗತ ಅಷ್ಟವರ್ಣಗಳಿಂದ ಓಂನಮೋ
ನಾರಾಯಣ ಯೆಂಬೀ ಮಂತ್ರವೂ ।
ಚಾರು ಅಷ್ಟಾರ್ಣ ತದ್ವಾಚ್ಯ ಮೂರ್ತಿಗಳೆಂಟು ।
ಸಾರವಿಶ್ವಾದಿ ಪ್ರಣವಸ್ಥ ಭಿನ್ನ ॥೧೧॥

### ( ವ್ಯಾಹೃತಿಮಂತ್ರ ಉತ್ಪತ್ತಿ )

ಓಂ ಭೂಃ ಓಂ ಭುವಃ ಓಂ ಸ್ವಹಃ ।
ಓಂ ಭೂರ್ಭುವಸುವಹ ಈ ವ್ಯಾಹೃತೀ ।
ಅಂಬುಜೋದ್ಭವ ಪ್ರಣವಾದಿ ನಾಲ್ವರಣದಿಂ ।
ಸಂಭವಿಸಿತೀಮಂತ್ರ ಸುಲಭದಿಂದ ॥೧೨॥

ತನಯ ಕೇಳೀಮಂತ್ರ ಗತ ನಾಲ್ಕು ರೂಪಗಳು ।
ಅನಿರುದ್ಧ ಪ್ರದ್ಯುಮ್ನ ಸಂಕರುಷಣ ।
ಅನಘ ಶ್ರೀ ವಾಸುದೇವನ ಮೂರ್ತಿಗಳು ಚಿಂ ।
ತನೆ ಮಾಡು ಈ ವ್ಯಾಹೃತಿಯಲಿ ಬಿಡದೆ

### ( ವಾಸುದೇವ ದ್ವಾದಶಾಕ್ಷರ ಮಂತ್ರ )

ನಿಗಮಾದಿ ಮೊದಲು ನಾಲ್ವರ್ಣದಿಂ ಓಂ ನಮೋ ॥
ಭಗವತೇ ವಾಸುದೇವಾಯ ಯೆಂಬಾ ।
ಯುಗಳ ಆರಕ್ಷರಾತ್ಮಕ ಮಂತ್ರ ಪ್ರತಿಪಾದ್ಯ ।
ಭಗವದ್ರೂಪಗಳ ಪೇಳುವೆ ನಿನಗೆ ಕೇಳು ॥೧೪॥
ಕೇಶವ ನಾರಾಯಣನು ಮಾಧವ ಗೋವಿಂದ ।
ಕ್ಲೇಶ ನಾಶನ ವಿಷ್ಣು ಮಧುಸೂದನ ॥
ಶ್ರೀಶ ತ್ರಿವಿಕ್ರಮನು ವಾಮನ ಶ್ರೀಧರ ಹೃಷಿ ।
ಕೇಶಾಂಬುರೂಹನಾಭ ದಾಮೋದರ ॥೧೫॥

## ( ಗಾಯತ್ರಿ ಮಂತ್ರ ಉತ್ಪತ್ತಿ )

ತೃತೀಯ ಆವರ್ತಿ ಅಷ್ಟಾರ್ಣದಿಂ ಮೂರು ವ್ಯಾ ।
ಹೃತಿಯಿಂದ ದ್ವಿಷಡಕ್ಷರ ಯೆರಡರಿಂದ ।
ಚತುರಾಶ್ಯ ಕೇಳು ಗಾಯಿತ್ರಿ ಉತ್ಪನ್ನ ವಾ ।
ಯಿತು ಕೇಶವಾದಿ ಕೃಷ್ಣಾಂತರೂಪ । ॥೧೬॥

## ( ಪುರುಷಸೂಕ್ತ ಅಭಿವ್ಯಕ್ತಿ ಯಿದರಿಂ ವೇದಾದಿಗಳು )

ವಿತತವಾದವು ಪುರುಷಸೂಕ್ತ ಗಾಯಿತ್ರಿಯಿಂ ।
ದತುಳ ಈ ಪುರುಷಸೂಕ್ತದಲಿ ವೇದ ॥
ತತಿಗಳುದಿಸಿದವು ನಿಗಮಾದಿ ಬ್ರಹ್ಮ ಸೂತ್ರ ಭಾ ।
ರತ ಪಂಚರಾತ್ರಾದಿ ಆಗಮುಗಳು ॥೧೭॥

ಶತಕೋಟಿ ಮೂಲ ರಾಮಾಯಣ ಪುರಾಣಗಳು ।
ಸ್ಮೃತಿ ಸಮೂಹಗಳುಪ ಪುರಾಣಗಳು ।
ಇತರ ವೇದೋಕ್ತ ಸುಶಬ್ದ ಜನಿಸಿದವು ಸಂ
ತತ ವಾಚ್ಯನಾನೆ ಸಂದೇಹವಿಲ್ಲ ॥೧೮॥

## (ಓಂ ಕಾರಾದಿ ಪ್ರತಿಪಾದ್ಯ ಭಗವದ್ರೂಪಗಳ ವರ್ಣನೆ)

ಉದಯಿಸುವ ರವಿಯವೋಲ್ ಕಾಂತಿ ಜ್ಞಾನಾನಂದ ।
ಮುದವೋದ ದಿವ್ಯ ಗುಣಮಯ ಶರೀರ ॥
ಸುದರುಶನ ದರ ಗದಾಂಬುಜಗಳಾಯುಧ ವೆನಗೆ ।
ತ್ರಿದಶಗಣಮಯನು ಸರ್ವೇಶನಾನು ॥೧೯॥

ಇದ್ದ್ಯೈಸೆಯ ಲೆನ್ನ ಸೇವಿಪರು ಶ್ರೀ ಭೂದೇವಿ ।
ಕೃದ್ಧ್ಯೋಲ್ಕ ವಿಶ್ವ ಕೇಶವ ಮತ್ಸ್ಯಾದಿ ॥
ಮದ್ರೂಪ ಗಣ ಮಧ್ಯಗನು ನಾನು ಬ್ರಹ್ಮಫಣಿ ।
ಪಾದ್ಯರತಿ ಭಕ್ತಿಸೇವ್ಯನು ಸಮರ್ಥ ॥೨೦॥

ಅರಿದರ ವರಾಭಯಯಂಕಿತ ಚತುರ್ಭುಜನುನಾ |
ಲ್ಕೆರಡು ರೂಪಂಗಳು ಪ್ರದೀಪವರ್ಣಾ |
ಸರುವಾಭರಣ ವಿಭೂಷಿತವಾದ ಮದ್ರೂಪ |
ನಿರುತ ಮೇಯವು ಮುಮುಕ್ಷುಗಳಿಂದಲಿ ||೨೧||

## ( ಉಪಸಂಹಾರ )

ತಾರ ನಾರಾಯಣಾಷ್ಟಾಕ್ಷರವು ವ್ಯಾಹೃತಿಯು |
ಈರಾರು ವರ್ಣ ಗಾಯತ್ರಿಮಂತ್ರ |
ಸಾರ ಮಾತೃಕ ಪುರುಷಸೂಕ್ತ ವೈಷ್ಣವಗಳಿವು |
ನೀರಜಾಸನಕೇಳು ಮಹಮಂತ್ರವೊ ||೨೨||

## ( ಫಲಸ್ತುತಿ )

ಸೀತಾರಮಣ ಮೂಲರಾಮನತಿ ಹರುಷದಿ ವಿ |
ಧಾತಗುಪದೇಶಿಸಿದ ಈತೆರದಲಿ |
ಪ್ರೀತಿಯಿಂದಲಿ ನಿರಂತರದಲಿಯಿದು ಪಠಿಸೆ ಶೇ |
ಷಾತಪತ್ರನು ಕಾಮಿತಾರ್ಥವೀವ ||೨೩||

ಬ್ಯಾಗವಾಟದರಂಗ ವೊಲಿದ ಶ್ರೀನರಸಿಂಹ |
ಭಾಗವತರುಣಗ ಶ್ರೀ ಜಗನ್ನಾಥದಾಸ |
ಬಾಗಿ ವಿಜ್ಞಾಪಿಸಲು ಕೈಕೊಂಡು ಪರಮಾನು
ರಾಗದಲಿ ಪೇಳಿದೆವು ತಂತ್ರಸಾರ ||೨೪||

ಕರುಣಾಬ್ಧಿ ವಸುಧೀಂದ್ರರಾಯರ ಕೃಪಾಬಲದಿ |
ವಿರಚಿಸಿದೆ ವೀಗ್ರಂಥ ಪದ ರೂಪದಿ ||
ಅರಸಿಕನು ನಿಂದಿಸಲು ಕುಂದಾವದಿದಕೆ ಭಾ |
ಸ್ಕರನುದಯ ಘೂಕ ದೂಷಿಸಿದ ತೆರವು ||೨೫||

ಧರ್ಮಾರ್ಥಕಾಮ ಮೋಕ್ಷಗಳೀವ ಗ್ರಂಥವಿದು |
ನಿರ್ಮಾಣ ಮಾಡಿಸಿದ ರಾಮಚಂದ್ರ |
ಭರ್ಮಗರ್ಭಗೆ ವೊಲಿದು ಪೇಳಿದ ಮಹಾಮಂತ್ರ |
ಮರ್ಮಗಳನರಿತು ಜಪಿಸುವನೆಧನ್ಯ ||೨೬||

ವರದೇಂದ್ರ ಮುನಿರಚಿತ ಈ ತಂತ್ರ ಸಾರವನು |
ಬರದೋದಿಕೇಳಿ ಮೋದಿಪಸುಜನರ |
ವರಮೂಲರಾಮ ವೇದವ್ಯಾಸರಿಹಪರದಿ |
ಕರುಣಿಪರು ಬೇಡಿದಿಷ್ಟಾರ್ಥಗಳನು ||೨೭||

ಮಂಗಳ ರಮಾಪತಿಗೆ ಮಂಗಳ ದ್ರುಹಿಣ ಪಿತಗೆ |
ಮಂಗಳ ದಶಪ್ರಮತಿ ಮುನಿಮಾನ್ಯಗೆ |
ಮಂಗಳ ಶಿವೇಂದ್ರಾದಿ ಸುರನಿಕರ ಪೂಜ್ಯಗೆ |
ಮಂಗಳ ಜಗದ್ವಿಲಕ್ಷಣ ಮೂರ್ತಿಗೆ ||೨೮||

ಇಪ್ಪತ್ತರೊಂಭತ್ತು ಪದಗಳೆಂಬತಿವಿಮಲ |
ಪುಷ್ಪಮಾಲಿಕೆ ಮೂಲರಾಮನಡಿಗೆ |
ಅರ್ಪಿಸಿದೆವೀಸುಮನ ನಾಮವನುದಿನದಲ್ಲಿ |
ಒಪ್ಪದಿಹ್ಯದೇ ಬುಧರ ಮಸ್ತಕದಲಿ ||೨೯||



ಪ್ರಣವ ಮಂತ್ರ–ಓಂಕಾರದಿಂದ ೫೧ ವರ್ಣಗಳ ಸೃಷ್ಟಿ

## ೧೭) ಸುಳಾದಿ

ರಾಗ ಧ್ರುವತಾಳ

ಪ್ರಣವ ಮಂತ್ರವ ಗ್ರಹಿಸು ಪ್ರಣುತನಾಗಿ ಸ |
ಜ್ಜನರು ಪದೇಶದಿಂದ ಅನುಗ್ರಹ ನೋಡುವದು |
ಅನಾದಿಯಿಂದ ಬಂದ ಅನುಭವ ಸಿದ್ಧಜನಕೆ ಅಮೃತಾಶನ |
ಪ್ರಣವತಾರಕ ತಾರ ಪ್ರಥಮವ್ಯಾಹೃತಿ ಶೀರ್ಷ |
ಘನ ಓಂಕಾರ ಆದ್ಯೋಚ್ಚರಣೆ ಬೀಜ |
ಯಿನಿತಾಭಿಧಾನದಿಂದ ವೊಪ್ಪುತದಲೆ ನಿತ್ಯ |
ಅನಂತ ವರ್ಣಾತ್ಮಕ ಜಡ ಪ್ರಭೇದ |
ಮನುಜಾದಿ ವಿಡಿದು ಬ್ರಹ್ಮಸಿರಿತನ ಕಾಲೋ |
ಚನೆ ಮಾಡುವರು ತಮ್ಮ ಯೋಗ್ಯತದನಿತು |
ಪ್ರಣವೆ ಮಂತ್ರವೆ ಸರ್ವಮಂತ್ರ ತಂತ್ರಕ್ಕೆಯಿದೆ |
ಜನಕವಾಗಿಪ್ಪೊದು ಕಲ್ಪಕಲ್ಪ |
ಪ್ರಣವಮಂತ್ರವೆಗ್ರಹಿಸು ಯಲೋಮನವೆ |
ಗುಣಕಾಲ ಕರ್ಮ ವರ್ಣಾಶ್ರಮ ಧರ್ಮರೂಪ ಕ್ರೀಯ |
ಮನೊವಾಚಕಾಯದಲ್ಲಿ ನಿರ್ಮಳನಾಗಿ |
ಎಣಿಸಬೇಕು ಅನುಕ್ರಮ ದಿಂದಲಿ |
ಪ್ರಣವ ಧ್ಯಾನವಮಾಳ್ಪ ಯಿದರ ವಿಸ್ತಾರವ |
ವನಜ ಸಂಭವನಿದಕೆ ಅಧಿಕಾರನೋ |
ಗುಣತ್ರಯ ಮೊದಲು ಮಾಡಿ ಧರತತ್ವಪರಿಯಂತ |
ಕ್ಷಣ ಬಿಡದೆ ಯೆಣಿಪ ಬಹು ಅಂಶಿ ಅಂಶ |
ತೃಣಜೀವಾದಿ ವಿಡಿದು ಅಂತರ ಬಾಹಿರ |
ಚಿನುಮಯ ಮೂರುತಿ ವಿಜಯವಿಠಲರೇಯ
ಪ್ರಣವ ಪ್ರತಿಪಾದ್ಯನೊ ಅಶೇಷಗುಣಧಾರಕ ||೧||

## ಮಟ್ಟತಾಳ

ಆ ಉ ಮ ನಾದ ಬಿಂದು ಘೋಷ ಶಾಂತತಿಶಾಂತ ।
ಈ ವರಣಗಳಗುಂಟು ಪ್ರಮಾಣಾತ್ಮಕವೆನ್ನಿ ।
ಈ ವಿಧವನೆ ತಿಳಿದು ಅಕಾರ ಅಕ್ಷರಲಿ ।
ಅವರ್ಗವೆಯೆಂಟು ಉದುಭವಿಸಿದವೆನ್ನು ।
ಕೋವಿದನಾಗಬೇಕೊ ತಿಳಕೊಂಡು ಮಾತ್ರ ।
ಸಾವಿರ ಶಿರನಮ್ಮ ವಿಜಯ ವಿಠಲರೇಯನ ।
ಭಾವದಲಿ ನಿಲಿಸಿ ವೊಲಿಸಿ ವಿಶ್ವಾದಿಗಳ ॥೨॥

## ತ್ರಿವಿಡಿತಾಳ

ಅವರ್ಗ ಹದಿನಾರು ಕ ಪ ವರ್ಗವೆ ಐದು ।
ಈ ವಿಧ ಅಯಿದೈದು ಯಿಪ್ಪತ್ತೈದು ।
ಯ ವರ್ಗ ನಾಲ್ಕು ಕ ವರ್ಗ ಪಂಚಕೂಡೆ ।
ಈ ವರ್ಣಯೆಣಿಸಲು ದಶಪಂಚವೊ ।
ಪಾವಿತ್ರವಾಗಿದೆ ಕ ಷ ಕೂಡಿಸಲಾಗಿ ।
ಕ್ಷ ವರಣವಾಯಿತು ವೊಂದೈವತ್ತು ।
ಆ ವಿಶ್ವಗೆ ಹದಿನಾರು ತೈಜಸಂತಖಾತ್ಮ ।
ದೇವಗಳಿಗೆ ಯಿಪ್ಪತ್ತೈದು ಸಿದ್ಧ ।
ಪಾವನ ಪರಮಾತ್ಮ ಜ್ಞಾನಾತ್ಮಗೆ ವೊಂಭತ್ತು ।
ಸೇವಿಸುವದು ಯಿವು ದ್ವಿತಿಯ ವರಣಾ ।
ಯಾವತ್ತು ಸ್ವರವರಣ ವೊಂದೊಂದು ಬಗೆಯಿಂದ ।
ಆವಾವ ಸ್ವರದಲ್ಲಿ ಕೂಡಿಸಲು
ಕವರ್ಗಾದಿಗೆ ದೀರ್ಘ ಹ್ರಸ್ವ ಕನ್ನೆಮಾತ್ರ ।
ವೋವತ್ತುಬಿಂದು ವಿಸರ್ಗದಿಂದ ।
ಮಾವತ್ತೈದಕೆಕೇಳು ವೊಂದಕೆದ್ವಿಷಟ್ ಪರಿಯು ।
ಈ ವಿಧ ತಿಳಿವಿಂಶತಿಚತುರಶತ ।

ದೇವದೇವೇಶ ನಮ್ಮ ವಿಜಯ ವಿಠಲರೇಯ ।
ಜೀವೋತ್ತಮನಿಂದ ಪೂಜೆಗೊಂಬನಿಲ್ಲಿ ॥೩॥

### ಅಟ್ಟತಾಳ

ಆ ಓಂಕಾರ ಬೀಜ ಯೆಂಟರಿಂದಲಿ ಸತ್ಯ ।
ಈ ವರ್ತಮಾನಕ್ಕೆ ಅಭಿವ್ಯಕ್ತಿಯಾಯಿತು ।
ಅವರ್ಗವಿಾಗಿಲಾಗಿ ಯಂಟು ವರ್ಗಗಳೈದು ।
ಕ್ಷನೊಂದು ಕೂಡಿಸೆ ಯೇಕ ಪಂಚಾಶತಿ ।
ಸುವರ್ನವಾಗಿ ವೊಪ್ಪುತಿವೆಯಿವು ವ್ಯಾಪ್ತಿ ।
ತಾವುತಾವಿಲಿವುಂಟು ಸ್ವರಸಂಯೋಗವಾಗೆ ।
ಮೂವತ್ತು ಹತ್ತು ಮೇಲೆ ನೂರುಯಿಪ್ಪತ್ತು ।
ಈ ವರ್ಣಗಳೆಲ್ಲ ಗುಣಿತ ಮಾಡಲಾಗಿ ।
ಭಾವಿಸುವದು ವರ್ಣೋ ವರ್ಣಸಂಯೋಗ ।
ಕ ವೊಂದಕ್ಕೆ ನೋಡು ಮೂವತ್ತೈದರಂತೆ ।
ಈ ವಿಚಾರ ಮಾತ್ರಕೆ ಎಣಿಸಾಲು ಹದಿನಾಲ್ಕು ।
ಸಾವಿರದೇಳು ನೂರು ಲೇಖ್ಯವನ್ನು ।
ಶ್ರೀ ವಲ್ಲಭ ನಮ್ಮ ವಿಜಯ ವಿಠಲರೇಯ ।
ಕಾವುತಲಿಪ್ಪನು ಈಪರಿ ತಿಳಿದವನ ॥೪॥

### ಆದಿತಾಳ

ಯಿದರೊಳುಯಿನ್ನುವುಂಟು ಪಾದರ್ಧದಿವುಚ್ಚಾರಣೆ ।
ಯಿದೆ ಅನಂತಾನಂತ ವರ್ಣಗಳಾಗೋವು ।
ಯಿದರಲ್ಲಿ ಉಪನಿಷತು ಸರ್ವವೇದಪುರಾಣ ।
ಮುದದಿಂದ ಪಂಚರಾತ್ರ ಬ್ರಹ್ಮತರ್ಕರಾಮಾಯಣ ।
ಸುಧಿಯಾದಿ ಭಾಗವತ ಯೋಗಶಾಸ್ತ್ರಭಾರತ ।

ಪದೊ ಪದಿಗೆ ಕರ್ಮಭೇದ ಮೀಮಾಂಸ ಸಕಲ ನಿರ್ಣಯ ।
ಒದಗಿ ತುಂಬಿಹವು ವೈದಿಕ ಲೌಕಿಕಶಬ್ದ ।
ಯಿದರಿಂದ ಕಮಲಾಸನ ಹರಿಯಲ್ಲಿ ಸಮನ್ವಯ ।
ಉದಯಾಸ್ತಮಾನ ಬಿಡದೆ ದುಃಖಶಾಬ್ದಾ ತುಚ್ಛಾ ।
ಮೊದಲಾದ ವಾಕ್ಯದಿಂದ ಮಾಡುವ ಮಹಾಜ್ಞಾನಿ ।
ಅದರಕಾರಣಹರಿ ಅಖಿಳವರಣಾತ್ಮಕ ।
ನಿಧಿಯಾದ ಓಂಕಾರ ಪ್ರತಿಪಾದ್ಯನೆನಿಸುವ ।
ಪದುಮೆ ವಿರಂಚಿ ವಾಯು ಖಗ ಶೇಷ ರುದ್ರೇಂದ್ರ ।
ಮದನ ಸೂರ್ಯೇಂದು ಮಿಕ್ಕ ।
ತ್ರಿದಶ ಮಹಾಮುನಿ ಸರ್ವಚೇತನಕೆ ಕೂಡೋದಯ್ಯ ।
ಉದಧಿ ದರ್ಶನದಂತೆ ಎಲ್ಲರಿಗೆ ಸಾಧ್ಯವೆನ್ನು ।
ಸದಮಲ ಮೂರುತಿ ವಿಜಯ ವಿಠಲರೇಯ ।
ಯದುಕುಲೊತ್ತುಮ ಕಾಣೊ ಭಕ್ತರ ಸಲಹುವ । ॥೫॥

ಜತೆ

ತಾರ ವಿಚಾರ ವಿಚಾರತನದಲಿ ಗ್ರಹಿಸು ।
ಧಾರಕ ಶಕುತಿಯಿಂದ ವಿಜಯವಿಠಲ ಬಲ್ಲ ॥೬॥



## ಓಂಕಾರದಿಂದ ಮಂತ್ರಗಳ ಸೃಷ್ಟಿ

### ೧೮) ಸುಳಾದಿ

**ಧ್ರುವತಾಳ**

ಸತ್ಯ ಸಂಕಲ್ಪ ಸಿದ್ಧ ಅನಾದಿದೈವ ।
ಸತ್ಯ ಸತ್ಯವು ನಿನ್ನ ಮಹಿಮೆ ಪ್ರತಾಪ ।
ಸತ್ಯವೆ ನಿನ್ನ ಗುಣಜ್ಞಾನ ಪರಿಪೂರ್ಣ ।
ಸತ್ಯವೆ ನಿನ್ನ ಲೀಲೆ ಜಗವನಡಿಸುವದು ।
ಸತ್ಯವೆ ನಿನ್ನಾನಂದ ಸಕಲೈಶ್ವರ್ಯ ।
ಸತ್ಯವೆ ನಿನ್ನ ಕಪಟನಾಟಕತನವು ।
ಸತ್ಯವೆ ನಿನ್ನ ವ್ಯಾಪ್ತಿ ಅಣೋರಣಿಯಲ್ಲಿ ।
ಸತ್ಯ ಪರಾಕ್ರಮ ವಿಜಯ ವಿಠಲ ನೀನೆ ।
ಸತ್ಯವಂತನಲ್ಲದೆ ಮತ್ತಾರವುಂಟೆ ॥೧॥

**ಮಟ್ಟತಾಳ**

ವರಣ ಭರಿತದಲ್ಲಿ ವರಣ ನ್ಯಾಮಕನಾಗಿ ।
ವರಣಾಂತರ್ಯಾಮಿ ವರನಾಮಕದಲ್ಲಿ ।
ಕರಸಿಕೊಂಡೆ ಓಂಕಾರವೆಂಬೊ ಶಬ್ದಾ ।
ಕ್ಷರ ಮೂರರಿಂದ ಪರಿಮಿತವಾಗಿ ।
ಪರತರ ದೂರ ವಿಜಯ ವಿಠಲ
ಹಿರಣ್ಯ ನಾಭನೆ ಸಿರಿದೇವಿಯರಸ ।
ಸರುವೋತ್ತಮ ಸಗುಣ ಸರ್ವೋತ್ತಮ ಸಗುಣ ॥೨॥

**ತ್ರಿವಿಡಿತಾಳ**

ಆರು ಅಕ್ಷರದಿಂದ ವ್ಯಾಹೃತಿ ಮಂತ್ರ ವಿ ।
ಸ್ತಾರವನು ಮಾಡಿ ಪ್ರಕಾಶಿಸಿದೆ ।

ಸಾರವನುಹರಹಿ ಚತುರ ವಿಂಶತಿ ಅ |
ಕ್ಷಾರದಿಂದಲಿ ಸಾ ಗಾಯತ್ರಿ ಬೆಳಸಿ |
ಬೇರಿಳಿದಂತೆ ಪುರುಷಸೂಕ್ತ ರಚಿಸಿ ಆ |
ಧಾರವೆನಿಸಿದೆ ಅನಂತ ಶ್ರುತಿಗೆ
ತಾರಕ ಬ್ರಹ್ಮಕೃತು ವಿಜಯ ವಿಠಲ ವೇದ ಸಂಚರಿಸುತಿಪ್ಪೆ ||೩||

**ಅಟ್ಟತಾಳ**

ನಾಶರಹಿತನಾಗಿ ಅಚ್ಯುತನೆನಸಿದೆ |
ಸಾಸಿರ ಸಂಖ್ಯ ನಿಗಮ ಪ್ರತಿಪಾದ್ಯ |
ಲೇಸಾಗಿ ಗೋವಿಂದನೆಂದು ಕರೆಸಿಕೊಂಡು
ಭಾಸಿತಾವಾನಂತನಂತ ನೆನಸಿದೆ
ಈಶಾದ್ಯರಿಗೆ ಈಶ ವಿಜಯ ವಿಠಲನೆ ಸ
ರ್ವೇಶ ಶುದ್ಧ ದೈವವೆ ಅಪ್ರತಿ |೪||

**ಆದಿತಾಳ**

ರಜೋಗುಣಾತ್ಮಕವಾದ | ತ್ರಿಜಗವನ್ನು ಪುಟ್ಟಿಸಿ ವ |
ನಜ ನಾಭಿಯೆಲ್ಲಿಪೊತ್ತು | ಅಜನ ಪಡೆದ ತತ್ವ |
ವೃಜದಲ್ಲಿ ಅಭಿಮಾನ್ಯರ | ಸೃಜಿಸಿ ಸಂಘಟನೆಯಿಂದ
ಪ್ರಜಾಪತಿಗೆ ನೇಮಿಸಿ | ನಿಜ ತ್ರಿಧಾಮದಲ್ಲಿ ಪಂ |
ಕಜ ಪಾಣಿಸೇವೆಯಿಂದಾಂ | ಗಜ ಕೋಟಿ ಲಾವಣ್ಯಾ |
ಪ್ರಜಾ ಪತಿಯೆಂಬನಾಮ | ವಿಜಯ ವಿಠಲರೇಯ |
ಅಜರಾಮರಣ ರಹಿತ | ಅಜಭುಜಗಾದಿದಾತ |
ಸುಜನರಮನೋವಾಸ | ಕುಜನಶೈಲ ಕುಲಿಶ ||೫||

**ಜತೆ**

ಅಂತರ ಬಹಿರದೊಳು ವ್ಯಾಪಿಸಿವ್ಯಕ್ತದಲ್ಲಿ |
ತಂತು ವರ್ಧನಾ ವಿಜಯ ವಿಠಲ ನೀನದ್ಭುತ |'೬||



## ೫೧ ಅಕ್ಷರ ವಿವರ ಅಲ್ಲಿಪ್ಪ ಹರಿರೂಪ

### ೧೯) ಸುಳಾದಿ

ರಾಗ : ರೇಗುಪ್ತಿ ಧ್ರುವತಾಳ

ಚಿಂತನೆ ಮಾಡು ಮನವೆ ಚಿನ್ಮಯ ದೇವನ್ನ ಯೇ ।
ಕಾಂತದಲಿಯಿದ್ದು ಯೆಲ್ಲ ಕಾಲ ।
ಸಂತರ ವೊಡಗೂಡಿ ಸಾರಿಸಾರಿಗೆ ನಿನ್ನ ।
ಅಂತರಂಗದಲ್ಲಿ ಅಲೋಚಿಸಿ ।
ನಿಂತಲ್ಲಿ ಕುಳಿತಲ್ಲಿ ನಾನಾವ್ಯಾಪಾರದಲ್ಲಿ ।
ಚಿಂತಿಸು ಶ್ರೀಹರಿಯಾನಂತರೂಪ ।
ಇಂತೆಂತು ನೋಡಿರದರಂತೆ ತೋರುತಲಿಪ್ಪ ।
ಮಂತ್ರತಂತ್ರಕ್ಕೆ ಶಿಲುಕನು ಭಕ್ತಿಗೊಶನೊ ।
ಸಂತತ ನಿರ್ದೋಷ ಭಕ್ತವತ್ಸಲ ಕರುಣಿ ।
ಅಂತಕನಂತಕವು ಉಭಯ ಜೀವಿಗಳಿಗೆ ।
ಸಂತೋಷದಲಿ ಚರಿಯಾಮಾತ್ರ ಲೀಲಾ ।
ಕಂತು ಕೋಟಿ ಲಾವಣ್ಯಾಮಿಗೆ ಶೋಭಿಸುವ ಆ ।
ದ್ಯಂತ ಕಾಲರಹಿತ ತ್ರಿಗುಣಾತೀತ ।
ಸಂತಾಪನಾಶ ಪ್ರೋದಾರಂಭಿಸಿ ಕೊಂಡು ।
ನಂತ ಸೂರ್ಯಪ್ರಕಾಶ ತರತಮ್ಯದಿ ।
ತಂತು ನಾಳದಲಿಂದ ದಿಗ್ದಂತಿ ಬಿಡಸಿಕೊಂಡು ।
ನಿಂತಂತೆ ನಿಂತು ಕೊಂಡಿಪ್ಪ ಮಹಿಮ ।
ಎಂತು ಭಾವಿಸಲು ವುಪಾಸ್ತಿಯ ಕೊಡುವ ಶ್ರೀ
ಕಾಂತನು ಪ್ರಸಿದ್ಧದಿಂದ ತಾನೆ ।
ಚಿಂತಾಯಕ ನಮ್ಮ ವಿಜಯ ವಿಠಲರೇಯ
ಮುಂತಿ (ತೆ) ನಲಿದಾಡುವ ಭಾಗ್ಯವಬೇಡು ನೋಡು ॥೧॥

## ಝಂಪೆತಾಳ

ಕಾ ಮೊದಲು ಕ್ಷಾ ಕಡೆ ಮೂವತ್ತೈದು
ಈ ಮಹವರ್ಣಗಳು ಯಿದರ ವಿವರ ತಿಳಿವದು ।
ಆ ಮರಿಯಾದಿಗಳು ಪದಿನಾರುವುಂಟು ।
ವ್ಯೋಮ ವ್ಯಾಪಿಸಿದಂತೆ ಸರ್ವದ ವರ್ಣಗಳು ।
ಸಾಮಸ್ತ ಬಗೆಯಿಂದ ವ್ಯಾಪ್ತವಾಗಿವೆ ನೋಡಿ ।
ಸಾಮ ಋಗಿಲಾದ ಶಾಸ್ತ್ರ ವೈದಿಕಶಬ್ದ ।
ಭೂಮಿಯೊಳಗಾಡುವ ಲೌಕಿಕ ಶಬ್ದಗಳು ।
ಈ ಮಹ ವರ್ಣದಲಿ ಪ್ರವರ್ತಕವಲ್ಲದಲೆ
ಕಾಮಿಸಿದರೆ ವೊಂದು ಪ್ರಯೋಗ (ಜನ) ವಿನ್ನಿಲ್ಲ ।
ಭೂಮ ಭೂತೇಶ್ವರ ವಿಜಯ ವಿಠಲರೇಯನ ।
ನಾಮ ಮೂರ್ತಿಗಳೆಂದು ಚಿಂತಿಸು ಪ್ರಣವದಲಿ ॥೨॥

## ತ್ರಿವಿಡಿತಾಳ

ಕಾವೊಂದು ಗುಣಿಸಿದರೆ ಹದಿನಾರು ಬಗೆವುಂಟು ।
ಆವಾವ ಕಾಲಕ್ಕೆ ನೋಡಿದರು ।
ಭಾವಿಸು ಕ ಕಿ ಕು ಕೆ ಕೈ ಕೊ ಕೌ ಕಂ ।
ಈ ವಿಧ ಹ್ರಸ್ವಯಿದರಂತೆ ದೀರ್ಘ ।
ಯಾವತ್ತು ಈ ಪರಿಯಿದರಂತೆ ನಿಜವೆಂಮು ।
ಕೋವಿದನಾಗಿ ನೀ ತಿಳಿಯಬೇಕು ।
ಕಾ ವರಣದ ರೂಪದಿ ಕಪಿಲಾದಿ ಹದಿನಾರು ।
ಈ ವೊಳಗಿನ ಹದಿನಾರು ರೂಪ ।
ದೇವನ್ನ ನಾಮಗಳು ಅಜಾದಿಗಳ ಸಂಖ್ಯೆ ।
ಮೂವತ್ತೆರಡು ಭಗವದ್ರೂಪಗಳು
ಪಾವನ ಮೂರುತಿ ವಿಜಯ ವಿಠಲರೇಯ
ಆವಾಗ ವರ್ಣಾಧಿಷ್ಟಾನದಲ್ಲಿ ಯಿಪ್ಪ ॥೩॥

### ಅಟ್ಟತಾಳ

ಇದರ ವಿಹಿತ ವೊಂದೊಂದು ವರಣಕ್ಕೆ ।
ಆದರಂತೆ ಕ ಚ ಟ ತ ಪ ಯ ಶ ವ ।
ಗರ್ದಲ್ಲಿ ಯೆಣಿಸಿ ಕಷಮಿಳಿತವಾದ ।
ಇದನ್ನೆಲ್ಲ ಕೂಡಿಸಿ ಪಂಚ ತ್ರಿಂಶತಿ ಯಾ ।
ದದು ಕಾಣೋ ಯಿದರೊಳು ಅ ಆ ಇ (ಇ) ವುಂ ಎಂಬ
ಹದಿನಾರು ಯಿಡಲಾಗಿ ಕ ಅಃ ವಾದು ।
ಇದನ್ನೆಲ್ಲ ವೊಂದೊಂದು ಯೇ ಕಾಕ್ಷರದಿಂದ ।
ಪದುಮ ನಾಭನು ಕರಸಿಕೊಂಬನು ಕೇಳಿ ।
ಅದೆ ಅದೆನಾಮ ಮತ್ತದೆ ಆದೆ ರೂಪದಿ ।
ಒದಗಿ ಯೆಣಿಸಲಾಗಿ ಮೂವತ್ತೆರಡುನಾಮ ।
ಸದಮಲವಾಗಿವೆ ಅರವತ್ತು ನಾಲಕು ।
ಮೊದಲಾರಂಭಿಸಿ ಮೂವತ್ತೈದಕ್ಕೆ ನೋಡು ।
ಮುದದಿಂದ ಗುಣಿಸಲು ವೊಂದೊಂದು ವರ್ಣಕ್ಕೆ ।
ಅದೆ ಪ್ರಕಾರದಲಿ ಅರವತ್ತು ನಾಲ್ಕುವುಂಟು ।
ಅಧಿಕಾರತನ ಭೇದ ಧ್ಯಾನ ಮಾಡುವದಕ್ಕೆ ।
ಪಧುಮ ಗರ್ಭನ್ನೈಯ್ಯ ವಿಜಯ ವಿಠಲರೇಯ ।
ಪದವಿಯ ಕೊಡುವನು ಈಪರಿ ಕೊಂಡಾಡೆ ॥೪॥

### ಆದಿತಾಳ

ಆವನಾದರು ಹಳಿಯಲಿ ಉಗುಳಲಿ ।
ಆವನಾದರು ಬೈಯ್ಯಲಿ ಕಾಯಲಿ ।
ಆವನಾದರು ಹೊಡೆಯಲಿ ತಡೆಯಲಿ ।
ಆವನಾದರು ಪೊಗಳಲಿ ಅಟ್ಟಲಿ

ಆವನಾದರು ವುಣಿಸಲಿ ವುಡಿಸಲಿ ।
ಆವನಾದರು ಛೀ ಛೀ ಯೆನಲಿ ।
ಆವನಾದರು ಥೂಥೂ ಅನಲಿ ಆವನಾದರು ಭಂಗಿಸಲಿ ಮ ।
ತ್ತಾವನಾದರು ಹಿಂಗಿಸಲಿ ।
ಆವನಾದರು ಯೇನೆನಲಿ ।
ಆವನಾದರು ಈ ವರ್ಣಗಳು ಭಗವನ್ನಾಮಗಳೊ ।
ಜೀವನ ಮುಕ್ತನು ಈ ವಿಧದಿ ತಿಳಿದವನು ।
ನೋವು ನೋವುಗಳಲ್ಲಿ ಪಾವನವಾದ ಭಕುತಿಯಲಿ ಸ್ವ ।
ಭಾವಿತ ನೀನಾಗೊ ಜ್ಞಾನಿ ನೀನಾಗೊ ।
ಯಾವತ್ತು ಯಿಂದ್ರಿಯಗಳ ವ್ಯಾಪಾರ ಸೇವೆ ಶ್ರೀಹರಿಗೆನ್ನು
ತ್ರೈವಿಧ ಜೀವರು ಯಿದನೆ ತೊರೆದು ಮ ।
ತ್ತಾವದು ಆಡುವರೊ ವರ್ಣಗಳಿಲ್ಲದಲೆ ।
ದೇವದೇವೇಶನ್ನ ವೊಲಿಸಬೇಕಾದರೆ ।
ಈ ವುಪಾಯವಬೇಕು ಯೆಲ್ಲಿದ್ದರು ಕೇಳು ।
ಕಾವಜನಕನಮ್ಮ ವಿಜಯ ವಿಠಲರೇಯ ।
ಆವಾವ ವರ್ಣಗಳಂತೆ ವೊಳಗಿದ್ದು ।
ಕಾವನು ಶರಣರನು ವೊಡನೊಡನೆ ಬರುವ ॥೫॥

## ಜತೆ

ಅಕ್ಷರಾಕ್ಷರದಿಂದ ಭಗವನ್ನಾಮವೆ ಚಿಂತಿಸು ।
ಅಕ್ಷರಕ್ಷರ ಪುರುಷ ವಿಜಯ ವಿಠಲ ಸುಳಿವ ॥೬॥



# ಶ್ರೀ ವಿಜಯ ವಿಠಲ ಕೃತ (ಕಾಲವಿವರಣೆ)

## ( ಪ್ರಕಾಶ ಸಂಹಿತಾ ಅಧ್ಯಾಯ ೩ ರಂತೆ )

## ೨೦) ಕಾಲಾಖ್ಯ ಸುಳಾದಿ

ರಾಗ: ಭೈರವಿ ಧ್ರುವತಾಳ

ಅಣುದ್ವಯ ಪರಮಾಣು ಯಿಂಥಾದೆ ತ್ರಯವಾಗೆ |
ತ್ರಣುಯೆನಿಸಿ ಕೊಂಬೋದು ಯಿದೆ ತೃಸರೇಣು |
ಮನುಜಾಗೋಚರವೆನ್ನು ಜಾಲಾರ್ಕಕಿರಣಾದಲ್ಲಿ |
ಘನವಾಗಿ ಚರಿಸುವ ದೇಶಭೇದ |
ಇನಿತು ತ್ರಸರೇಣು ತೃಟಿ ತೃಟಿ ಮೂರುಯೆಂಬೋದು |
ಅನಿಸಿಕೊಳುತಲಿದೆ ವೊಂದು ವೇಧ |
ತ್ರಣಿವೇಧವೊಂದಲವ ಯಿಂಥವು ಮೂರಾಗೆ |
ಎಣಿಸು ನಿಮಿಷಾವೆಂದು ನಿಮಿಷ ಮೂರು |
ಕ್ಷಣವಾಗುವದು ಕೇಳಿ ಮರಳೆ ಚನ್ನಾಗಿ ಐದು |
ಕ್ಷಣ ಕೂಡಿದರೆ ವೊಂದು ಕಾಷ್ಟಯೆನ್ನಿ |
ಅನುಮಾನಮಾಡಸಲ್ಲ ಹದಿನೈದು ಕಾಷ್ಟಾಲೋ |
ಚನೆಮಾಡುವೊಂದು ಲಘುವುಸಿದ್ಧವಕ್ಕು |
ಗುಣಿಸು ಹದಿನೈದು ಲಘುವುವೊಂದು ನಾಡಿಯೆಂದು |
ಇನಿತು ಆರೇಳುಯೆಂಟು ವೊಂದುಯಾಮಾ |
ಎಣಿಕೆಗೈಯೊ ಯಿಂಥಯಾಮ ಚತುಷ್ಟವಾಗೆ |
ದಿನಮಣಿ ಅಸ್ತಂಗತ ಹನ್ನೆರಡು ತಾಸು |
ಇನಿತು ಹನ್ನೆರಡಾಗೆ ಇರಳು ನಾಲ್ಕು ಝಾಂವ |
ಎನಿಸುವದು ವೊಂದುವಾಸರಕೆ |
ಗಣಿತಜ್ಞರು ಪೇಳುವರು ತಿಥಿ ತಾರ ಯೋಗ ಕರಣ |
ಮನುಜರಿಗೆ ವೊಂದು ದಿವಸಾಯಿತೋ ದೇವ
ಜನನ ಮಿಕ್ಕಾದ ಕರ್ಮಗಳಿಗೆ ಯಿದೆ ಆರಂಭ |
ನೆನಿಸು ಹತ್ತೈದು ದಿವಸ ವೆಂಬೋದೆ ಪಕ್ಷ |

ಇನಿತು ಈ ಪರಿಯಾಗೆ ಭಿನ್ನ ಪಕ್ಷ ವೆಂ ।
ದೆನಿಸುವು ಶುಕ್ಲ ಕೃಷ್ಣ ಯೆಂಬೊ ನಾಮ ।
ಅನುವಾಗಿ ಯೆರಡು ಪಕ್ಷ ಕೂಡಿಸಲು ಮಾ ।
ತನು ಕೇಳು ತಿಂಗಳೊಂದು ಇಂಥವೆರಡು ।
ಅನುಸಂಧಿ ನಾಲ್ಕು ವೊಂದು ಋತುವಾಹದು ಯಿವೆ ಆರು ।
ಗುಣಿಸಲು ವೊಂದು ವರ್ಷ ವರ್ಷ ನೂರಾಗಲು ।
ಮನುಜರಿಗೆ ಪೂರ್ಣಾಯು ಯೆಂದೆನಿಸುವದು ಯೋ ।
ಚನೆ ಮಾಡು ಮಾನುಷ್ಯ ಮಾನದಲೆಕ್ಕ ।
ಅನಿಮಿಷ ತತಿಗಳಿಗೆ ಮತ್ತೆ ಬಗೆವೊಂದು ವತ್ಸರ ।
ದಿನವೊಂದು ಹಗಲಿರಳು ಅಗೋವೆಂದು ।
ವನಜಗರ್ಭನ್ನ ತನಕ ಈ ಪರಿಯಿಂದ ಯೆಣಿಸು ।
ಗುಣಿಸಿ ತಿಳಿಯಬೇಕು ಕಾಲಪ್ರಭಾ ।
ಅಣುಮಹತ್ತುರೂಪ ವಿಜಯ ವಿಠ್ಠಲರೇಯ ।
ಗುಣನಿಧಿ ಸರ್ವಕಾಲದೊಡನೆ ತಿರುಗುತಿಪ್ಪ ॥೧॥

## ಮಟ್ಟತಾಳ

ಮೂರೊಂದು ಯುಗವುಂಟು ಮನುಜ ಮಾನದಲ್ಲಿ ।
ಸಾರುವೆ ವರ್ಷಂಗಳು ವಿವರ ವಿವರವಾಗಿ ।
ಆರಂಭ ಯುಗಕೆ ಹದಿನೇಳು ಲಕ್ಷ ।
ಈರೈದು ಹತ್ತುಯೆಂಟು ಸಾವಿರವೆನ್ನಿ । (೧೭,೨೮೦೦೦)
ಚಾರು ದ್ವಿತಿಯ ಯುಗಕೆ ಲಕ್ಷದ್ವಾದಶ ತೊಂಭ ।
ತ್ತಾರು ಸಾವಿರವೈಯ್ಯ । (೧೨,೯೬೦೦೦)
ಮೂರನೆಯುಗಕೆ ಯೆಂಟು ಲಕ್ಷವ್ಯಾಲೆ ।
ಈ ರೆಂಡರವತ್ತು ಸಾವಿರ ವರುಷಗಳು । (೮,೬೪೦೦೦)
ಈ ರೀತಿ ಗ್ರಹಿಸು ನಾಲ್ಕನೆಯುಗಕೆ ವಿ ।

ಚಾರನಾಲ್ಕು ಲಕ್ಷತ್ರಿಶಂತಿ ದ್ವಯ ಸಹಸ್ರ । (೪,೩೨೦೦೦)
ಹಾರೈಸು ಯೆಲ್ಲ ಕೂಡಿಗುಣಿಸೆ ವಿ ।
ಸ್ತಾರವಾಗಿದೆ ನಾಲ್ಕು ಹತ್ತು ।
ಮೂರುಲಕ್ಷ ದಶದಶ ಸಾಸಿರವೊ । (೪೩,೨೦೦೦೦)
ಬ್ಯಾರೆ ಬ್ಯಾರೆ ಯುಗದ ಪೆಸರಂಗಳು ಶ್ರಿಂ ।
ಗಾರದಿಂದಲಿಕೇಳಿ ಕೃತ ತ್ರೈತ ದ್ವಾಪರ ಕಲಿ ।
ಸಾರಹೃದಯರೊಲಿದು ಸಂತತ ಕರುಣದಲಿ ।
ಶ್ರೀರಮಣ ನಮ್ಮ ವಿಜಯ ವಿಠಲರೇಯ ।
ಮೂರೊಂದು ವತ್ಸರ ನಾಮಕ ಕಾಣೊ ।೨॥

**ರೂಪಕ ತಾಳ**

ಏಕತ್ರಯ (೧+೩=೪) ವೊಮ್ಮೆ ತಿರುಗಿದರು ಮಹಯುಗ ।
ನಾಕಮಾನದಲ್ಲಿ ದ್ವಾದಶ ಸಹಸ್ರವೊ । (೧೨,೦೦೦)
ಲೋಕದೊಳಿಗೆ ಸಿದ್ಧಯಿಂಥಮಹಯುಗ ಸಾವಿರ ।
ಶ್ರೀ ಕಾಂತನಿಂದಲಿ ತಿರುಗಿದರದು ಆಂದು ।
ಲೋಕೇಶಗಾಗುವದು ವೊಂದು ಹಗಲು ಶಬ್ದ ।
ವಾಕುಲಾಲಿಸಿ ನಾನೂರು ಮೂವತ್ತೆರಡುಕೋಟಿ
........ ........ ............ (೪,೩೨೦೦೦೦೦೦೦)
ಈ ಕಾಲದಂತೆ ಸಾವಿರಾವರ್ತಿ ತಿರುಗಿದರು ।
ನೂಕಿ ಪೋಯಿತು ವೊಂದುಯಿರಳು ಕಮಲಾಸನಗೆ ।
ನಾಲ್ಕುನೂರು ಮೂವತ್ತೆರಡು ಕೋಟಿ ।
ಶ್ಲೋಕಾರ್ಥದಿಂದಲಿಯಿತ್ತಂಡ ಕೂಡಿಸಿ ।
ನಾಲ್ಕೆರಡು ಅರವತ್ತುನಾಲ್ಕು ಕೋಟಿಗುಣಿತ ।
........ ........ (೮,೬೪,೦೦೦೦೦೦೦) ........ ........
ವಾಕೇಶ ಚತುರ್ಮುಖಗೆ ನಿಜವೊಂದು ದಿವಸವೊ ।
ಸಾಕಾರ ಮೂರ್ತಿಸಿರಿ ವಿಜಯ ವಿಠಲರೇಯ ।
ಲೌಕಿಕ ಮಾನದಲ್ಲಿ ಯಿಷ್ಟುವರ್ಷಗೈದ ॥೩॥

## ಝಂಪಿತಾಳ

ವನಜ ಸಂಭವನ ವೊಂದು ದಿವ ರಾತ್ರಿಯೊಳು |
ಮನುಗಳು ಚತುರ್ದಶರು ತಮ್ಮ ಪದವಿ |
ಅನುಭವಿಸುವರು ಪ್ರತ್ತೀಕ ಪ್ರತ್ತೀಕವಾಗಿ |
ಗಣಣೆ ಮಾಡಲಿಬೇಕು ಯಿವರ ಕಾಲ |
ಮನು ವೊಬ್ಬಗೆ ಎಪ್ಪತ್ತೊಂದು ಮಹಾಯುಗದಶ
ಪರ ಗರ್ಧಾಲಕ್ಷವೇಲೆ ಭುಕ್ತಿಕಾಲ |
ಎಣಿಕೆ ಮಾಡಲಿಬೇಕು ಯೆಪ್ಪತ್ತೊಂದು ಮಹಾಯುಗ |
ವಿನಯದಿಂದಲಿ ವೊಂದು ಮಹಾಯುಗದ ಲೆಖ್ಖ | ೪೩,೨೦,೦೦೦
ಇನಿತು ಯೆಪ್ಪತ್ತೊಂದರಿಂದ ವೆಗ್ಗಳಿಸೆ |
ಮನಕೆ ವೊಪ್ಪುವದು ತ್ರಿಂಶತಿ ಕೋಟಿ ಅರವತ್ತು |
ಮುನಿಲಕ್ಷ ಯಿಪ್ಪತ್ತು ಸಾಸಿರ ವರುಷ | ೩೦,೬೭,೨೦,೦೦೦
ಮನು ವೊಬ್ಬಬ್ಬನಿಗೆ ಮಹಯುಗ ಎಪ್ಪತ್ತೊಂದು |
ಉಣಿಸಿ ಪೋದವು ನೂಕೆ ಆದು ಸಂಖ್ಯಮಾಡೆ |
ಕ್ಷಣ ಬಿಡದೆ ವೊಂಬೈನೂರು ವೊಂಭತ್ತು ನಾಲ್ಕು |
ವಿಂಶಗುವದು ಮಹಾಯುಗ ಉಳಿದವಾರು ಈ |
ಜನಕೆ ಹಂಚಿಕೆಯಿಂದ ನೋಡಲಿ ಬೇಕು |
ಎಣಿಸು ಹದಿನೆಂಟುಲಕ್ಷ ವಂದೈವತ್ತು ಸಾವಿರ |
ವನಧಿ ಶತಯಿಪ್ಪತ್ತೆಂಟು ವರುಷಾರು ತಿಂಗಳು |
ದಿನ ಯಿಪ್ಪತ್ತೈದು ತಾಸು ಹದಿನೇಳು ಲಘು ಐದು |
ಕೊನೆಮಾತ್ರ ವುಂಟು ಅದು ಅಲ್ಪವಿಕ್ಷ |
ಮನೋರ್ವಸಿಗೆ ಕೇಳು ಕಾಲಕ್ಲಪ್ತಿ ಅಬ್ದ |
ಮುನಿಗಳ ಸಮ್ಮತವೊ ಬಲ್ಲವರಿಗೆ....

(೧೮, ೫೧, ೪೨೮) ವರುಷ (೬) ತಿಂಗಳು (೨೫) ದಿನ
(೧೭) ತಾಸು (೫) ಲಘು (೫) ಕಾಷ್ಟ (೩) ಕ್ಷಣ, ಈ ಪ್ರಕಾರದಲಿ

ಇನಿತು ಮಿಶ್ರಮಾಡೆ ವೊಬ್ಬಮನುವಿಗೆ ಥಾ |
ರುಣಿ ಪಶವಾಗಿ ಯಿದ್ದದು ಕೇಳಿರೊ |
ಗುಣ ಹತ್ತುಕೋಟಿ ಎಂಭತ್ತೈದು ಲಕ್ಷ ಮಾ |
ರ್ಗಣ ಯೆರಡು ಶತಿ ಮೇಲೆವೊಂದು ಸಹಸ್ರ |
ವಸಧಿ ವಿಂಶತಿ ಅಷ್ಟವರುಷ ತದು ಪರಿಯಿಂದ |
ಗುಣಿಸು ಯುತಾ ಮಹಾಯುಗ ವಿಭಾಗದಿ |
ಜನನ ಮರಣ ಶೂನ್ಯ ವಿಜಯವಿಠಲ ತಾನೆ |
ಮನುವಿನೊಳಗಿದ್ದು ತ್ರಿಲೋಕವನು ಆಳ್ವಾ |೯||

## ವಿವರ :

ಹದಿನಾಲ್ಕು ಮನುಗಳಿಗೆ ಎಪ್ಪತ್ತೊಂದು ಮಹಾಯುಗ ಪ್ರಕಾರ ಲೆಕ್ಕ ಮಾಡಲಾಗಿ, ೧೪ × ೭೧ = (೯೯೪) ಮಹಾಯುಗಗಳು, ಮನುಷ್ಯ ಮಾನದ ವರುಷಗಳು ಪಂದು ಮಹಾಯುಗಕೆ (೪೩,೨೦,೦೦೦) ನಾಲ್ವತ್ತುಮೂರು-ಲಕ್ಷ ಯಿಪ್ಪತ್ತುಸಾವಿರ ವರುಷ, ಎಪ್ಪತ್ತೊಂದರಲ್ಲಿ ಹೆಚ್ಚು ಗುಣಿಸಿದರೆ ಒಬ್ಬ ಮನುವಿಗೆ ೪೩,೨೦,೦೦೦ × ೭೧ = ೩೦,೬೭,೨೦,೦೦೦

೩೦,೬೭,೨೦,೦೦೦ ಇವಕ್ಕೆ ೧೪ ಮನುಗಳು ೧೪ ರಿಂದ ಗುಣಿಸಿದರೆ ೪೨೯೪೦೮೦೦೦೦ ವರ್ಷಗಳು ೯೯೪ ಮಹಾಯುಗಕೆ.

೨೫೯೨೦೦೦೦ ಉಳಿದ ಆರು ಯುಗಕೆ, ಒಟ್ಟಿಗೆ ೧೦೦೦ ಯುಗಗಳಿಗೆ ೪,೩೨೦೦೦೦೦೦೦ ವರುಷಗಳು.

ಬ್ರಹ್ಮದೇವರಿಗೆ (೧) ಹಗಲು ಅಬ್ಜ, ಮೂವತ್ತೆರಡು ಕೋಟಿ ಮನುಜ ಮಾನ, ವರ್ಷ, ಬ್ರಹ್ಮದೇವರ ಹಗಲಿಗೆ, ಇನ್ನು ಒಬ್ಬ ಮನುವಿಗೆ ಕಾಲ, ೩×೧೦ ಗುಣ ಹತ್ತುಕೋಟಿ ಎಂಭತ್ತೈದುಲಕ್ಷ ಮಾರ್ಗಣ ೩೦.೮೫,೭೧೪೨೮ ವರುಷ, ಆರು ತಿಂಗಳು (೬) ದಿನ (೨೫) ಘಳಿಗೆ (೧೭) ಲಘು (೫) ಕಾಷ್ಟ (೫) ಕ್ಷಣ (೩) ಇದಕ್ಕೆ ೧೪ ರಿಂದ ಗುಣಿಸೆ ೪,೩೨೦೦೦೦೦೦೦

## ತ್ರಿವಿಡಿತಾಳ

ಹದಿನಾಲ್ಕು ಮನುಗಳು ಯಿಪ್ಪರು ಸ್ವಾಯಂಭುವ ।
ಇದರೊಳಗಾದಿ ಮನುವೆನಿಸಿಕೊಂಬ ।
ಮುದದಿಂದ ತಿಳಿವದು ತಾಪಸಾಖ್ಯಮನು ।
ಉದುಭವ ವಾಗಿಹ ನಾರೆಯೆಣ ।
ಬುಧರು ವಿವರಿಸಿ ಯಿವರ ಸಂಧಿಕಾಲದ ಕ್ಲಪ್ತಿ ।
ವೊದಗಿ ಕೊಂಡಾಡುವದು ಪುಣ್ಯವಕ್ಕು ।
ಮೊದಲು ಮನುವಿಗೆ ಎರಡು ಸಾವಿರ ವರುಷ ಹಯನ । ೨೦೦೦
ಆದರ ತರುವಾಯದಲಿ ಐದು ಮನುಗಳಿಗೆ ।
ಹದಿನಾಲ್ಕುನೂರು ವತ್ಸರ ಪ್ರಕಾರ ೧೪೦೦ × ೫
ಯಿದನೆ ಗುಣಿಸಲಾಗಿ ಏಳು ಸಾವಿರ ವಾ । ೭೦೦೦
ದದು ಕಾಣೊ ಉಳಿದೆಂಟು ಮನುಗಳಸಂಧಿ ।
ಹದಿನೈದು ನೂರಬ್ದದಂತೆ ಉಗ್ಗಡಿಸೆ ಹನ್ನೆರಡು ।
ಸಾವಿರ ವಾದವೆನ್ನಿ... ೧೨೦೦೦
ಇದರಂತೆ ಅನರವರ ಸಂಧಿ ಕಾಲಗಳಿಗೆ ।
ತ್ರಿದಶಗಣ ಬಲ್ಲರೆ ಕಾಲವಿವರ ।
ಮದನ ಜನಕ ನಮ್ಮ ವಿಜಯ ವಿಠಲರೇಯ ।
ಹೃದಯ ದೊಳಗೆ ಪ್ರೇರಿಸಿದಂತೆ ವಿವರ ನಿಶ್ಚಯಮಾಡಿ ॥೫॥

(೨೧,೦೦೦ ಇಪ್ಪತ್ತೊಂದು ಸಾವಿರ ವರುಷ ೧೪ ಮನುಗಳ ಸಂಧಿಕಾಲ)

### ಇದರ ವಿವರ

೨೦೦೦ ಎರಡು ಸಾವಿರವರುಷ ಆದಿ, ಸ್ವಾಯಂಬು ಮನುವಿಗೆ ।

೭೦೦೦ ಸ್ವಾರೋಚಿಷ, ಉತ್ತುಮ, ತಾಪಸ, ರೈವತ, ಚಾಕ್ಷುಸ, ಮನುಗಳಿಗೆ ೧೪೦೦ ನೂರು ಪ್ರಕಾರ × ೫ = ೭೦೦೦ ಸಾವಿರ

೧೨೦೦೦ ವೈವಸ್ವತಮನ್ವಾದಿ ಇಂದ್ರ ಸಾವರ್ಣಿತನಕಾ,
೮ ಜನಕ್ಕೆ ೧೫ ನೂರು ವರ್ಷಪ್ರಕಾರಕ್ಕೆ ಒಟ್ಟು ೨೧,೦೦೦

### ಅಟ್ಟತಾಳ

ಇಂತು ಸಾವಿರ ಖ್ಯಾಪಿ ತಿರುಗಿದರೆ ದೇವ |
ತಿಂತಿಣಿ ಸಿರಿಯಂಗೆ ಹಗಲಿರಳೊಂದೆ ಅಯ್ಯ |
ಸಂತಿತೊ ಕಾಣೊಮುಂದೆ ಗಣತಿ ಚನ್ನಾಗಿ |
ಚಿಂತಿಸು ಬೊಮ್ಮನ್ನಾ ವಂದೆ ತಿಂಗಳಿಗೆ ಆ |
ದ್ಯಂತಕಾಲ ನೋಡೆ ಎರಡು ಅರ್ಬುದ ಐನೂರಾತೊಂ |
ಭತ್ತೆರಡು ಕೋಟಿ ವತ್ಸರ ಸಿದ್ಧ | (೨,೫೯೨೦೦೦೦೦೦೦)
ಇಂಥವೆ ಹನ್ನೆರಡಾಗೆವೊಂದು ವರುಷ |
ಮಂತ್ರೋಕ್ತದಿಂದಲಿ ಯಿವೆನೂರು ಬೊಮ್ಮಗೆ |
ಕಂತು ಜನಕರಂಗ ಪಟಪತ್ರ ಶಯನನೊ |
ಎಂತು ಪೇಳಲಿ ಹರಿಯ ಶಕ್ತಿಗೆ ಸರ್ವ ಸ್ವಾ |
ತಂತ್ರನೊ ಅಜನಬ್ದನೂರು ವರುಷ ಪರಿ |
ಯಂತ್ರ ಮಲಗಿಪ್ಪ ಲಕುಮಿಸಹಿತವಾಗಿ |
ಚಿಂತತ ಫಲದಾಯ ವಿಜಯ ವಿಠಲರೇಯ |
ಸಿಂತಿನ ಬೊಮ್ಮನಿಗೆ ಯಿದರಂತೆ ಫಲಿಸಿದ ||೬||

### ಆದಿತಾಳ

ಕಾಲಾತೀತ ವಿಷ್ಣು ಅಣುಮಹತ್ತುವಾದ |
ಕಾಲ ಪ್ರೇರಕನಾಗಿ ಅನಾದಿಯಿಂದ ವಿಡಿದು |
ಕಾಲನಾಮಕನೆನಿಸಿ ಸಮಸ್ತಜೀವಿಗಳ |
ಕಾಲಪಾಶದಿ ಸಂಸಾರದೊಳಗಿಟ್ಟು |
ಕಾಲಕಾಲಕೆ ಮಹಸುಳಿಯೊಳು ಸುತ್ತಿಸುವ |
ಕಾಲ ಮೂರುತಿ ಈತನಭಯದಿಂದ ಜಡಜೀವರು |

ಕಾಲ ವಿಚಾರವೆ ಸರ್ವ ಶತಪಥ ಕೊಡುವರು ।
ಕಾಲ ಡೊಡನೆಯಿಪ್ಪ ಕಾಲಕ್ಕೆಸಿಗದಿಪ್ಪ ।
ಕಾಲ ತ್ರಯದಲ್ಲಿ ಯನಿತೆಸಿಸಿದವಮಾನವ ।
ಕಾಲಜ್ಞಾನಿಯಾಗುವ ಆವಾವ ದೇಹದಲ್ಲಿ ।
ಕಾಲನ್ನ ಭೀತಿಯಿಲ್ಲದೆ ಸುಖಿಸುವ ಗೋತ್ರದೊಡನೆ ।
ಕಾಲಕ್ಕೆ ದೋಷವಿಲ್ಲ ಸಮ್ಮಂಧದಿಂದ ದು ।
ಷ್ಕಾಲ ಆಕಾಲವೆಂದು ।
ಕಾಲ ಕರೆಸಿಕೊಳುತಿಪ್ಪವು ನೋಡಿರೊ ।
ಕಾಲ ಕಾಳ) ಕಂಧರವಿನುತ ವಿಜಯವಿಠಲ ಸರ್ವ ।
ಕಾಲಕೆಗತಿಯೆನ್ನು ಕಡೆಮಾಡುಭವದಿಂದ । ।'೭॥

**ಜತೆ**

ಕಾಲವಿವರ ತಿಳಿದು ವಿಜಯ ವಿಠಲರೇಯನ ।
ಕಾಲಿಗೆರಗಿ ಬದುಕು ಜ್ಞಾನ ಭಕುತಿಯಿಂದ ॥



## ೨೧) ಸುಳಾದಿ

## ಮನುಗಳ ಸಂಧಿಕಾಲ ವಿವರ

ರಾಗ: ಭೈರವಿ ಧ್ರುವತಾಳ

ಸಂಧಿಕಾಲವೆ ತಿಳಿ ಯುಗ ಮನ್ವಂತರ ಭೇದ ।
ಒಂದೊಂದು ಪ್ರಕಾರ ಗುಣಿತದಿಂದ ।
ಎಂದೆಂದಿಗೆ ಯಿದು ಪ್ರವಾಹರೂಪದಾಗಿ ।
ಒಂದರ ತರುವಾಯ ವೊಂದು ಬರುತಿಪ್ಪವು ।
ಮುಂದೊಲಿದು ಕೇಳಿಯುಗನಾಲ್ಕು ಮತ್ತೆ ಹ ।
ನ್ನೊಂದು ಮೂರು ಮನುಗಳ ಸಂಧಿಯಾ ।

ಯಂದೆಂಬ ವರುಷಂಗಳು ಯಿದರೊಳು ವಿವರವುಂಟು
ಸಂಧಿಕಾಲ ಯಾವತ್ತು ಯಿಪ್ಪತ್ತು ಸಹಸ್ರ ಆ ।
ರೊಂದು ಲಕ್ಷದ ವರುಷವಾಗುತಿದಕೊ ।
ಒಂದೊಂದು ಯುಗದ ಸಂಖ್ಯೆಯಿತ್ತಂಡದಲ್ಲಿ ಗ್ರಹಿಸು ।
ಕುಂದದಲೆ ಕಲಿ ಅಂತಕೃತಾದಿ ಭಾಗ ।
ಸಂಧಿಕಾಲವೆಸರಿ ಯೆಂಭತ್ತು ಸಾವಿರ ।
ಒಂದು ಲಕ್ಷವೆ ಸಿದ್ಧವು ಕೃತಾಂತ ಆದಿತ್ರೈತ ।
ಸಂಧಿ ಎರಡುಲಕ್ಷ ಐವತ್ತೆರಡು ಸಹಸ್ರ ।
ಪೊಂದಿ ತ್ರೇತಾ ಅಂತ ದ್ವಾಪರಾದಿ ಭಾಗ ।
ಒಂದು ಲಕ್ಷ ಯೆಂಭತ್ತು ಸಹಸ್ರ ವತ್ಸರಕಾಣೊ ।
ಸಂಧಿ ಪೋಯಿತು ದ್ವಾಪರಾಂತ ಕಲಿಯುಗದಿ ।
ಒಂದು ಲಕ್ಷ ಯೆಂಟು ಸಾವಿರ ವರುಷವೆನ್ನಿ ।
ಸಂಧಿಕಾಲ ಉಭಯ ವಿವರ್ಣವು ಪ್ರಥಮದಲ್ಲಿ ।

| | | |
|---|---|---|
| ಪ್ರಥಮದಲ್ಲಿ | ಕಲಿಯುಗದ ಅಂತ್ಯಭಾಗ | ೩೬೦೦೦ |
| ೧,೮೦,೦೦೦ | ಕೃತಾದಿ ಆದಿಭಾಗ | ೧೪೪೦೦೦ |
| ೨,೫೨,೦೦೦ | ದ್ವಿತಿಯದಲ್ಲಿ | ................... |
| | ಕೃತಯುಗದ ಅಂತ್ಯಭಾಗ | ೧೪೪೦೦೦ |
| | ತ್ರೆತಾದಿ ಆದಿಭಾಗ | ೧,೦೮೦೦೦ |
| ೧,೮೦,೦೦೦ | ತ್ರೀತಿಯದಲ್ಲಿ | ................... |
| | ತ್ರೈತಾದಿ ಅಂತ್ಯಭಾಗ | ೧,೦೮೦೦೦ |
| | ದ್ವಾಪರಾದಿ ಆದಿಭಾಗ | ೭೨,೦೦೦ |
| ೧,೦೮,೦೦೦ | ಚತುರ್ಥದಲ್ಲಿ | ................... |
| | ದ್ವಾಪರಾದಿ ಅಂತ್ಯಭಾಗ | ೭೨,೦೦೦ |
| | ಕಲಿಯುಗಾದಿ ಭಾಗ | ೩೬೦೦೦ |
| ೭,೨೦,೦೦೦ | | ................... |

ನಂದನ್ನ ನಂದ ವಿಜಯ ವಿಠ್ಠಲರೇಯ ಆ
ನಂದದಲಿ ಸರ್ವಕಾಲದಲ್ಲಿ ಯಿಪ್ಪ ||೧||

## ಮಟ್ಟೆತಾಳೆ

ಉಳಿದ ವರ್ಷಂಗಳು ಅರವತ್ತು ಸಾವಿರ |
ತ್ರಿಲಕ್ಷ ನಿಜಕಾಲ ನಾಲ್ಕುಯುಗಕ್ಕೆ ಲೆಖ್ಖ | (೩,೬೦,೦೦೦)
ತಿಳಿದು ಈ ಪರಿಯಿಂದ ಕೊಂಡಾಡಲಿ ಬೇಕು |
ಒಲಿಸಿ ಚತುರ್ದಶ ಮನುಗಳ ವೃತ್ತಾಂತ |
ಸುಲಭ ಮನಸಿನಲ್ಲಿ ಭುಕ್ತಿ ಸಂಧಿಕಾಲ |
ಇಳಿಯೊಳು ಚನ್ನಾಗಿ ಅವರವರ ಕ್ಲಪ್ತ |
ಜಲಜನಯನ ನಮ್ಮ ವಿಜಯ ವಿಠಲರೇಯನ |
ಒಲಿಮೆಯಿಂದಲೆ ಯಿದೆ ಧ್ಯಾನ ಮಾಡಲಿಬೇಕು ||೨||

## ತ್ರಿವಿಡಿತಾಳೆ

ಮನು ಪೋರ್ವನಿಗೆ ನೋಡು ಭೋಗಿಸುವ ಕಾಲ ಯೋ |
ಚನೆ ಮಾಡು ಮಾನವ ತ್ರಿಶಂತಿ ಕೋಟಿ ಮೇ |
ಲೆಣಿಸು ಯೆಂಭತ್ತೈದು ಲಕ್ಷ ಎಪ್ಪತ್ತೊಂದು |
ಗಣನೆ ಮಾಡು ಸಾವಿರ ನಾನೂರಿಪ್ಪತ್ತೆಂಟು ಹಾ |
ಯನ ತಿಂಗಳಾರು ಆ ತರುವಾಯ ಯಿಪ್ಪತ್ತೈದು |
ದಿನ ತಾಸು ಹದಿನೇಳು ಯಿಪ್ಪತ್ತೊಂದು ಪಳ | ( ವಿಘಳಿಗೆ )
ಇನಿತು ಸಿದ್ಧವೆನ್ನು ಯಿದರಂತೆ ಚತುರ್ದಶ |
ಮನುಗಳಿಗೆ ಲೆಖ್ಖ ಮಾಡಬೇಕಯ್ಯ
(೩೦, ೮೫, ೭೧, ೪೨೮ ವರುಷ (೬) ಆರು ತಿಂಗಳು ದಿನ | (೨೫)
ತಾಸು (೧೭) (೨೧).ಘಳಿಗಿ )
ಅನುಮಾನಯಿದಕಿಲ್ಲ ಮರಳಿ ಸಂಧಿಕಾಲ |

ಗುಣಿಸು ಯಿಂಗಡವಾಗಿ ಪ್ರತ್ಯೇಕದಿ |
ಘನ ಮೂರುತಿ ನಮ್ಮ ವಿಜಯ ವಿಠಲರೇಯ |
ಮನುಗಳೊಳಗೆ ತಾನೆ ತಾಪಸನಾಗಿಪ್ಪ ||೩||

### ಅಟ್ಟತಾಳ

ಮೊದಲು ಮನುವಿಗೆ ಯೆರಡು ಸಾವಿರ ವರುಷ ೨೦೦೦
ಇದೆಸಿದ್ಧ ಸ್ವಾರೋಚಿಷ ಚಾಕ್ಷುಷ ತನಕ |
ಹದಿನಾಲ್ಕು ನೂರು ವತ್ಸರ ಐದು ಮಂದಿಗೆ | ೭೦೦೦
ಇದರ ತರುವಾಯ ವೈವಸ್ವತಮನು |
ಮುದದಿಂದ ದೇವಸಾವರ್ಣಿ ಪರಿಯಂತ |
ಹದಿನೈದು ನೂರು ಪ್ರಕಾರ ಯೆಂಟುಜನಕೆ ೧೨೦೦೦
ಹದಿನೆಂಟು ಮೂರು (೧೮+೩=೨೧) ಸಾವಿರ ವತ್ಸರಾದವು (೨೧೦೦೦)
ಇದೆ ಲೆಖ್ಖದಿಂದಲಿ ಆದಿ ಅಂತ್ಯ ಭಾ |
ಗದ ಸಂಧಿಕಾಲವೆ ತಿಳಿವುದು ವಿಸ್ತಾರವೆ |
ಮದನ ಲಾವಣ್ಯ ನಮ್ಮ ವಿಜಯ ವಿಠಲರೇಯ |
ಪದುಮಗರ್ಭನ ದಿವದಲಿ ನೇಮಿಸಿಯಿಪ್ಪ ||೪||

### ಉಭಯ ಸಂಧಿಕಾಲ ಅರ್ಧರ್ಧಾ

| ಮನು | ಅರ್ಧರ್ಧ ಸಂಧಿಕಾಲ | ಮನು | ಅರ್ಧರ್ಧ ಸಂಧಿಕಾಲ |
|---|---|---|---|
| ೧ | ೧೦೦೦+೧೦೦೦=೨೦೦೦ | ೮ | ೭೫೦+೭೫೦=೧೫೦೦ |
| ೨ | ೭೦೦+ ೭೦೦=೧೪೦೦ | ೯ | ೭೫೦+೭೫೦=೧೫೦೦ |
| ೩ | ೭೦೦+ ೭೦೦=೧೪೦೦ | ೧೦ | ೭೫೦+೭೫೦=೧೫೦೦ |
| ೪ | ೭೦೦+ ೭೦೦=೧೪೦೦ | ೧೧ | ೭೫೦+೭೫೦=೧೫೦೦ |
| ೫ | ೭೦೦+ ೭೦೦=೧೪೦೦ | ೧೨ | ೭೫೦+೭೫೦=೧೫೦೦ |
| ೬ | ೭೦೦+ ೭೦೦=೧೪೦೦ | ೧೩ | ೭೫೦+೭೫೦=೧೫೦೦ |
| ೭ | ೭೫೦+ ೭೫೦=೧೫೦೦ | ೧೪ | ೭೫೦+೭೫೦=೧೫೦೦ |

ಒಟ್ಟು ೨೧,೦೦೦ ಸಾವಿರ

**ಆದಿತಾಳ**

ಇಂತು ಕೊಂಡಾಡುವದು ಭಕ್ತಿ ಮಾರ್ಗದಲ್ಲಿ ಮ ।
ನ್ವಾಂತರ ಹದಿನಾಲ್ಕು ಪುನರಾವರ್ತಿ ಯೆಣಿಸು ।
ಇಂತಿವರೊಳಗೆ ಹದಿಮೂರು (ನಾಲ್ಕು) ಇಂದ್ರರು ವುಂಟು ।
ಕಂತುಪಿತನ ಅವತಾರಂಗಳು ವುಂಟು ಪ್ರತಿದಿನ ।
ಚಿಂತಿಸು ಯಿವರಿವರ ಕಾಲದಲ್ಲಿ ಯಿದ್ದ ।
ಸಂತರಾ (ನಾ) ಮನುಗಳ ಮುನಿಗಳ ತ್ರಿದಶ ಜನರ ಪೆಸರುಗಳ ।
ಮುಂತೆ ಲಕುಮಿರಮಣನ್ನ ತಂದೆ ತಾಯಿ ಮಿಕ್ಕಾದ ।
ಸಂತತಿಗಳ ನೆನಸೆ ಯಿಹಪರದಲಿ ಸೌಖ್ಯ ।
ಎಂತೆಂತು ಹರಿಲೀಲೆ ಜಗದೊಳು ತುಂಬಿವೆ ।
ಸಂತುಜನ ಸ್ತೋತ್ರಮಾಡಿ ಧನ್ಯರಾಗಲಿ ಬೇಕು ।
ಅಂತರಂಗದ ಸ್ವಾಮಿ ವಿಜಯ ವಿಠಲರೇಯ ।
ಸಂತತ ಜ್ಞಾನವಂತರ ಕಾವುತಲಿಪ್ಪನಯ್ಯ ॥೫॥

**ಜತೆ**

ಸಂಧಿ ಕಾಲವೆ ತಿಳಿದು ಸತತ ಸಾಧನಮಾಡು ।
ಮಂದರಾದ್ರಿಧರ ವಿಜಯ ವಿಠಲ ವೊಲಿವ



## ಕಾಲನಿಯಾಮಕ, ಕಾಲಪ್ರವರ್ತಕ

## ೨೨) ಸುಳಾದಿ

ರಾಗ: ಭೈರವಿ ಧ್ರುವತಾಳ

ಪರಮಾಣ್ವಾದ್ವಿಪರಮಾಣು ಮಹಕಾಲಾಂತ ಕಾಲಸ್ಥ |
ನಿರುತ ತತ್ಕಾಲ ಕ್ರೀಯ ಪ್ರವರ್ತಕ |
ಹರಿಯೆ ತತ್‌ಶಬ್ದವಾಚ್ಯ ಮಂಗಳ ಪುರುಷ |
ಇರುತಿಪ್ಪಾ ಉದಯ ಕಾಲಸ್ತಮಾನ |
ಪರಿಯಂತ ಒಂದೊಂದು ನಾಮಾಂತರದಿಂದ |
ಮೆರೆವ ವೈಭವಮೂರ್ತಿ ಪಾಪದೂರ |
ಇರಳು ಹಗಲುಯಿಂತು ನಮ್ಮ ರಕ್ಷಿಸುವ |
ಸರಿಗಾಣೆ ಈತನ ಕರುಣಾತನಕೆ
ನಿರಿಕ್ಷಿಸು ಉದಯಕಾಲದಲ್ಲಿ ಕೌಮೋದಕಿ |
ಧರ ಕೇಶವಸ್ವಾಮಿ ಸಂಗಮ (ವ) ಕಾಲ |
ಸ್ಮರಿಸು ವೇಣುಧರ ಗೋವಿಂದಾತ್ಮನಲ್ಲಿ |
ಸಿರಿನಾರಾಯಣನಿಪ್ಪ ಪ್ರಾಣ್ಹಕಾಲ |
ಅರಿಪಾಣಿ ವಿಷ್ಣುದೇವ ಮಧ್ಯದಿನ ಕಾಲಕ್ಕೆ |
ತರುವಾಯ ಅಪರಾನ್ಹ ಕಾಲಕ್ಕೆ ಚಾಪ |
ಧರ ಮಧುಸೂದನ ವಾಗಿಯಿಪ್ಪ ದಿನಾಂ |
ತರಕೆ ಮಾಧವ ಮೂರ್ತಿ ಮಹವಿನೋದ |
ಪರಮ ಭಕುತಿಯಿಂದ ಕಾಲವ ಕಳೆಯುತ್ತ |
ಹರಿಯು ಮೂರ್ತಿಗಳನ್ನೆ ನೆನಿಸಲಾಗಿ |
ಸುರರಾಶಿಗಳು ವೊಲಿದು (ಸುರರಾಶು ವೊಲಿದು) ಶುಭಮಾರ್ಗ ಪ್ರೇರಿಸಿ |
ಪೊರೆವು ತಿಪ್ಪರುಗತಿಗೆ ಅಭಿಯೋಗಮಾಡಿ
ಪರಮ ಪುರುಷನಮ್ಮ ವಿಜಯವಿಠಲ ತನ್ನ |
ಶರಣಗಾಗಿ ತಾನೆ ಕಾಲದೊಡನೆಯಿಪ್ಪ | ।೧॥

## ಝಂಪೆತಾಳ

ದೋಷಕಾಲದಲ್ಲಿ ಹೃಷಿಕೇಶಮೂರ್ತಿ
ನಿಶೀಥ ಅರ್ಧರಾತ್ರಿ ಕಾಲದ್ವಯಕೆ ಕಮ |
ಲಾಸನನ ಪುಟ್ಟಿಸಿದ ಪದ್ಮನಾಭಕಾಣೊ |
ಬೆಸಸೂಪೆ ಅಪರರಾತ್ರಕಾಲಕ್ಕೆ ಶ್ರೀವತ್ಸ |
ಹಸನಾಗಿ ಗ್ರಹಿಸು ಕಾಲವಿಚಾರವನು |
ಪಶುಪತಿ ಪ್ರಿಯದೇವ ವಿಜಯ ವಿಠ್ಠಲರೇಯ
ಕುಶಲನು ಕಾಣೋ ನಾನಾ ಬಗೆಯಿಂದ ||೨||

## ತ್ರಿವಿಡಿತಾಳ

ಪ್ರಾತುಷ ಕಾಲದಲ್ಲಿ ದೇವ ಜನಾರ್ದನ |
ತುತಿಪೆ ಅನುಸಂಧ್ಯಾಕಾಲದಲಿ ದಾಮೋದರ
ಗತಪದನಕಾಲಕೆ ನಾರಾಯಣನೆನ್ನು |
ಹಿತವಹದು ಪ್ರಭಾತದಲ್ಲಿ ವಿಶ್ವಾತ್ಮಕ |
ಆತಪಪತಿ ಉದಯಕಾಲಕೆ ಮತ್ಸ್ಯಮೂರ್ತಿ |
ಕ್ಷಿತಿವಾರಿಗಗನ ಕಾನನ ಜೀಮೂತದುರ್ಗ |
ಅತುಳಮತ್ಸ್ಯ ವಾಮನ ತ್ರಿವಿಕ್ರಮ ಅ |
ದ್ಭುತನಾರಸಿಂಹ ರಕ್ಷಿಸುತಿಪ್ಪನು |
ತಿಕ್ಷ್ಣಧರಣ ವಿಜಯ ವಿಠಲರೇಯ ಪರಮಾತ್ಮ |
ಪ್ರತಿಕೂಲವಾಗದೆ ನಡಸಿಕೊಳುತಿಪ್ಪ | ||೩||

## ಅಟ್ಟತಾಳ

ಉದಯಾತ್ಪೂರ್ವದಲ್ಲಿ ಪಶ್ವಾಧಾರಕ |
ಪ್ರದ್ಯುಮ್ನನಿಪ್ಪನು ವಾಸುದೇವ ಮೂರ್ತಿ |

ಉದಯ ಕಾಲದಲ್ಲಿ ಪಠಿಸು ತೃಣಾಶ್ರಯ
ತದುಪರಿಸಂಗವ ಕಾಲಪೇಕ್ಷಾಶ್ರಯ (?)।
ಮುದದಿಂದ ವರಹನು ಮಧ್ಯಾನ್ಹ ಕಾಲಕ್ಕೆ ।
ತ್ರಿದಶರಾಶ್ರಯಮೂರ್ತಿ ನಾರಾಯಣನೆನ್ನು ।
ತದನಂತರದ ಕಾಲದಲ್ಲಿ ಗರ್ಭಾಶ್ರಯ ।
ಅಘಟ ಅನಿರುದ್ಧ ಗರ್ಭಾತ್ ಪ್ರಜಾಪಾತ ।
ಇದನೆಚಿಂತಿಸು ದೋಷಕಾಲದಲ್ಲಿ ಸ ।
ರ್ವದ ಅರಣ್ಯಾಶ್ರಯ ನರಸಿಂಹದೇವನು ।
ಪದುಮ ಬಾಂಧವ ಅಸ್ತನಾಗಲು ಕೊಂಡಾಡು ।
ವದು ಪಿತ್ರಾಶ್ರಯ ಸಂಕರುಷಣನೆನ್ನು ।
ಪದುಮೆವಲ್ಲಭನಮ್ಮ ವಿಜಯ ವಿಠ್ಠಲರೇಯ ।
ಹೃದಯದಲ್ಲಿ ಬಂದು ತಿಳುಪುವ ಭಕ್ತರಿಗೆ ||೪||

ಆದಿತಾಳ

ಪುರುಷ ಪುರುಷ ಪ್ರಕೃತಿ ಪ್ರಕೃತಿ ಪ್ರಕೃತಿಸರ್ವ ।
ಪರಂಪರ್ಯದಲ್ಲಿ ವ್ಯಾಪ್ತಿ ಆವ್ಯಾಪ್ತಿಯೆನ್ನು ।
ಅರಿದು ಉದಯಸ್ತಮಾನ ಕಾಲಪ್ರವಾಹನೋಡಿ ।
ಪರಶಬ್ದ ಪರಿಯಂತ ವಿಚಾರಿಸಿ ಅಲ್ಲಿದ್ದ ।
ಹರಿಮೂರ್ತಿಗಳನೆನೆದು ಧನ್ಯನಾಗಲಿಬೇಕು ।
ನಿರುತ ಸತ್ಕರ್ಮವನು ಆವಾವ ಕಾಲದಲ್ಲಿ ।
ಚರಿಸುವಾಗಲೆ ಯಿದೆ ಅನುಭವಯಿರಬೇಕು
ಪರಮಾಣುಕಾಲ ದೇಶ ಗುಣ ಕರ್ಮ ಶುಭವಕ್ಕು ।
ದುರಿತ ರಾಶಿಗಳೆಲ್ಲ ಪರಿಹಾರವೊ ಪುಶಿಯೆಲ್ಲ ।
ತರುಣಿ ಮಂಡಲದಲ್ಲಿ ಪ್ರದ್ಯುಮ್ನವಾಸುದೇವ ।
ವರಹ ನಾರಾಯಣ ಅನಿರುದ್ಧ ಮೂರುತಿ ।
ನರಸಿಂಹ ಸಂಕರುಷಣ ಸಪ್ತಮೂರುತಿಗಳು ।

ಸ್ಥಿರವಾಗಿ ಯಿಪ್ಪವು ಈ ಪ್ರಕಾರ ಚಿಂತಿಸು ।
ತರಣಿಗೆ ನಾಲ್ಕುವರ್ನ ಶುಭ್ರ ರಕ್ತ ಪೀತ ।
ತರುವಾಯ ನೀಲವರ್ನ ಈಬಗೆಯು ಸೂರ್ಯನ್ನ ।
ಪರುಮ ಭಕುತಿಯಿಂದ ವರ್ನಭೇದದಲ್ಲಿ ಭೂ ।
ಸುರ ಕ್ಷತ್ರ ವೈಶ್ಯ ಶೂದ್ರಜನರು ಆರಾಧಿಸುವರು ।
ನಿರಯ ವಿದೂರ ನಮ್ಮ ವಿಜಯ ವಿಠಲರೇಯ ।
ಕರುಣಾಂಬುಧಿಕಾಣೊ ಕರವಿಡಿದು ಸಾಕುವ ॥೫॥

**ಜತೆ**

ಕಾಲಾಧಿಷ್ಟಾನದಲ್ಲಿ ಕಾಲನಾಮಕನಾದ ।
ಶ್ರೀಲೋಲ ವಿಜಯ ವಿಠ್ಠಲನ ಧ್ಯಾನವ ಮಾಡು ॥೬॥



## ಸಂಕ್ಷಿಪ್ತ ಆತ್ಮಸೃಷ್ಟಿ, ಲಕುಮಿಸೃಷ್ಟಿ, ಮುಕ್ತರಸೃಷ್ಟಿ ಮುಕ್ತರಕ್ರೀಡಾ

### ೨೩) ಸುಳಾದಿ

ರಾಗ : ಮುನದಿಚ್ಛೆ ಧ್ರುವತಾಳ

ತತುವ ಮೂರುತಿ ಪರತತುವ ಮೂರುತಿ ।
ಸತುವ ಮೂರುತಿ ಶುದ್ಧ ಸತುವ ಮೂರುತಿ ।
ತತುವೇಶರೊಳಗೆ ಆಗತವಾದ ಮೂರುತಿ ।
ತತುರೂಪಾದಾ ತತು ತತುಮೂರುತಿ ।
ಅತಳಧೋಭುವನ ವ್ಯಾಪುತವಾದ ಮೂರುತಿ ।
ಕ್ಷಿತಿ ಸ್ವರ್ಗ ಸತ್ಯ ಪೂರಿತವಾದ ಮೂರುತಿ ।
ದ್ಯುತಿ ಐರಾವತಿಗೆ ಆಶ್ರಿತವಾದ ಮೂರುತಿ ।

ಸಿತಾಸಿತ ಪೀತ ರಕುತ ವರ್ನ ಮೂರುತಿ |
ಶ್ರುತಿ ಸ್ಮೃತಿಯಲ್ಲಿ ಭರಿತವಾದ ಮೂರುತಿ |
ಚತುರಾಶತಿ ಚತುರವಿಂವಶತಿ ನಾಮ ಮೂರುತಿ |
ಅತುಳ ಅಜಾದಿಯು ಶತ ಸಹಸ್ರ ಮೂರುತಿ ಅ |
ಮಿತ ಮೂರುತಿ ಅಪರಿಮಿತವಾದ ಮೂರುತಿ |
ಶತಿ (ತತಿ) ಆವರ್ಣ ಉತ್ಪತ್ತಿಗೈಸಿದ ಮೂರುತಿ |
ದಿತಿಜ ಅದಿತಿಜ ಸಂತತಿಯಾಳುವ ಮೂರುತಿ |
ಪ್ರತಿ ಯಿಲ್ಲೇಕವೇವ ಅದ್ವಿತಿಯ ಶ್ರೀಮೂರುತಿ |
ಪ್ರತಿಬೊಮ್ಮಾಂಡದಲಿ ಪ್ರಕೃತಿಯೊಡನೆ ಮೂರುತಿ |
ಚಿತು ಸದಶಾಶ್ವಿತ ವಿಜಯ ವಿಠ್ಠಲರೇಯ ಅಪ್ರಾ |
ಕೃತಕಾಯ ಕಾಲ ಅತೀತನಾದ ಉನ್ನತ ಮಹಿಮೆ ಗತಿಪ್ರದಾ ||೧||

## ಮಟ್ಟೆತಾಳ

ಪರಮೇಷ್ಠಿಮಾನದಿಂದ ನೂರುವರುಷ ಪರ್ಯಂ |
ತರ ಲಯಕಾಲ ಎರಡೊಂದು ರೂಪದಲ್ಲಿ |
ಸಿರಿ ಸೇವಿಯ ಮಾಡುತಿರಲು ನೀನಂದು |
ಧರಿಸಿದ ಅವತಾರ ಪರಮರೂಪಗಳಿಂದ |
ಮಿರಗುವ ತತ್ವನಿಯಾಮಕವಾದ ರೂಪಗಳಿಂದ |
ಪರಮ ಪುರುಷ ನೀನೆ ಏಕೀಭೂತನಾಗಿ |
ಚರಿಸಿದ ಅನಂತ ಜೀವರಾಶಿಗಳನ್ನು |
ದರದಲ್ಲಿ ಪೊಂದಿಟ್ಟು ಮೆರೆವದೇವರದೈವ |
ವಿಜಯ ವಿಠಲರೇಯ ಶರಧಿಯೊಳಿಟ್ಟಂತೆ ಅಚ್ಛೆದ್ಯಾಬೇಧ್ಯಾ ||೨||

## ತ್ರಿವಿಡಿತಾಳ

ದೀಪದಿಂದಲಿ ದೀಪಾ ದೀಪಾಂತರ ತೆರದಿ ಮೂಲ |
ರೂಪದ ದೆಶೆಯಿಂದ ಮತ್ತೆ ಅವತಾರ |

ರೂಪಗಳು ಪ್ರಾದುರ್ಭಾವಿದಾತ್ಮ ಸೃಷ್ಟಿ ।
ಈ ಪರಿ ತಿಳಿ ಈಶಗೆ ವಿಕಾರವಿಲ್ಲ ।
ರೂಪವಂತೆ ಲಕುಮಿ ತಾನೆನೆಗುತಾ ನೇಕ ।
ರೂಪಾಧರಿಪುದು ಪರಾಧೀನ ವಿಶೇಷ ।
ವ್ಯಾಪೃತಸೃಷ್ಟಿ ಕೇವಲ ಹರಿಯಾಧೀನ ।
ತಾ ಪೇಳಿಸುವಳು ಲಕುಮಿ ಕಾಲತ್ರಯದಲ್ಲಿ ।
ಶಾಪಾನುಗ್ರಹಶಕ್ತ ವಿಜಯ ವಿಠಲರೇಯ ।
ಅಪಾರಸುಖಸಾಂದ್ರ ಅನಂತಲೀಲಾ ॥೩॥

## ಅಟ್ಟತಾಳ

ಮುಂದೆನಿತ್ಯವಸ್ತು ಬಾಹ್ಯವಸ್ತಕ್ಕೆಸ ।
ಮ್ಮಂಥವಾದರೆಯಿದು ಮಿಶ್ರಸೃಷ್ಟಿಯುಯೆಂ ।
ತೆಂದು ಪೇಳೂತಿದೆ ಕೇವಲಾಸೃಷ್ಟಿಯು ।
ಹಿಂದೆಯಾಗುವ ವಸ್ತುಗಳಿಗೆ ಉತ್ಪತ್ತಿ ।
ಎಂದಿಗೆಂದಿಗೆಯಿದು ಸಿದ್ಧವೆನ್ನಿರೊ ಮೂ ।
ರೊಂದು ಬಗೆ ಸೃಷ್ಟಿಮೆ(ನೆ)ರದು ಪರಮಾತ್ಮ ।
ಒಂದಾದಿಂದಲಿ ವಾಸುದೇವಾದಿರೂಪಗ ।
ಳಿಂದ ಧರಿಸಿದವನು ಅಪರಿಮಿತರೂಪ ।
ಇಂದಿರೆ ಮಾಯಾಜಯಾದಿ ನಾಮದಲ್ಲಿ ।
ಅಂದವಾದರೂಪ ಅನಂತವಾದಳು ।
ಅಂದು ಮುಕುತಾಜಾದಿ ಜೀವರಾಶಿ ಗ ।
ಳಿಂದ ಲಕುಮಿಯಿಂದ ಕ್ರೀಡನೆ ಆಡ ಬೇ ।
ಕೆಂದು ಸ್ವಾಭಾವನೆ ಯಿಚ್ಛೆಮಾಡಿವ ಗೋ ।
ವಿಂದನು ಅಪೂರ್ಣ ಅತೃಪ್ತನಲ್ಲವೊ ।
ಪೊಂದಿದವರಿಗೆ ಅಧಿಕಸುಖಾ ।
ತಂದು ಕೊಡುವನು ತನಗೆ ಬೇಕಾದದ್ದು ।

ಒಂದಾದರುಯಿಲ್ಲ ಬೇಸರಿಕೆಯುವನಲ್ಲಾ |
ಒಂದೇಸಮದ್ವೈವ ವಿಜಯ ವಿಠಲನಿಗೆ |
ವಂದಿಸಲು ಭವಬಂಧನ ಪರಿಹಾರಾ ||೪||

### ಆದಿತಾಳ

ತತೋ ಚೌದ್ಧ್ಯಾಯೆಸಿ ಯೆಂಬ ಶ್ರುತಿ ವಚನ ಇದೆ ಅರ್ಥ
ಪ್ರತಿ ದೈವ ತನ್ನನಿಜ | ಸತಿಯು ಸಂಗಡ ನಾನಾ |
ರತವನ್ನು ಸುಖಿಸಿ ಸಂ | ತತ ಗೋಮತಿಗೆ ಬಲು |
ನ್ನುತದ ಪ್ರೇಮವನೀವೆ | ಅತಿಶಯ ವಾಗಿ ಅಬ್ಜ |
ಸುತಸರ್ವಜನರ ಮು | ಕುತಿಯಲ್ಲಿ ಅವರವರ |
ಹಿತದಂತೆ ಪ್ರೇರಿಸಿ ಭ | ಕುತಿ ಪೆಚ್ಚುವಂತೆ ಮಾಡಿ |
ರಥ ಹಯ ಗಜಾಂದಣಕೆ | ರಥಿಕರಾವುತನು ಮಾ |
ವುತನಾಗಿ ಆಡುವನು | ಚತುರತನದಿ ಮತ್ತೆ |
ಮಿಥುನ ಭಾವಾದಲ್ಲಿ ಅ | ಚ್ಯುತ ತನ್ನವರ ಕೂಡ |
ಮಿತಿಯಿಲ್ಲದೆ ರಮಿಸಿ ನ | ಗುತಕ್ರೀಡಿಯಾಡುವನು |
ಕಥೆ ರಾಮಾಯಣ ಭಾರತ ಮುಂತಾದ ರಹಸ್ಯ |
ಚತುರ ಮೊಗಗೆ ಶಾ | ಶ್ವಿತವಾಗಿ ತಿಳಿಸಿ ಮು |
ಕುತಿಲಿ ಸುಖಿಸುತಿಪ್ಪ | ಮತಿ ವಂತರ ಮನಕೆ ದೂರಾ |
ರತಿ ಪತಿ ಪಿತ ನಮ್ಮ ವಿಜಯ ವಿಠಲಾ ಉ |
ತ್ಪತ್ತಿಸ್ಥಿತಿಲಯಕರ್ತ | ಸ್ತುತಿಸೆ ಸಮಿಪ ನಿಲುವ ||೫||

### ಜತೆ

ಮುಕ್ತೀಲಿ ಈಪರಿ ಕ್ರೀಡಿಯಾಡುವ ಸರ್ವ
ಶಕ್ತಗುಣಪೂರ್ಣ ವಿಜಯ ವಿಠಲ ಕಾಣೋ ||೬||



## ಲಯಾನಂತರ ದುರ್ಗಾಸ್ತೋತ್ರ ಆರಂಭಿಸಿ

## ಬ್ರಹ್ಮದೇವರ ೪೫ ವರ್ಷವರಿಗೆ ಸಂಕ್ಷಿಪ್ತ ಸೃಷ್ಟಿ

### ೨೪) ಸುಳಾದಿ

ರಾಗ: ಭೈರವಿ ಧ್ರುವತಾಳೆ

ಆದಿ ಮೂರುತಿ ಪುರುಷ ಪೂರ್ಣಗುಣಾಂಬುಧಿ ಪುಳ ।
ಯೋದಕಾತೀತ ವಟಪತ್ರಶಾಯಿಯಾ ।
ಮೋದಾ ಪ್ರಮೊದಾಕಾಯ ಶ್ರೀಭೂದುರ್ಗೇಶ ಆ ।
ನಾದಿ ಪ್ರಸಿದ್ಧ ಶುದ್ಧಾಂತಿ ಕಾಂತಿಕಾ।
ವೇದ ವೇದಾಂತಗರ್ಭ ಗಂಭೀರ ಮಹಿಮಾ ಮಧು ।
ಸೂದನ ಪಾಪಸೂದ ಸುಲಭಾಸುಹೃತ!
ಆದಿತ್ಯಾವರ್ನಕೋಟಿ ಅಪ್ರತರ್ಕ ಅಪ್ರತಿ ।
ಆದಿವರ್ಣಾ ಪ್ರತಿಪಾದ್ಯ ಪುಣ್ಯಶ್ಲೋಕ ।
ಪಾದ ತ್ರಿಪಾದ ಭಿನ್ನಾಭಿನ್ನಾವಂಶಾರೂಪಾ ಪ್ರ ।
ಸಾದ ವಿಗ್ರಹ ದೈತ್ಯ ಕುಲಭಾಸ್ಕರೀ ।
ಪಾದವ ನಂಬಿದ ಜನರ ಯಾವತ್ಸಂಶಯ ।
ಛೇದಾಯಕಾ ಛೆತ್ರಾಧೀಶ ಪ್ರಭುವೇ ।
ಆ ದಾನಾದಿಕರ್ತ ಅಶೇಷಸಾಕ್ಷಿ ವಿ ।
ನೋದ ನಾ ನಾವತಾರ ವಿಷ್ಣು ತುರ್ಯ ।
ಯಾದವ ಶಿರೋರನ್ನ ಅಮೃತಾರ್ಣವಾ ಸಪ್ರಹ ।
ಲ್ಲಾದ ರಕ್ಷಕ ಗೋವ ತ್ರಾಣಪ್ರಾಣಾ ।
ಪಾದೋದರ ಪರಿಯಂಕ ವಿಜಯ ವಿಠಲ ದಾ ।
ಮೋದರ ಸರ್ವವ್ಯಾಪ್ತನೆಂದು ಉಪಾಸನೆ ಮಾಡು ।೧॥

### ಮಟ್ಟತಾಳ

ಶೂನ್ಯನಾಮಕನಾಗಿ ಮಲಗುವ ಮಹದ್ದೈವ |
ಕನ್ಯಾಶಿರೋಮಣಿ ಲಕುಮಿಗೆ ಕೃಪೆಯಿಂದ |
ಉನ್ನತವಾಗಿದ್ದ ಸೌಭಾಗ್ಯವಕೊಟ್ಟು |
ತನ್ನಿಚ್ಛೆಯಿಂದ ಕ್ರೀಡಿಯಾಡುವನೆಂದು |
ಅನಂತ ಜೀವರಾಶಿಗಳನೋಡಿ |
ಪುಣ್ಯಪಾಪವುಳ್ಳ ಬೀಜಕರ್ಮಗಳಿಂದ |
ಭಿನ್ನ ಲಿಂಗಗಳನ ಮಾಡುವೆನೆಂದು ಪ್ರ |
ಸನ್ನನಾದನು ಕಾಣೋ ಪ್ರಕೃತಿಯಮಾತಿಗೆ |
ಪನ್ನಗ ಶಾಯಿ ವಿಜಯ ವಿಠಲರೇಯ |
ಬಿನ್ನಾಣದಿಂದ ಮೆರೆವ ಮನ್ಮಥನಯ್ಯಾ ॥೨॥

### ತ್ರಿವಿಡಿ ತಾಳ

ಆತ್ಮಸರ್ಗವಮಾಡಿ ಮುಕ್ತರ ಸಂಗಡ |
ಅತ್ಯಂತಕ್ರೀಡಿಯಾ ನಾಡಿದಾ ಇರಳೂ |
ಮತ್ತೆ ಆ ತರುವಾಯಾ ಏಕೀಭೂತವಾಗಿ |
ಉತ್ತಮ ಶ್ಲೋಕನು ನಗುತ ವೇಗ |
ಹೊತ್ತು ಉಳಿದಿರಲಾಗಿ ಪ್ರಥಮ ವಾಸುದೇವ |
ವ್ಯಕ್ತಿಯಾದನು ಕಾಣೊ ಶೂನ್ಯನಿಂದ |
ಇತ್ತಾಲಾಲಿಸುವದು ಈತನೇ ಸರ್ವರ |
ಪೆತ್ತ ಪುರುಷಾ ದೇಹಾಧಾರಿಗಳ |
ಪ್ರತ್ಯೇಕ ರೂಪಗಳಧರಿಸಿ ಅನಿರುದ್ಧಾದಿ |
ಮೂರ್ತಿಯಿಂದ ಲಿಂಗೋಪಾದಾನವೊ |
ಸತ್ಯವೆಸರಿಯಿದು ಮರಳೆಸರ್ವರನ್ನ ಮಾ |
ಮಾರುತ್ತನಿಂದಲಿ ಕೇಳಿ ಪದವಿಯಿತ್ತಾ |

ಚಿತ್ತದಲಿ ತಿಳಿ ಪುರುಷಸೂಕ್ತದಿಂದ ।
ಸ್ತೋತ್ರ ಮಾಡಿಸಿಕೊಂಡ ಹಯಗ್ರೀವನೊ ।
ನಿತ್ಯಚತುರ ಮೂರ್ತಿ ವಂದಾಗಿ ಸರ್ವರನ್ನ ।
ತುತ್ತುಮಾಡಿದ ಕಾಣೊ ಅರುಣೋದಯ ।
ಚಿತ್ರಕೃತಿಯ ತನ್ನ ದೇಹಾದಿಂದ ।
ಪುಟ್ಟಿಸಿದ ವಿರಜನಾಮಕ ವಾರಿಯಾ ।
ಸತ್ವಜೀವಿಗಳಿಗೆ ಸ್ನಾನಾಮಾಡಿಸಿ ಲಿಂಗಾ ।
ಕಿತ್ತಿ ಪೋಗುವಂತೆ ನಿರ್ಣೈಸಿದ ।
ಸತ್ಯಸಂಕಲ್ಪನು ನಿಶ್ಚೇಷ್ಟವಾಗಿದ್ದ ।
ಚಿತ್ತುಗಳಿಗೆ ಜ್ಞಾನಿಚ್ಛೆ ಪ್ರಯತ್ನ ।
ಇತ್ತಾನು ಸ್ವಸ್ವಯೋಗ್ಯತಾದನಿತು ಅಂತಾ ।
ರಾತುಮ ವಾಸುದೇವನು ಪ್ರಥಮದಲ್ಲಿ ।
ತತ್ವಕೆನೇಮಿಸಿದ ಒಬ್ಬೊಬ್ಬಸುರರೀಗೆ ।
ಕರ್ತುನವ್ಮಾ ವಿಜಯವಿಠಲರೇಯ ।
ಕಿರ್ತಿ ಪುರುಷ ಇಂತು ವಲಿದಾನಂದದಿಂದಾ ||೩||

ಅಟ್ಟತಾಳ

ಈತನಿಂದಲಿ ದೇವಾ ನಾರಾಯಣ ದೇವಾ ।
ಜಾತನಾದನು ಕಾಣೊ ಕ್ಷೋಭಕಸರ್ವ ।
ತೀತಸಮಸ್ತ ವರ್ತಮಾನರಿಗೆ ಕ್ಷು ।
ತಾತುರ ಪಿಪಾಸ ಪುಟ್ಟಿಸಿದನು ಅಂದು ।
ಚೇತನರಾಶಿಯ ಉದ್ಭವಮಾಡಿ ಈ ।
ಗಾತುರಮೊದಲಾದ ಜೀವರಾಶಿಯ ದೇಹ ।
ತಾತೋರಿಸಿ ಕೊಟ್ಟು ಸರ್ವರನ ನರಾ ।
ಗಾತುರಾದೊಳು ಪ್ರವಿಷ್ಟಮಾಡಿಸಿ ತನ್ನ ।
ಗಾತುರದೊಳಗಿಟ್ಟು ಅಲ್ಲಿಂದ ಚತುರ ಮೂ ।

ರೂತಿಯಾದನು ವಾಸುದೇವಾ ಸಂಕರುಷಣ ।
ಖ್ಯಾತ ಪ್ರದ್ಯುಮ್ನ ಅನಿರುದ್ಧನಾಮದಿಂದ ।
ಸ್ವೇತರಕ್ತ ಪೀತ ಕೃಷ್ಣವರ್ನದಿಂದ ।
ಭೂತಿ ಉಳ್ಳವನಯ್ಯಾ ಸಕಲರೂಪಸಮ ।
ಮಾತ್ರ ಕಾಲಾವಾಗೆ ಭೇದಾ ವೆಂಬೋದಿಲ್ಲ ।
ಈ ತೆರದಲಿಕೇಳಿ ದ್ವಿತಿಯ ವಾಸುದೇವ ।
ಪಾತಃ ಕಾಲದಲ್ಲಿ ಪುರುಷನಾಮಕ ಅಜಾ ।
ಜಾತನ್ನ ಪಡೆದನು ಮಹಾಲಿಂಗೋಪಾದಾನಾ ।
ಸೂತ್ರನಾಮಕ ಪ್ರಾಣನ್ನ ಸಂಕುರುಷಣ ।
ವೋತ ಪ್ರೋತ ಮಾರುತಗೀತ (ನೀತ) ಗೆಂಬರು ।
ಮಾತು ಪುಶಿಯಲ್ಲ ಪ್ರದುಮ್ನದೇವರಿಗೆ ।
ಜಾತರಾದರು ಕನ್ಯೆಯರು ಈರ್ವರು ನಿಜಾ ।
ವಾತಧಾತಗೆ ರಾಣಿಯರು ಯೆನಿಸಿಬಲು ।
ಆತುರದಿಂದಲಿ ಸಂತಾನಪಡದರು ।
ನೀತಿಯನ್ನು ನೋಡು ಪರಂಪರೆಸರ್ಗವ ।
ಚಾತುರ್ಯ ಪ್ರದ್ಯುಮ್ನ ಅರ್ಧನಾರಿರೂಪ ।
ತಾತಾಳಿ ಸರ್ವಜೀವರ ನುಂಗಿ ತನ್ನಯ ।
ಗಾತುರ ಎಡಬಲದಿಂದ ಪುಂ ಪೆಂಗಳ ।
ಜಾತರ್ವಣಾಶ್ರಮ ಪುಟ್ಟಿಸಿದನುಗಡ ।
ಭೂತಳಾಧಿಪನಮ್ಮಾ ವಿಜಯ ವಿಠಲರೇಯಾ ।
ದಾತಾನುಕಾಣೋ ಸರ್ವಜೀವರಿಗೆ ॥೪॥

**ಆದಿತಾಳ**

ಅನಿರುದ್ಧದೇವನು ಸರ್ವರಿಗೆ ಲಿಂಗಂದಿಂದ ।
ತನವುಪಾಲಿಸಿದನು ಅವರವರತಕ್ಕದ್ದು ।
ಮನಸುಮೊದಲಾಗಿ ಪ್ರಥವಿಪರಿಯಂತ ।
ತನವು ಪಾಲಿಸಿದಾನು ಯಿಲ್ಲಿಗೆಲಿಂಗಾಸರ್ಗ ।

ಘನವಾಗಿ ತಿಳಿವದು ಹರಿಏಕಭೂತನಾಗಿ !
ಪುನರಾವರ್ತಿ (ತಿ) ವ್ಯಕ್ತನಾದ ಚತುರರೂಪ ।
ಗುಣ ಉಪಾದಾನದಿಂದ ಸರ್ವಜಿವರಿಗೆ ಸಾ ।
ಧನಕರ್ಮ ಪಾಪಪುಣ್ಯಭೋಗಾದೇಹವನಿತ್ತ ।
ಜನನ ಮರಣ ರೋಗಕೆ ಕಾರಣ ವೆನಿಸಿ ಜೀ ।
ವನ ರಾಶಿಗಣದವರನ್ನ ಸುತ್ತಿಸಿಸುವ ವೊಳಗಿದ್ದು ।
ಅಣೋರಣಿ ಮಹಾಪುರುಹ ಜಡತತ್ವದಿಂದಲಿ ಯೋ ।
ಜನ ಇಲ್ಲದೇವೆ ಪಂಚಾಕೋಶಾ ವರ್ಣಮಾಡಿ ।
ಮಿನುಗುವಾ ಐದುರೂಪಕೇಳಿದ್ಯೆವ ನಾರಾ ।
ಯಣ ದ್ವಿತಿಯವಾಸುದೇವ ಸಂಕರುಷಣ ಪ್ರದ್ಯುಮ್ನ ।
ಅನಿರುದ್ಧಾದಿಗಳಿವೆ ಅನಂದ ಮಯಾದಿಗಳೋ ।
ನೆನಿಸಿ ಅವ್ಯಕ್ತಾ ತತ್ವಾದಿ ಚತುರ್ವಿಂಶತಿ
ವನಜಜಾಂಡಕೆಯಿದೇ ಅವರ್ಕರೂಪಾವೆನ್ನಿ ।
ಅನಿಮಿಷಗಣವುಂಟು ತತ್ಸ್ಥಾನ ತರತಮ್ಯ ।
ಗುಣವಂತ ಈಪರಿ ತಿಳಿದ್ಯೆದು ರೂಪಗಳು ।
ಮನದಲ್ಲಿನಿಲಿಸಿಕೊಂಡಾಡಲು ಅಪರೋಕ್ಷ ।
ತೃಣಮಿಗಿಲಾದಲ್ಲಿ ಯಿದನೆಗ್ರಹಿಸುವದು ।
ಅನುಭವವಾಗುವದು ಆದ್ಯಂತ ಕಾಲಜ್ಞಾನ ।
ಮುನಿವೃಜವಂದ್ಯನಮ್ಮ ವಿಜಯು ವಿಠಲರೇಯ ।
ದಿನ ರಾತ್ರಿಯಲ್ಲಿ ಒಡನೆತಿರಗುವಾ ಬಂದು । ।೫॥

**ಜತೆ**

ಇರಳು ಹಗಲು ಯಿದನೆ ಯೋಚಿಸು ಮನದಲ್ಲಿ ।
ಕರುಣಾಕರಮೂರ್ತಿ ವಿಜಯು ವಿಠಲ ವೊಲಿವ ॥೬॥



## ಶ್ರೀ ಮಹಾಲಕ್ಷ್ಮೀ ದೇವಿಯು ಪರಾಧಿನಾವಾಪ್ತ ಸೃಷ್ಟಿ

### ೨೫) ಸುಳಾದಿ

ರಾಗ: ಧೃವತಾಳ

ಇಂದಿರಾದೇವಿ ಮತ್ತೆ ತಂದೆ ವಿಠಲ ನಾರಾ ।
ವಿಂದ ಚರಣಕಿನ್ನು ಅಂದಿಗೆ ಗೆಜ್ಜೆಯಾದ ।
ಹೊಂದಿಕೆಯಾದಲೂರು ಜಾನು ಕೈಯ್ಯಮೇಲೆ ।
ಛಂದದ ಸ್ವರೂಪ ಪೀತಾಂಬರೊಢ್ಯಾಣಾದೆ ।
ಮಂದರಧರ ನೊಕ್ಷಸ್ಥಳದಲಿ ನೀನಿಂದು ।
ಕಂದರದಲಿ ಚಿತ್ರ ವೈಚಿತ್ರ ಪರಿ ।
ಗಂಧವು ಪದಕ ಹಾರಂಗಳು ಪುಷ್ಪ ತುಲಸಿ ।
ಇಂದೊಪ್ಪುವ ಅಲಂಕಾರ ನಂದಶೋಭಿತಳಾದೆ ।
ಒಂದೊಂದು ಹಸ್ತದಲ್ಲಿ ಅಯುಧಗಳಾದೆ ।
ಛಂದುಳ್ಳ ಕಡೆಯು ತೋಳ್ಬಂದಿ ಭಜಕೀರುತಿ ।
ಕುಂದುಯಿಲ್ಲದೆ ಕರ್ನಕುಂಡಲ ನಾನಾಪರಿ ।
ಅಂದವಾದರಳೆಲೆ ಸುಂದರ ಕಿರೀಟವು ।
ಸಂದಿ ಸಂದಿಗೆ ನಾನಾಭರಣಾಲಂಕರಳಾದೆ ।
ಇಂದಿರೇಶನ ಪ್ರತಿ ಅವಯವಗಳಲಿನ್ನು ।
ಇಂದಿರೆ ಪ್ರತಿ ಪ್ರತಿ ವಸ್ತುವಾದೆ ।
ಕಂದರ್ಪನೈಯ್ಯನ ಆನಂದ ಬೆರೆದು ಸುಖಸುರಿದೆ ನೀ ।
ಒಂದರಘಳಿಗೆ ಅಗಲಾದೆಯಿನ್ನು ।
ಕಂದಾ ಬೊಮ್ಮನುಮತೆ ನಂದಿವಾಹನ ಅಮ ।
ರೇಂದ್ರ ಸನಕ ಸನಂದಾರಿಂದಲಿಯಿನ್ನು ।
ಕುಂದಿಲ್ಲದೋಲಗವ ನಂದಾದಿಕೊಳುತ ಮುಕ್ತ ।
ರಿಂದ ಸೇವಿತಳಾಗಿ ಯಂದೆಂದು ಬಿಡದಲೆ ।
ಸಂದೇಹ ವಿಲ್ಲದೆ ಗೋಪಾಲ ವಿಠಲನ್ನ ।
ಪೊಂದಿ ಸುಖದಲಿ ಛಂದದಿ ಮೆರದೆ । ॥೧॥

## ಮಟ್ಟತಾಳ

ಹರಿ ಅನಿರುದ್ಧನಾಗೆ ಸಿರಿ ಶಾಂತಿದೇವಿಯಾದೆ ।
ಹರಿ ಪ್ರದ್ಯುಮ್ನನಾಗೆ ಸಿರಿ ಕೃತಿದೇವಿಯಾದೆ ।
ಹರಿ ಸಂಕರುಷಣನಾಗೆ ಸಿರಿ ಜಯದೇವಿಯಾದೆ ।
ಹರಿ ವಾಸುದೇವನಾಗೆ ಸಿರಿ ಮಾಯಾದೇವಿಯಾದೆ ।
ಎರಡೆರಡವತಾರಕ್ಕೆ ಮರಳೆ ಮರಳೆ ಚ ।
ತುರ ಅವತಾರಗಳು ಅದೆ ।
ಪರಿ ಪರಿ ಅವತಾರಕ್ಕೆ ಪರಿ ಪರಿ ರೂಪಗಳ ಆದೆ ।
ಶರಣರ ಪಾಲಕ ಗೋಪಾಲ ವಿಠಲನ್ನ
ಚರಣ ಕಮಲವನ್ನು ಪರಿ ಪರಿ ಸೇವಿಸುತ ॥೨॥

## ತ್ರಿವಿಡಿ ತಾಳ

ಧರಿಯ ರೂಪದಿ ಹರಿಗೆ ಕುಳ್ಳಿರಗದ್ದುಗೆ ಯಾದೆ ।
ಮೆರವ ಅವ್ಯಾಕೃತಗಗನವೆ ಕೊಡೆಯಾದೆ ।
ಎರಡೆರಡೊಂದು ರೂಪದಿ ಹರಿಯಿತ್ತಲು ರಮಾ ।
ಮರಳೆ ಶ್ರೀ ರೂಪದಿ ಹರಿಯಿಂದ ಬೆರದು ।
ಸ್ವರಮಣನ ರಮಿಸಿ ಯೋಗ ನಿದ್ರೆಯ ಮಾಡಿ ।
ಹರಿಯಾಜ್ಞದಿಂದ ಅಂಬೃಣಿರೂಪಳಾದೆ ।
ಪರಿಪರಿಶ್ರುತಿಯಿಂದ ಸೃಷ್ಟಿಯ ರಚಿಸೆಂದು ।
ಹರಿಯ ಕೊಂಡಾಡಿದೆ ಹರುಷದಿ ನಲಿದೆ ।
ಹರಿಯನಾಭಿಯಲಿನ್ನು ಸರಸಿಜರೂಪದಿ ।
ವಿರಿಂಚಿಯನೆ ಪಡೆದೆ ಕರುಣಾಕರೆಮತ್ತೆ ।
ಅರಿವಂತೆ ಅಜಗಿನ್ನು ತಪತಪವೆಂದು ಅ ।
ಶರೀರ ಹಿತನುಡಿದೆ ಅವ್ಯಾಕೃತಕೆ ಅಭಿಮಾನಿ ।
ಪರಿಪೂರ್ಣಗುಣಭರಿತ ಗೋಪಾಲ ವಿಠಲನ್ನ ।
ಕರುಣಾದಿಂದೆರಡೆರಡು ಸೃಷ್ಟಿಯರಚಿಸಿದೆ ॥೩॥

### ಅಟ್ಟತಾಳ

ಹರಿಯಾಜ್ಞೆಯಿಂದಲಿ ಜಡ ಪ್ರಕೃತಿದೆಶೆಯಿಂದ ।
ವರ ತ್ರಿಗುಣಾತ್ಮಕವಾದಂಥ ಮಹತತ್ವ ಅ ।
ದರಿಂದ ವೈಕಾರಿಕ ತೈಜಸ ತಾಮಸವನ್ನು ।
ಭರಿತವಾದಂಥ ಅಹಂಕಾರ ತತ್ವ ।
ಪರಿಪರಿ ಸೃಷ್ಟಿಸಿದೆ ವರವಾಯಾ ನೋವಿಲ್ಲದೆ ।
ಪರಮ ದಯಾಳು ಗೋಪಾಲ ವಿಠ್ಠಲನು ।
ಕರುಣಿಸುವನು ನೀ ಕರವಿಡಿದವರ ॥೪॥

### ಆದಿತಾಳ

ಮಹತತ್ವದೆಶೆಯಿಂದ ಬೊಮ್ಮನ ಸೃಷ್ಟಿಸಿದೆ ।
ಅಹಂಕಾರ ವೈಕಾರಿಕದಿಂದ ಮನಸು ಅ ।
ಮಹ ಇಂದ್ರಿಯಗಳಿಗಭಿಮಾನಿ ದೇವತೆಗಳನ್ನು ।
ಅಹಂಕಾರ ಪಂಚತನ್ಮಾತ್ರಿಯನು ಸೃಷ್ಟಿಸಿದೆ ।
ಅಹಂಕಾರ ತೈಜಸದಿಂದ ಚಕ್ಷುರಾದಿ ।
ಇಹ ಇಂದ್ರಿಯಗಳನೆಲ್ಲ ಸೃಷ್ಟಿಸಿದೆ ।
ಅಹಂಕಾರ ತಾಮಸದಿಂದಲಿ ಪಂಚ ।
ಮಹಭೂತಂಗಳ ಸೃಷ್ಟಿಸಿದೆ ।
ಮೋಹದಿಂದ ಸಕಲ ತತ್ವೇಶ್ವರ ಸೃಷ್ಟಿಸಿದೆ ।
ಆ ಹರಿ ಕರುಣಾಪೂರ್ಣಕಟಾಕ್ಷದಿ ಈ ।
ಮಹ ಜಗಕೆಲ್ಲ ಪ್ರೇಮದಿಂದ ಸಲಹುವೆ ।
ಮೋಹನ್ನ ಮೂರುತಿ ಗೋಪಾಲ ವಿಠಲನ್ನ ।
ಸಹಸವಿಲ್ಲದೆ ರಹಸ್ಯ ಪೂಜಿಗೆ ॥೫॥

### ಜತೆ

ನಮೋ ನಮೋ ನಿನ್ನಪಾದಕಮಲವೆ ಮೊರೆಹೊಕ್ಕೆ ।
ಮಮತೆ ಪುಟ್ಟಿಸೆನಗೆ ಗೋಪಾಲ ವಿಠಲನಲ್ಲಿ ॥೬॥



# ಸಂಕ್ಷಿಪ್ತ ಪ್ರಳಯ ಸೃಷ್ಟಿ

ರಾಗ : ಭೈರವಿ ಧ್ರುವತಾಳ

## ೨೬) ಸುಳಾದಿ

ಮುಕ್ತಿಲಿ ಪಂಚಭೇದ ಜಡಜೀವ ಪರಮಾತ್ಮ
ಶಕ್ತಿ ಈಶಾಕೋಟಿ ಗಣನೆ ನಿತ್ಯ
ಮುಕ್ತಳು ಬೊಮ್ಮ ವಾಯುಮುಂತಾದ ಸುರರಿಗೆ
ಮುಕ್ತಿಯ ಕೊಡುವಳು ಈಶಾವಶಳು
ಮುಕ್ತಾ ಮುಕ್ತಾರಾ ವೊಡಿಯಾ ವೈಕುಂಠನಾಮಕ
ಶಕ್ತನೊಬ್ಬನು ಕಾಣೋ ತ್ರಿಲೋಕಕ್ಕೆ |
ಭಕ್ತಿ ಯೋಗ್ಯತವರಿತು ಭವಹರಿಸಿ ಚತುರವಿಧ |
ಮುಕ್ತಿಲಿ ಸುಖವೀವ ಸುಂದರಾಂಗ |
ಸೂಕ್ತಾದಿಗೆ ನಿಲುಕನು ಮೂಲಾವತ್ತಾರಾಭಿನ್ನ |
ರಕ್ತಾದಿವರ್ಣ ರಾಜೀವಲೋಚನ ಶುಕ್ಲ |
ರಕ್ತರಹಿತ ಪೂರ್ಣೇಂದು ವದನ !
ವ್ಯಕ್ತ ವ್ಯಕ್ತಾ ವ್ಯಾಪಾರ ಅಚಿಂತಾ ಮಹಾಮಹಿಮಾ |
ಭಕ್ತವತ್ಸಲ ಕರುಣಿ ಸರ್ವಸಾರಾ |
ಭೋಕ್ತಾನು ಆದಿ ಮಧ್ಯಾಂತರಹಿತ ದೈವ |
ಮೌಕ್ತಿಕಾಹಾರಾ ರತುನಾದಿ ಭೂಷ
ಉಕ್ತ ತಾರತಮ್ಯ ತತ್ವಕೆ ದೂರ ದೂರ |
ರಿಕ್ತರಿಗತಿ ಪ್ರಿಯಾ ಶ್ರೀಭೂದುರ್ಗಾಪತಿ ವಿ |
ರಕ್ತರ ಮನೋವಾಸ ವಿಜಯ ವಿಠಲಯನ್ನ |
ಉಕ್ತಿಗೆ ಸಹಯವಾಗು ದಾಸರಪ್ರಿಯಾ | ||೧||

## ಮಟ್ಟತಾಳ

ಹರಿ ಪರಂಜೋತಿ ಹರಿ ಪರ ದೈವತ್ತಿ ।
ಹರಿ ಸರ್ವೋತ್ತಮು ಹರಿ ಪುರುಷೊತ್ತಮು ।
ಹರಿ ಪರಬೊಮ್ಮ ಹರಿ ಜ್ಞಾನಗಮ್ಯ ।
ಹರಿ ವಿಶ್ವಾಮೂರ್ತಿ ಹರಿ ಚಕ್ರಾವರ್ತಿ ।
ಹರಿ ಪರಂಧಾಮಾ ಹರಿ ಸಾಸಿರನಾಮಾ ।
ಹರಿ ಸಾರ್ವಭೌಮ ಹರಿಭಕ್ತರ ಪ್ರೇಮ ।
ಹರಿ ಪರಿಪೂರ್ಣ ಹರಿ ನಾನಾವರ್ನ ।
ಹರಿ ಗುಣಗಣಾಂಬೋಧಿ ಹರಿ ಸರ್ವಸಿದ್ಧಿ ।
ಹರಿ ಸರ್ವದ ವೀರ್ಯ ಹರಿ ವಿಬುಧರವರ್ಯ ।
ಹರಿ ಪಾವನಕಾಯ ಹರಿ ಭುವನಮಾಯ ।
ಹರಿ ಪರಮಾತ್ಮ ಹರಿ ಉತ್ತಮೊತ್ತಮ ।
ಹರಿ ಪರತತ್ವ ಹರಿ ನಿರುತಸತ್ವಾ ।
ಹರಿ ನಿತ್ಯಾನಂದಾ ಹರಿ ಸಿರಿಗೋವಿಂದ ।
ಹರಿ ನಿತ್ಯಾತೃಪ್ತಿ ಹರಿ ಸಕಲ ವ್ಯಾಪ್ತಿ ।
ಹರಿ ವಿರಹಿತ ಜಾತ ಹರಿ ಜಗನ್ನಾಥ ।
ಹರಿ ಯೇಕಮೇವ ಹರಿ ಅಘವನದಾವಾ ।
ಹರಿ ನಿರ್ಭಯ ಶೂರ ಹರಿ ನಾನಾವತಾರ ।
ಹರಿ ಬಹು ಲಾವಣ್ಯ ಹರಿ ಸದಾ ತಾರುಣ್ಯ ।
ಹರಿ ಯಲ್ಲದೆ ಮತ್ತೆ ಹರಿಯು ಬಲ್ಲವದುಂಟೆ ।
ಹರಿಯವತಾರ ಶ್ರೀ ವಿಜಯ ವಿಠಲರೇಯ ।
ಹರಿಯೆ ತ್ರಿಭುವನ ಧೊರೆಯೆಂದವಜ್ಞಾನಿ ॥೨॥

## ತ್ರಿವಿಡಿ ತಾಳ

ಶೂನ್ಯ ನಾಮಕನಾಗಿ ಹರಿ ವಟದೆಲೆಯಲ್ಲಿ ।
ಪಣ್ಣವನೋಪಾದಿ ಬೊಮ್ಮಾಂಡ ನಾಯಕ ।

ಕನ್ಯಾರತುನವಾದ ಶ್ರೀಯಾಲಿಂಗನಿಯಿಂದೆ |
ತನ್ನಿಚ್ಛೆಯಲಿ ತಾನೇ ಪವಡಿಸಿದ್ದು |
ಮುನ್ನೆ ಬೊಮ್ಮನ ಮಾನ ತುಂಬಿ ಬೀರುತಲೀರೆ |
ಹನ್ನೆರಡು ವರೆ ವರುಷಾವಿರೆ |
ಮುನ್ನಿನಂತೆ ತೋರಿ ನಾಂಟ್ಯವಸಾಡಿ ಹಿ |
ರಣ್ಯ ಗರ್ಭಾದಿಗಳಾ ಉಳಿಯಾಗೊಡದೆ |
ಕಣ್ಣಿಂದ ಉರಿಕಿಡಿ ಉದರಿಸಿ ನೆರದವಾ |
ರನ್ನೆ ಕವಳವಮಾಡಿ ಭೂಷಣಧರಿಸೀ |
ಅನ್ಯರ ಸಂಚಾರ ಜಗದೊಳಿಲ್ಲ ದಂತೆ |
ಉನ್ನತ ಮಹಿಮನು ವೇದಪಾಲಾ |
ಅನ್ಯಾಯಾ ವೆನಿಸಾದೆ ಉತ್ಪತ್ತಿಸ್ಥಿತಿ ಲಯ |
ವನ್ನೆ ಮಾಡುತಲಿಪ್ಪೆ ವಿನಿಯಾದಲ್ಲಿ |
ಅನಂತಜೀವಿಗಳ ಒಡಲೊಡಗಿಸಿಯಿಪ್ಪೆ |
ಅಂಹೋರಣ್ಣಿಯರೂಪ ವಿಜಯ ವಿಠಲರೇಯ |
ಸನ್ನುತಿ ಸಾಲುಬಂದು ಸನ್ನಿಧಿಯಾಗುವ ||೩||

## ಅಟ್ಟತಾಳ

ಪ್ರಳಯೋದಕದಲ್ಲಿ ಜಲಜನಾಭನು ನಿ |
ಶ್ಚಲ ವರ ವೈಕುಂಠ ಪೊಳಲಲ್ಲಿ ಶ್ರೀಭಾಗ |
ಸ್ಥಳದಲ್ಲಿ ಪವಳಿಸಿ ಬಲುವೇಗ ನಿದ್ರಾ |
ಲಲನೆ ಕೂಡಾಲಿರೆ ಬೆಳಗುವದಕೆ ವೊ |
ದಲು ಪೇಳಿದಂತೆವೆ ತಿಳಿವೋದು ಶುದ್ಧಾರು |
ಲಲಿತಾಂಗಿ ಅಂಭೃಣಿ ವೊಲಿಸಿ ವೇಗಾದಿಂದ |
ಸಲೆಸ್ತೋತ್ರವ ಮಾಡೆ ವೊಲಿದು ಪುರುಷದೇವ |
ಸುಲಭದಿಂದಲಿ ತನುವುಳಿಯಾಲೀಸದೆ ನುಂಗಿ |
ಮಿಳಿತವಾಯಿತು ವಟಜಲ ಶ್ರೀ ಭೂದೇವಿಯ |

ಒಳಗೆ ಏಕೀಭೂತ ಮಳಲು ಗೂಡನು ಕಟ್ಟಲು ಮನೆಮಾಡಿದೆ ।
ತಲುವರಿಯಾನಂತೆ ಬಲು ಪ್ರಯಾಸಿಲ್ಲದೆ ।
ಬಲು ಹರುಷದಿಂದ ಸಲಿಸಿದ ತನ್ನಯ ಲಲನೇಯ ಬಿನ್ನಹ ।
ಚಲುವದೇವರ ದೇವ ವಿಜಯ ವಿಠಲರೇಯ ।
ನಲಿನಲಿದಾಡುವ ಹಲವು ಕಾಲದ ದೈವಾ ॥೪॥

ಆದಿತಾಳ

ಚತುರವಿಧ ಸೃಷ್ಟಿನೆನದು ಹಿತವಾಗಿ ತನ್ನ ನಿಜ ।
ಸತಿಮುಕ್ತಾರೊಡನೆ ಸಂತತ ಕ್ರೀಡೆಮಾಡುವಂಥ ।
ಚತುರ ನಾನಾಕಾ ಮೂರುತಿ ಯಾಗಿ ಬೆಳಗು ತಿಪ್ಪ ।
ತತುವ ನಿಯಾಮಕ ಸ್ವಭಾವಿತ ಕಾರ್ಯ ಅನುಪಮ ।
ದ್ವಿತಿಯಾ ನಿರ್ಗುಣಾ ಸಗುಣ ಸತುವಾದಿಗಣದಿ ವು ।
ತೃತ್ತಿಯಾಗುವಂತೆ ಪಂಚಾಶತ ಕೋಟಿಯೋಜನ ಪರಿ ।
ಮಿತ ಬೊಮ್ಮಾಂಡವ ರಚಿಸಿ ಚತುರವೊಗನು ಸುರ ।
ತತಿಮಿಕ್ಕ ಜೀವರ ಪ್ರಕೃತಿಯಿಂದಾ ಪುಟ್ಟಿಸಿ ಭ ।
ರಿತ ವಾಗುವಂತೆ ಸಾರೆ ।
ಪತಿತ ಪಾವನ ರಂಗ ವಿಜಯ ವಿಠಲ ತನ್ನ
ತುತಿಸಿದವರಿಗೆ ಸಂತತಿ ಕಾಣೊ ಇಹ ಪರಂ । ॥೫॥

ಜತೆ

ಜಗತ್ಸತ್ಯಾ ಅನಿತ್ಯಾ ಯೆನಿಸುವದು ಕಡೆಗೆ ।
ಜಗದ್ದೈವ ವಿಜಯ ವಿಠಲನೆ ಎಂದಿಗೆ ಸತ್ಯಾ ॥೬॥



# ಬ್ರಹ್ಮ ದೇವರ ಸೃಷ್ಟಿ ಪ್ರಕರಣ

ರಾಗ : ಭೈರವಿ ಧ್ರುವತಾಳ

## ೨೭) ಸುಳಾದಿ

ಅಂದು ಮಹಾಪ್ರಳಯ ರಾತ್ರಿ ಸಂಪೂರ್ಣೋದಯ।
ಸಂಧಿಸಿದ ಸಮಯದಲ್ಲಿ ವಿಪ್ರಜಾತಿ।
ಎಂದೆನಿಸುವ ವಾಸುದೇವ ಭಗವದ್ರೂಪ।
ದಿಂದ ಪುಟ್ಟಿದ ಪುರುಷನಾಮಾ ಬ್ರಹ್ಮ।
ಗೊಂದು ಶರೀರವಿದು ಆದಿಯಲುದ್ಭವ।
ಪೊಂದಿದನಾದಿಲಿಂಗ ಕಾರಣವಿದಕೋ।
ನಿಂದಿಹ ಪುರುಷ ಬ್ರಹ್ಮನೀ ತತ್ವದೇಹದಲ್ಲಿ।
ಮುಂದೆ ಮತ್ತೊಂದು ಗಾತ್ರನಿರ್ಮಾಣವೋ।
ಅಂದವಾಗಿದೆ ಭಾಗತ್ರಯವಾದ ಯೇಕರೂಪ।
ದಿಂದ ಮೆರೆದ ಪ್ರಕೃತಿ ಶಬ್ದವಾಣೀ।
ಯಿಂದ ಪುಟ್ಟದನೊಂದು ಅಂಶದಿಂದ ವಿರಂಚಿ।
ಹಿಂದಣ ದೇಹದೊಳಗೆ ಅತಿ ಪ್ರಬೇಧ।
ಸಂದೇಹ ವಿದಕಿಲ್ಲ ಮನಚಿತ್ತ ಬುದ್ಧಿಯಂತೆ।
ಬಿಂದು ಪಾದಾನಾತಿಳಿ ತ್ರಯಗುಣಜೀವರು।
ಇಂದಿಗೆ ಎಂಟುವರ್ಷಸವೆದು ಪೋದವುಮೇಲೆ।
ಇಂದು ಮೌಳಿಯ ಪೆತ್ತನಾತರುವಾಯಾ।
ಒಂದೊಂದು ಸಂವತ್ಸರ ಮೀರಿ ಪೋಗಲಲ್ಲಿಗೆ।
ಸಂದಿ ಪೋಯಿತು ಅಜಗೆ ಹತು ಅಬ್ದಾ (ವರ್ಷ)।
ಮುಂದೆ ಅನಿರುದ್ಧ ದೇವ ಜನಿಸಿದ ಜೀವಿಗಳ।
ಛಂದದಿಂದಲಿ ಗರ್ಭದೊಳು ತಾಳಿದ।
ಮಂದಹಾಸದಿಂದ ಯೆಲ್ಲರಿಗೆ ತನ್ನಾಮಕ।
ವೆಂದೆಂಬ ದೇಹಚಿತ್ತ ತಾರತಮ್ಯದಿ।

ಕಂದರ್ಪ ಪಿತ ನಮ್ಮ ವಿಜಯ ವಿಠಲ ಶತಾ |
ನಂದಗೆ ಕರುಣಿಸಿದ ದೇಹಗಳೆಣಿಕೆ ನೋಡೂ ||೧||

### ಮಟ್ಟ ತಾಳ

ವಾರಿಜ ಸಂಭವಗೆ ತ್ರಿಗುಣಾತ್ಮಕ ಲಿಂಗ
ಶರೀರದಿಂದ ಬಂದಗಾತ್ರಗಳೆಣಿಕೆ |
ಹಾರೈಸು ಮೊದಲುವ್ಯಕ್ತ ತತ್ವ |
ಮೂರೊಂದು ವಿಧ ಮಹಾನಹಂಕಾರಾ ತ್ರಿವಿಧಾ |
ವರಣ ಮನದಶಯಿಂದ್ರಿಯಂಗಳು
ಸಾರತನ್ಮಾತ್ರಕ ನಭವಾಯು ವಂ |
ಗಾರ ಉದಕ ಧರಣಿ ಈರೀತಿಯಲ್ಲಿ ಒಂದೊಂದು |
ಶರೀರ ಬೇರೆಬೇರೆಯಕ್ಕು ಕವಚವ ತೊಟ್ಟಂತೆ |
ಚಾರು ಪ್ರಕಾಶದಲ್ಲಿ ಪ್ರಥಮ ಕಳೇ |
ವರಕೆ ವಂದಾವರಣ ಈರನೆದೇಹಕ್ಕೆ ಅವ್ಯಕ್ತದ ಸಹಿತ |
ಮೂರನೆ ಗಾತ್ರಕ್ಕೆ ಮಹತತ್ವದ ಕೂಡ |
ಸಾರ ಪ್ರಮೇಯ ತಿಳಿ ಯಿದೆಯಿದೇ ಪ್ರಕಾರ |
ಮೂರೆಂಟು ತತ್ವಗಳೊಂದಧಿಕ |
ಕಾರಣ ಕಾರ್ಯಗಳು ಅಂಶಿ ಅಂಶಯುಕ್ತ |
ಮಾರನಯ್ಯ ನಮ್ಮ ವಿಜಯ ವಿಠಲ ವಿ |
ಸ್ತಾರ ಮಾಡಿದನಿನಿತು ಬೊಮ್ಮಗೆ ದೇಹಗಳನು ||೨||

### ತ್ರಿವಿಡಿ ತಾಳ

ಗುಣವಿಶಿಷ್ಟರಾಶಿ ಭೂತ ಪ್ರಕೃತಿ ಸೂಕ್ಷ್ಮ |
ವೆನಿಸುವಲಿಂಗ ಷೋಡಶ ಕಳಾಭಾಗ |
ಮಿನುಗುವಂದೊಂದು ಪರಮಾಣು ಪುಂಜವ |
ವಖ್ಖಾಣಿಸಬಲ್ಲನಾರು ತುಂಬಿಹವೊ |
ಅನುಕೂಲ ಮುಂದೆಪುಟ್ಟುವ ಅನಿರುದ್ಧಕ್ಕೆ |
ಮನೋಹರ ವಾಗಿವೆ ಬ್ರಹ್ಮರಾಯಾ |

ತನವುತೆತ್ತನು ನೋಡು ಬೀಜಾಂಕುರದಂತೆ ।
ಗಣನೆಯಿಲ್ಲದ ತತ್ವಸಂಖ್ಯೆಯಿಂದ ಜನಕ ।
ಜನಕಭಾವ ಪರಮಾಣುಗತಿ ಕಾ ।
ರಣ ಕಾರ್ಯವೆನಿಸಿ ಪ್ರತಿ ।
ತನವುಗಳಾದವು ಆವರ್ಕಸಾಕಾರ ।
ಅನಿರುದ್ಧ ನಿರ್ಮಾಣ ಮಾಡಿದನಯ್ಯಾ ।
ವನಜ ಸಂಭವಗೇಕೋನತ್ರಿಂಶತಿ ದೇಹ ಲ ।
ಕ್ಷಣ ಪೂರ್ಣದಿಂದಲಿ ಬೆಳದವದಕೋ ।
ಘನ ಮೂರುತಿ ನಮ್ಮ ವಿಜಯ ವಿಠಲರೇಯ ।
ಗುಣಪೂರ್ಣ ಶಾಂತಿಯಿಂದಲಿನಿತು ಪುಟ್ಟಿಸಿದ ।೩॥

## ಅಟ್ಟತಾಳ

ಏಕದ್ವಯತ್ರಯ ಚತುಃ ಪಂಚ್ ಷಟ್ ಸಪ್ತ
ಈ ಕ್ರಮಕ್ಕೆ ಕಾಯ ಚರಮ ಪರಿಯಂತ ।
ಲೋಕೇಶಗೆ ಇಪ್ಪತ್ತೆಂಟು ಭಿನ್ನಾಂಶದಲ್ಲಿ ।
ವಾಕು ವ್ಯವಹಾರ ಜಗದೊಳು ಪಾದಾನಾದಾ ।
ಪ್ರಕೃತಿಗಳೆಲ್ಲ ಲಿಂಗ ಸಮ್ಮಂಧವೊ ।
ಆಕಾರವೆನ್ನಿ ಸೂಕ್ಷ್ಮನೋಡಲು ಸ್ಥೂಲ ।
ಪ್ರಾಕು ವಿಚಾರಿಸಿ ದ್ವಿತಿಯ ಶರೀರವು ।
ಶೋಕವಿನಾಶನ ವಿಜಯ ವಿಠಲರೇಯ ।
ಬೇಕಾದ ವರವೀವ ಈ ಪರಿಕೊಂಡಾಡೆ ।

## ಆದಿತಾಳ

ವಿಷಮಾವಸ್ಥಿ ಯಾಗದ ತತ್ಪೂರ್ವದಲ್ಲಿಯಿಡೆ ।
ಪುಶಿಯಲ್ಲ ವನಿರುದ್ಧ ದೇಹಪ್ರಾಪ್ತಿ ।
ಬಿಸಿಜ ಭವಾಂಡ ಬಾಹ್ಯ ಪ್ರಥಮಾವರಣತತ್ವ ।
ವಸುಮತಿ ಪರಿಯಂತ ಯೆಣಿಸು ಮೂಲ ಪ್ರಕೃತಿ ।
ವಶನಾದವ್ಯಕ್ತ ಮಹಗುಣತ್ರಯಾತ್ಮಕಹಂಕಾ ।

ರೆಸವ ಮನ ಜ್ಞಾನ ಕರ್ಮ ಮಾತ್ರ ಭೂತಪಂಚ |
ಮಿಸುಣಿಯೆಂದಂದಿ ದೇಹವಷ್ಟವಿಂಶತಿ ರಾ |
ಜಿಸುತಿಪ್ಪವು ನೋಡು ಯಿದೆಯಿದರೊಳು ಲಿಂಗ |
ದೆಶೆಯಿಂದ ಪಲ್ಲೈಸಿದ ಅನಿರುದ್ಧದೇಹ ಪ್ರಜ |
ನಿಸಿದವು ಭಿನ್ನವಾಗಿ ತತ್ವ ತತ್ವದೇಹ |
ಬಿಸಿಜ ಸಂಭವನಗೆ ದ್ವಿವಿಧ ಪ್ರಕೃತಿಯಿಂದ |
ದಶ ಪಂಚಮೇಲಾರು ಸಿದ್ಧವಾದವು ಪು |
ರುಷಗಾತ್ರಯಿದರಂತೆ ತಿಳಿದು ಕೂಡಿಸುವದು |
ಅಸಂಭಾವಿತವಲ್ಲ ಯಿದರವಿನಾಯಿನ್ನು |
ಎಸಳು ಶರೀರ ವುಂಟು ವಿಜ್ಞಾನ ಚಿತ್ತಬುದ್ಧಿ |
ಅಶ್ರದ್ಧ ವೈರಾಗ್ಯ ಬಲ ವೀರ್ಯ ಲೋಕಮಂತ್ರ |
ಪೆಸರನ್ನ ತಪ ಕರ್ಮ ಕಲಾದಿಯೆಲ್ಯುಂಟು |
ಹಸನಾಗಿ ಯಿವುಯೆಲ್ಲ ಸಪ್ತಾವರ್ಣದೊಳಗೆನ್ನಿ |
ತ್ರಿಸರದಗುಣದಕಾರ್ಯ ಚತುರವಿಂಶತಿ ತತ್ವ |
ಮಿಸರಿಯಾದನೇಲೆ ವಿರಾಟ್ ಸತ್ಯಲೋಕ |
ವಸುಧಿಗೆ ನಾಭಿಗಿರಿ ಸ್ವರ್ಗ ಭೂರ್ಭುವರಾದಿ |
ದಶದಿಕ್ಕಿ ನೊಳಗೆ ಈಪರಿ ರೂಪಾಂತರ ರೂಪ |
ಕುಶಲ ಸರ್ವದಕ್ಷಾಣೊ ಪರಮಾಣು ಪ್ರದೇಶ |
ವಸತಿ ಯಾಗಿಪ್ಪನು ಅಂಶಿ ಅಂಶಾನಂತ |
ಬೆಸಸಬಲ್ಲವರಾರೊ ಈತನ ಮಹಿಮೆ ಮಾ |
ನಸದಲ್ಲಿ ನಿರ್ಜರಾದಿಗಣ ಯೆಣಿಸಲಾರದು |
ಅಸುರಸಂಹರ ವಿಜಯ ವಿಠಲರೇಯ |
ಪಶುಪತಿ ಸುರರಿಗೆ ಉತ್ತಮನು ಮಾಡಿದ ||೫||

**ಜತೆ**

ಚತುರ್ಮುಖ ಧರಿಸಿದ ಶರೀರಯಿನಿತಯ್ಯಾ |
ಚತುರ ಮೂರುತಿ ತುರ್ಯ ವಿಜಯ ವಿಠಲನಿಂದ ||೬||

# ಋಜುಗಣಸ್ಥರ ಸೃಷ್ಟಿ ಪ್ರಕರಣ

## ೨೮) ಸುಳಾದಿ

ರಾಗ: ಭೈರವಿ ಧ್ರುವತಾಳ

ಋಜುಗಣಸ್ಥರ ಪ್ರಕರಣವನ್ನು ಕೇಳಿನಿತ್ಯ ।
ಸುಜನರಿಗೆ ಬಲು ಸುಜನರಯ್ಯಾ ।
ಕುಜನ ಮಾರ್ಗದವರ ವ್ಯಾಪಾರಯಿವರಿಗಿಲ್ಲ ।
ರಜೋಗುಣದಿಂದ ಮಹಸತ್ವವೆರಸಿ ।
ತ್ರಿಜಗದೊಳಗೆ ವೊಂದೊಂದಂಗವಧರಿಸಿ ವಾ ।
ರಿಜಕಲ್ಪ ಪರಿಯಂತ ಚರಿಸುವರು ।
ಅಜನ ಪಟ್ಟಕ್ಕೆಸಾರೆ ಚರಮದೇಹ ಚತು ।
ರ್ಭುಜ ಯುಕ್ತ ಜಪಮಾಲೆ ಕಮಂಡಲು ।
ದ್ವಿಜಗಮನ ವಾಣಿಪತಿ ಸರ್ವಜೀವಿಗಳನ್ನು ।
ಸೃಜಿಸುವ ಮಹಾಯೋಗ ಚತುರವದನ ।
ಭುಜಗೇಶ ಭೋಗತಲ್ಪ ಈತನಿಗೆ ಸ್ವಬಿಂಬ ।
ನಿಜ ವಾಸುದೇವನೆಂಬೋ ನಾಮವುಂಟು ।
ಭಜನೆ ಮಾಡುವ ತನ್ನಕಾರದಂತೆ ।
ವೃಜಗುಣ ರೂಪಕ್ರೀಯ ಭೇದದಿಂದ ।
ರಜದೂರನಾಗಿ ವೊಂದರೊಳನಂತಕಾಣುತ್ತ ।
ಗಜ ಮೊದಲಾದ ತನ್ನ ದೇಹವಿಡಿದು ।
ರಜ ಮಾತುರವಲ್ಲ ಸರ್ವವು ವಿಸ್ತಾರ ಪಂ ।
ಕಜ ಪಾಣಿಗಿಂತನೋಡಾನಂತ ಕಡಿಮೆ ।
ಎಜಮಾನ ಸೀತನಯ್ಯಾ ಮುಕ್ತಿಲಿ ಸಂಕರುಷ ।
ಣಜ ರೂಪದಿಂದ ಚರಿಯವಿಲ್ಲ ಇತ್ತ ।
ಪ್ರಜಗಳಿಗೆ ಯಿವರು ಮುಖ್ಯ ಪ್ರೇರಕರು ವಾ ।

ರಿಜ ನಾಭನ ತರುವಾಯದಲ್ಲಿ ಬಿಡದೆ ।
ಯಜನಾದಿ ಕರ್ಮಂಗಳಿಗೆ ಪೂರ್ಣಫಲಕೆ ಪಾತ್ರರು ।
ಪ್ರಜಗಳು ಮಾಡಿದ ಪುಣ್ಯಯಿವರಿಗಕ್ಕು ।
ದ್ವಿಜಜಾತಿಯಲ್ಲಿ ಶ್ರೇಷ್ಠನಾಗಿಪ್ಪ ಹರಿಯಾ ಮು ।
ಖಜನಾಗಿ ಜನಿಸಿ ವಿರಾಟದಲ್ಲಿ ।
ಬಿಜಯಂ ಗೈವನು ಯಿದೇ ದೇಹದಲ್ಲಿ ವಿ ।
ರಜೆಯಲ್ಲಿ ಮುಣುಗಿ ವಿಲಿಂಗನಾಗಿ ಸಾ ।
ಹಜಗತಿ ಐದುವ ಸರ್ವಾಂಗ ಸಾಯುಜ್ಯ ।
ರಜನಿ ಚರಾದಿ ವಾಸುದೇವಾನಲ್ಲಿ ।
ಭಜನೆ ಯಿಲ್ಲವು ಕಾಣೋ ಯಿಾತನು ತ ।
ನುಜ ನಿತ್ತ ಶಾಪವನ್ನು ಮನ್ನಿಸಿದ ।
ವಿಜಯ ಸಾರಥಿ ನಮ್ಮ ವಿಜಯ ವಿಠಲನ ವಾ ।
ರಿಜ ಪಾದ ಸಂತತ ಮನದಲ್ಲಿಟ್ಟ ಗುರುವೆ ॥೧॥

## ಮಟ್ಟತಾಳ

ತೊಂಭತ್ತೆಂಟುಮಂದಿ ಲಾತವ್ಯರು ಕಾಣೋ ।
ಎಂಬುದು ನಿಜವೆನ್ನಿ ವೊಬ್ಬಗೆ ನನ ಪದವಿ ।
ಅಂಬುಜ ಸಂಭವಗೆ ಸತ್ಯಲೋಕದ ಪದವಿ ।
ಉಂಬೋರು ಪ್ರಾರಬ್ಧಾ ಶತಸ್ಥರೊಂದೆ ಗಣ ।
ಒಂಭತ್ತು ವಿಧಭಕುತಿ ಇವರಲ್ಲಿ ನಿತ್ಯಾ ।
ತುಂಬಿ ಕೊಂಡಿಹದು ಅನಾರಬ್ಧಕಾಲಕ್ಕೆ ।
ಬಿಂಬ ನೋಳ್ಪದುಮತ್ತೆ ಕಾಲ ವ್ಯವಧಾನ ।
ಕುಂಭಿಣಿಯೊಳಗಿವರು ಪುಟ್ಟಿದಕಾಲಕ್ಕೂ ।
ಡಂಭಕತನ ನಡತೆ ಸಲ್ಲದು ಸರ್ವರಲಿ ।
ಅಂಬುಜ ಪತಿ ನಮ್ಮಾ ವಿಜಯ ವಿಠಲ ನಂಘ್ರಿ
ಬೆಂಬಿಡದೇ ನೋಡಿ ನಲಿ ನಲಿದಾಡುವರು ॥೨॥

### ರೂಪಕತಾಳ

ಪದುಮ ಜಾಂಡಾವರಣ ಪುಟ್ಟಿದ ಪೂರ್ವದಲಿ
ಸದಮಲವಾಗಿದ್ದ ಲಾತವ್ಯಜನರೆಲ್ಲ ।
ಉದುಭವಿಸಿದರಂದು ಸೂಕ್ಷ್ಮ ಶರೀರದಲಿ ।
ಒದಗಿ ಇಪ್ಪತ್ತೊಂದು ಮೇಲೆ ಮೂರರಕೂಡಿ ।
ಅದುಭೂತವಾಗಿದ್ದ ಅನಿರುದ್ಧನಿಂದಲಿ ।
ಮದನಾರಿತತ್ವ ಆರಂಭಿನಿ ಕೊಂಡು ।
ಇದೆಯಿದೆ ಗಾತ್ರದಲಿ ಅಭಿಮಾನಿಗಳಹುದು ।
ಅಧಿಷ್ಠಾನರಾಗಿ ಅಲ್ಲಿಗಲ್ಲಿಗೆ ಯಿದ್ದ ।
ಮುದದಿಂದಲಿ ತಮ್ಮಸಾಧನ ಮಾಡುವರು ।
ಎದುರಿಲ್ಲ ಈ ಜನಕೆ ಸ್ಥೂಲದೇಹ ಬರುವ ।
ದದುಕಾಣೊ ಮನೋಮಯ ಮುಖ್ಯಪ್ರಾಣ ।
ವಿಧಿಗಳಿಂದಲಿಸಿದ್ಧ ವಿಶೇಷಜ್ಞಾನಿಗಳು ।
ಪದೋಪದಿಗೆ ಅಯತಾರ್ಥಸಂಶಯ ವಿಲ್ಲ ।
ಮಧು ವೈರಿಯ ಕರುಣ ವತ್ಯಂತ ಯಿವರಲ್ಲಿ ।
ಪದವಿ ಯೈದುವದಕ್ಕೆ ತರತ್ಯಮ್ಯ ವೊಂದುಂಟು ।
ನಿಧಿ ಪ್ರಧಾನ ಹರಿ ವಿಜಯ ವಿಠಲನಲ್ಲಿ ।
ವಿಧ ಬಹು ವಿಧದಿಂದ ಚಿತ್ತ ಪೊಂದಿಸಿಯಿಪ್ಪರೊ ॥೩॥

### ಝಂಪಿತಾಳ

ವಾಸುದೇವನಿಂದ ಒಂದು ಸೂಕ್ಷ್ಮದೇಹ ।
ಲೇಸಾಗಿ ಬರುವದು ಪ್ರಥಮದಲ್ಲಿ ।
ಭಾಸುರ ಅನಿರುದ್ಧ ದೇವನಿಂದಲಿ ಪ್ರ ।
ಕಾಶಿಸುವಗಾತ್ರ ಮೂರೊಂದು ಮೂರು ।
ಈಸು ಕೆಳೆದು ಮುಂದೆ ಇಪ್ಪತ್ತೊಂದು ಮುಂದೆ ।

ಕೋಶಗಳು ಶೇರಿದವು ವಾಣೀಶಗೆ ।
ತೋಷದಿಂದಲಿ ನೋಡೆ ಅನಿರುದ್ಧನಿಂದ ಅಜ ।
ಗಾ ಶರೀರಗಳು ಅಷ್ಟವಿಂಶತಿ ।
ವಾಸುದೇವನ ದೇಹ ವಂದುಗೂಡಿಸಿ ಯೆ ।
ಣಿಸಿದರೆ ವಂದು ಕಡಿಮೆ ಮೂವತ್ತು ।
ಭೂಷಣ ವಾಗಿಹವು ಪ್ರತ್ಯೇಕ ಪ್ರತ್ಯೇಕ ।
ಲೇಶ ಬಿಡದಲೆ ಸೂಕ್ಷ್ಮ ಲಿಂಗೋಪಾಧಿ ।
ಆ ಸತ್ವ ರಾಜಸ ತಾಮಸದಲ್ಲಿ ವೊಂದೊಂದು ।
ಮೋಸವಿಲ್ಲದೆ ಮಹದಲ್ಲಿ ವಂದು ತೈ ।
ಜಸ ವೈಕಾರಿಕ ತಾಮಸ ಕೂಡಿದಲ್ಲಿ ।
ಸೂಸು ತಿಪ್ಪುವು ಮೂರರಲ್ಲಿ ಮೂರು ।
ಶಾಶ್ವಿತವಾಗಿ ಮನಸಹಿತ ಇಪ್ಪತ್ತೊಂದು ।
ಆಸಮಸ್ತ ಚತುರ್ವಿಂಶ ತತ್ವದಲಿ ।
ವಾಸವಾಗಿ ಇಪ್ಪತ್ತೆಂಟು ದೇಹದಿಂದ ।
ಹ್ರಾಸ ವೃದ್ಧಿಗಳಿಲ್ಲ ಅಯತಾರ್ಥಜ್ಞಾನ ।
ಆ ಶರೀರಂಗಳು ಭೇದಮಾತ್ರವೊ ।
ಕೇಶವಾಚ್ಯುತನಂತ ವಿಜಯ ವಿಠಲ ರೇಯನ ।
ರಾಶಿ ಗುಣಗಳನು ಎಣಿಸುವನು ವೇದೋಕ್ತದಲಿ ॥೪॥

### ತ್ರಿವಿಡಿ ತಾಳ

ಮೊದಲು ಪುಟ್ಟಿದದೇಹ ಮಹತತ್ವಾತ್ಮಕ ವೆನ್ನಿ ।
ಅದರ ತರುವಾಯ ಮಹಾಂಕಾರವೊ ।
ಇದೆಯಿದೆ ಪ್ರಕಾರ ಒಂದರ ಮೇಲೆ ವೊಂದು ।
ಒದಗಿ ಕೊಂಡಿಪ್ಪವು ಸೂಕ್ಷ್ಮವಾಗೀ ।
ಅದು ಭೂತ ಅಂಶಿ ಅಂಶಗಳಿಂದೆ ಯಿನಿತು ।
ಅದದು ಕಾಣೋ ತತ್ವ ಪುಟ್ಟಿದ ಮುನ್ನವೊ ।

ವಿಧಗೆ ಈ ಪರಿಯುಂಟು ಪೃಥ್ವಿ ತತ್ವದ ತನಕ |
ವಿಧಿ ನಿಷೇಧ ಯಿವರಿಗೆ ಯಿಲ್ಲವೊ |
ಮುದದಿಂದ ಕರ್ಮಗಳು ಮಾಡುವರು ಹರಿಯ ಪಾ |
ದದ ಧ್ಯಾನ ಪ್ರವಾಹ ರೂಪದಲಿ |
ಹದುಳವೆ ಕೇಳಿಸರಿ ಯೆಂದಿಂದಿಗಾದರು |
ಚದರಿ ಪೋಗದು ಜ್ಞಾನ ಸಂಸಾರದೀ |
ಉದರಕ್ಕೋಸುಗ ಪದವಿ ಬೇಡುವರಲ್ಲ ಮ |
ತ್ರಿದಕೋ ಹರಿ ಪ್ರೀತ್ಯರ್ಥ ಬಯಸುವರು |
ಮಧುರ ಪುರದರಾಯ ವಿಜಯ ವಿಠಲ ರಂಗನ |
ಸುಧೆಯಲ್ಲಿ ನೆನೆಸುವ ಬ್ರಹ್ಮಾನಂತರೂಪ ||೫|

**ಅಟ್ಟ ತಾಳ**

ಜ್ಞಾನ ಪೂರ್ವೋತ್ತರ ಬ್ರಹ್ಮನ ಸಾಧನ |
ಆನಂದ ವಾಗಿದೆ ಯಿಷ್ಟಾನಿಷ್ಟವೆಂದು |
ಏನಂಬೆನಯ್ಯಾ ಈತನಿಗೆ ನಿಷ್ಕಾಮುಕ |
ನಾನಾ ಸಂಕಲ್ಪವು ಮುಖ್ಯ ಹರಿಯ ಗು |
ಣಾನು ಸಾರವಾಗಿ ಅನ್ಯ ಪ್ರೇರಣೆ ಸಲ್ಲ |
ದಾನವರಿಗೆ ಭೀತಿ ಬಟ್ಟದ್ದು ಭಯ ಅ |
ಜ್ಞಾನಾ ಶೋಕಂಗಳು ತೋರಿದುದೆಲ್ಲ |
ಭಾನು ಮಧ್ಯಗತವಾಗಿ ತೋರಿದಂತೆ |
ಮಾನವರಿಗೆ ಕಾಣಿಸುವದು ನೋಡಲು |
ವಾಣಿಯರಸನಿಗೆ ದೋಷಲೇಶವಿಲ್ಲ |
ಏನಂಬೆ ಜೀವಕೋಟಿಗಳಲ್ಲಿ ಮೂರೊಂದು |
ಅನನಸಿಗೆ ಲಿಂಗವಿರಲು ವಿಲಕ್ಷಣ |
ಜ್ಞಾನ ಕಾರ್ಯವೈಯ್ಯ ಆವಾವಕಾಲಕ್ಕೆ |
ಮಾನಿತನಾಗಿ ಮುಕ್ತಾರೊಳಗಿರುತಿಪ್ಪ |
ಶ್ರೀನಾಥ ವಿಜಯ ವಿಠಲನ ಪಾದಪದ್ಮ |
ಧ್ಯಾನವ ಮಾಡುವ ಸರ್ವಜೀವಾದಿಯಲ್ಲಿ |

### ಆದಿತಾಳ

ಜೊಮ್ಮಾಂಡ ವ್ಯಾಪ್ತರೂಪ ಬೊಮ್ಮಾಂಡಂತರ ರೂಪ ।
ರಮ್ಮೆಯರಸನ್ನ ನಾಭಿಯಿಂದ ಬಂದರೂಪ ।
ಸುಮ್ಮನಸರ ವಿಡಿದು ತೃಣಜೀವಾದಿಗಳಲ್ಲಿ ।
ಸಮ್ಮಾನವಾಗಿಪ್ಪ ಸತ್ಯಲೋಕದರೂಪ ।
ಕ್ರಮ್ಮಾನುಸಾರ ಶೇಶಾದ್ಯರನು ಪುಟ್ಟಿಸಿದನು ।
ಅಮ್ಮಮ್ಮ ಈತನ ಶಕ್ತಿ ಕೊಂಡಾಡಲೊಶವೆ ।
ಅಮ್ಮಹಾತತ್ವವಿಡಿದು ಸೂಕ್ಷ್ಮಸ್ಥೂಲ ಸಪುತ (ಸಮೇತ)
ಸಂಮ್ಮಂಧವಾಗಿ ತಾನೆ ವ್ಯಾಪಿಸಿ ಕೊಂಡಿಪ್ಪ ।
ರಮ್ಯವಾದ ಪ್ರಕೃತಿ ತನಕಧ್ಯಾನ ಆಮೇಲೆ ।
ಅಮ್ಮೈಸಿ ತಿಳಿ ನೂರುಮಡಿ ವ್ಯಾಪ್ತತ್ವ ।
ಹಮ್ಮಿನ ದೈವ ಸಿರಿ ವಿಜಯ ವಿಠಲರೇಯ ।
ಬೊಮ್ಮವಾಯು ಲಾತವ್ಯ ಮಿಕ್ಕಾದ ಋಜುಗಳಕಾವಾ ॥೭॥

### ಜತೆ

ಎಲ್ಲಿಂದುದ್ಭವರೆಲ್ಲಾ ಅಲ್ಲಿಗಭಿಮಾನಿಗಳು ।
ಬಲ್ಲಿದ ವಿಜಯ ವಿಠ್ಠಲನು ಬಲ್ಲನು ಕಾಣೋ ॥೮॥



## ಸೂ ಕ್ಷ್ಮ ಸೃ ಷ್ಟಿ

### ಕೇವಲ ಪ್ರಳಯೊಷ್ಟವು ೮೭ ವರ್ಷದ ರಾತ್ರಿ ಕಡೇಭಾಗ ಆರಂಭಿಸಿ ಅಜನ (೧೦) ವರ್ಷ ಪರಿಯಂತ ಸೂಕ್ಷ್ಮ ಸೃಷ್ಟಿ ವಿಸ್ತಾರ ವಿಚಾರ

### ೨೯) ಸುಳಾದಿ

ರಾಗ: ಧ್ರುವತಾಳ

ಪ್ರಳಯೊದಕದಲ್ಲಿ ಯೇಕೋ ನಾರಾಯಣ ।
ಮಲಗಿದಾ ತನ್ನಯಾ ಲಲನೆ ಸಹಿತ ।
ಜಲಜಾ ಮಿತ್ರನ್ನ ಬಳಿಯಾಕಳಸಿಧಿಯಿದ್ದಂತೆ ।
ನಳಿನನಾಭನ್ನ ಬಿಗಿದಪ್ಪಿ ಆ ತನ್ನತ್ತೋಳ ।
ಕೆಳಗೆಯಿಪ್ಪಳುಲಕುಮಿ ಪೊಳಿಯಾದಲೆ ।
ಸಲಭಾ ಪರಮ ಮಂಗಳನಾದಾ ಆಗಣಿತಾಂ ।
ಬಳುತಾ ದೋಷಗಂಧದೂರ ಸುಗುಣ ।
ಜಲದಿ ಶ್ರೀ ಬ್ರಹ್ಮಾದಿ ಚೇತನ ರಾಶಿಗೆ ನಿ ।
ಚ್ಚಳ ನಿರವಧಿಕಾ ಸರ್ವೋತ್ತಮ ।
ಬಲುಜೀಗಾತನು ಸ್ವವುದರಲ್ಲಿ ನಾಭಿವಾಮಾ ।
ಬಲಭಾಗ ವಿಡಿದು ಮುಕ್ತಾಮುಕ್ತರ ।
ನಿಲಿಸಿ ಕೊಂಡುನಲಿವಾ ತ್ರಿವಿಧಜೀವಿಗಳನ್ನು ।
ಥಳಥಳಿಸುತ ಸಣ್ಣಬಾಲಕನಂತೆ ।
ಹಲವು ಮಾತೇನು ಕೇಳಿ ಪರಶಬ್ದ ವಾಚ್ಯವರುಷ ।
ಗಳ ಪರಿಯಂತ ಕೇವಲ ಪ್ರಳಯಾ ।
ತಿಳಿವಾ (ದವ) ದಾರೊಳಗೆ ಅಷ್ಟಮ ಭಾಗಾಮುಂದೆ ।
ಬೆಳಗುವದಕ್ಕೆ ಯಿರೆ ಶ್ರೀಸ್ತುತಿಸೆ ।
ಮಲಗಿದವನು ಎಚ್ಚತ್ತೋಪಾದಿಯಲಿ ಸ ।
ಕಲ ಭಾಗ್ಯವಂತ ಸೃಷ್ಟಿಕಾಲಾನೋಡಿ ।

ಕಲಕಾಲ ಅವ್ಯಾಕೃತಾಗಗನ ಏಕಾಪಂಚಾ ।
ತಲೆ ಪೋಗಲಾಗಿ ಅದಕೆ ವ್ಯತ್ಯಮಾ ।
ಉಳಿದನಾವಾವರ್ಣ ಮೂಲಜಡ ಪ್ರಕೃತಿ ।
ಅಳಿಯಾದಿಸ್ವಾವು ಕಾಲಾವೇದಾಸಹಿತ ।
ಅಲವಾಮೂರುತಿ ಸಿರಿ ವಿಜಯ ವಿಠಲ ಯಿ ।
ರಳು ಕ್ರೀಡೆಯಾಡಿದ ಸಲೆ ಮುಕ್ತರ ಸಂಗದಲ್ಲಿ ॥೧॥

## ಮಟ್ಟತಾಳ

ಚತುರ ಚತುರ ವಿಂಶತಿ ದಶರೂಪ ।
ಶತಸಾಸಿರರೂಪ ಹಿತದಿಂದಲಿ ಶ್ರೀ ।
ಪತಿ ಯಾಗೆ ಈ ಲಕುಮಿ ಅತಿಶಯದಲಿ ಅ ।
ಪ್ರತಿ ರೂಪಗಳನಿತ್ತು ಚತುರೆಧರಿಸಿ ಅ ।
ಚ್ಯುತನು ಹಯನಾಗೆ ರತುನಾಕರನಸುತೆಯಿದೆ ಧೇನಿಸಿದಳು ।
ಮಿತಿಯಿಲ್ಲದೆ ದೇವತಿ ಗಂಧರ್ವರು ಅತುಳರಾಕ್ಷಸಯಕ್ಷ ।
ಮತಿ ಗುಂಹ್ಯಕ ಸಂತತಸಿದ್ಧರು ಮುನಿ ।
ಖತಿ ಗೊಳದಾಪ್ಸರ ಸತಿಯಾರು ಮೊದಲಾಗಿ ।
ಚಿತು ಶರೀರಗಳು ಶತಾನಂದ ತಮ್ಮ ತಮ್ಮ ।
ಸತಿ ಸಮ್ಮೇಳವಾಗಿ ಮಿತಿಯಿಲ್ಲದ ರೂಪಾ ।
ಧೃತರಾಗಲು ಯಿತ್ತ ಕೃತಲೀಲಾನಮ್ಮ ವಿಜಯ ವಿಠಲ ಅ ।
ದ್ಭುತ ಶಕ್ತಿತುತಿಪರಿಗೆ ಪೊಸದೋ ॥೨॥

## ರೂಪಕತಾಳ

ಹರಿಯಿಚ್ಛಾನುಸಾರ ಸುರರಾದಿಗಳು ರೂಪ ।
ಧರಿಸಿದ ತರುವಾಯಾ ಹರಿಶುದ್ಧಸತ್ವದಲ್ಲಿ ।
ಸರಿತ ಪರ್ವತ ವೃಕ್ಷ ರತುನಾ ಹೇಮಾರಜತ ।
ಧರುಣಿ ನಾನಾಸ್ವರ್ಗ ಶರಧಿ ಮೊದಲಾಗಿ ।

ವಿರಚಿಸಿಯದರೊಳು ಹರಿತಾನೆಸಿರಿಸಹಿತ ಜಲ ।
ಚರ ರೂಪಗಳು ಕಿರುನಗೆಯಿಂದಲಿ ।
ಕರುಣಾಕರ ದೇವ ಧರಿಸಲು ಬೊಮ್ಮಾದಿ ಮು ।
ಕ್ತರುಧರಿಸಿದರು ತರುವಾಯ ಶಿಲ್ಪ ಶಾಸ್ತ್ರವನು ತನ್ನ ।
ವರಿಗೆ ಅರುಹಿದಾಕ್ಷಣದಲ್ಲಿ ಗ್ರಾಮಾರಣ್ಯಾ ಪಶು ।
ಅರಸು ಸಾಮಂತ ರೂಪಗಳೆಲ್ಲ ಧರಿಸೀದ ।
ಹರಿತಾನೆ ಬೊಮ್ಮನ ಪ್ರಧಾನಿಯ ಮಾಡಿ ।
ಪರಮುವುತ್ತಮರ ಪ್ರಜೆಗಳಂತೆ ಕಲ್ಪಿಸಿ ।
ನಿರುತ ತಮಸಿನಲ್ಲಿ ಬಿದ್ದ ದುಷ್ಟ ದೈ ।
ತ್ಯರ ಕಳ್ಳರನಮಾಡಿ ಅವರವರಿಗೆ ನಿ ।
ಷ್ಠುರವನ್ನು ಹಚ್ಚಿಸಿ ಖಳರ ಸದೆ ಬಡಿದು ।
ಮೆರೆದಾ ವಾಣಿಜ್ಯ ಮಿಕ್ಕಾದ ಕರ್ಮಗಳಲ್ಲಿ ।
ಕರುಣಾಸಾಗರಹರಿ ಅನೇಕ ಶ್ರೀ (ಸ್ತ್ರೀ) ರೂಪ ।
ಧರಿಸಿದಾ ಸರರೆಲ್ಲಾ ಅದರಂತೆ ಯಾದರು ।
ಪರಿ ಪರಿ ರೂಪಗಳು ಪುನರಪಿ ಅಡಗಿಸಿ ।
ಪುರುಷ ರೂಪನಾದ ಭಕ್ತರವೊಡಗೂಡಿ ।
ವರಯಾಗಾಧ್ಯಾಯನ ಇತಿಹಾಸಾ ಪೌರಾಣಾ ।
ಸರಿ ಸರಿ ಬಂದಂತೆ ಹರಿಯೇ ಸೇವಿಸಿ ಯೆಲ್ಲ ।
ಪರಮ ಭಾಗವತರ ಪ್ರಿಯ ವಿಜಯ ವಿಠಲ ।
ಮರಿಯಾದೆ ಯಿಲ್ಲದ ಚಿತ್ರ ವೈಚಿತ್ರ । ॥೩॥

### ಝಂಪಿತಾಳ

ರಾತ್ರಿಕಡೇ ಭಾಗದಲ್ಲಿ ವೇದಾಭಿಮಾನಿ ದುರ್ಗೆ ।
ಸ್ತೋತ್ರ ಮಾಡಿದಳು ಪುನರಪಿಯಲ್ಲಿ ।
ಪಾತ್ರ ಅಪಾತ್ರ ಜೀವರ ನೋಡಿ ಅವರಿಗೆ ।
ಗಾತ್ರವನು ತಂದಿತ್ತು ಮಾಡಿಪದೆಂದೂ ।

ಘಾತ್ರಲಘುಕರ್ಮ ಯಿದ್ದರೆ ವಿಸಾರ್ತ |
ಧಾತ್ರಿಯೊಳುಹರಹಿ ಸೃಜಿಸೆನಲು |
ಸತ್ರಾಣತಾನಹುದೊ ಸತ್ಯಸಂಕಲ್ಪ ಪ |
ವಿತ್ರ ಭಕ್ತರ ಮ್ಯಾಲೆ ದಯವ ನೆನದೂ |
ಈ ತ್ರಿವಿಧ ಜೀವರ ಸ್ವರೂಪ ಪ್ರಕಟಿಸಿ |
ಮಾತ್ರಕಾಲಾ ಪ್ರಭೇಧದಿಂದ ನಡಿಸಿ |
ಮೈತ್ರತನದಲಿ ಪೊರದು ಅವರವರ ಕರ್ಮ ಕಂ |
ನ್ಯತ್ರ ವಾಗೊಡೆನೆಂದು ವೈಹಿಸಿ (ವಹಿಸಿ) |
ಸೂತ್ರನಾಮಕ ಮರುತ ನಿರ್ನೈಸಿದಂತೆ ಸ |
ರ್ವತ್ರರನು ಕರುಣಿಸುವ ಕಪಟಲೀಲಾ |
ಸೂತ್ರಧಾರಿನಮ್ಮ ವಿಜಯ ವಿಠಲ ಲೋ |
ಕತ್ರಯದಲ್ಲಿ ಪ್ರಾಣನಾವಶ ವಾಗಿಯಿಪ್ಪ ||೪||

### ತ್ರಿವಿಡಿತಾಳ

ಹರಿಯಾ ರೂಪಗಳ ಅಭಿವ್ಯಕ್ತಿ ಆತುಮಸೃಷ್ಟಿ |
ಸಿರಿಯಾಗುವುದು ಯರಡಾನೇಸೃಷ್ಟಿ |
ಮೂರನೇ ಜಿವರಿಗೆ ಸ್ಥೂಲದೇಹ ಕೊಡುವದು |
ಎರಡೊಂದು ಸೃಷ್ಟಿ ಮಿಶ್ರಾಯೆನಿಸುವದು |
ಅರಿವದು ಘಟಾದಿಗಳ ಸೃಷ್ಟಿನಾಲಕನೇದು |
ಕರಸಿ ಕೊಳ್ಳುತಲಿದೆ ಕೇವಾಲಾಯೆಂದು |
ಪುರುಷ ರೂಪಾಗುತಲೆ ವಾಸದೇವ ಸಂ |
ಕರುಷಣ ಪ್ರದ್ಯುಮ್ನ ಅನಿರುದ್ಧನು |
ಮಿರಗುವ ನಾಲ್ಕು ಮೂರ್ತಿಯ ವ್ಯಾಪಾರ ವಿ |
ಸ್ತರಿಸುವೆ ಗತಿ ಕರ್ತ ಉತ್ಪತ್ತಿ ಸ್ಥಿತಿ ಸಂ |
ಹ್ವರಕೆ ಒಡೆಯರಾಗಿ ಜಗವೆಲ್ಲತುಂಬಿ ಸಾ |
ಚರಾ ಚರದಲಿ ಬಿಡದೆ ನಡಿಸುವರು |

ಎರಡೆಂಟು ಕಳೆವುಳ್ಳ ದೇಹಕೆ ಕಾರಣ ।
ವಿರಜಾನದಿಯು ಪಡೆದಾ ವಾಸುದೇವ ।
ಶರೀರ ಬೆವರಿಸಿಂದ ಸಿದ್ಧಸಾಧನ ಜೀ ।
ವರಿಗೆ ಉಪಕಾರ ವೊಲಿದು ಕೇಳಿ ।
ಹರಿತಾನೆ ಚತುಮೂರ್ತಿ ಯಾಗಲು ಪದ್ಮಮಂ ।
ದಿರೆ ಮಾಯಾ ಜಯಾಕೃತಿ ಶಾಂತಿ ರೂಪ ।
ಧರಿಸಿ ಪ್ರಥುಕುರಾಗಿ ತನ್ನ ಗಂಡನ ಕೂಡ ।
ನೆರದು ಸಂತಾನ ಪಡದಳೆಂದು ।
ಪುರುಷನಾಮಕ ಬ್ರಹ್ಮ ಸೂತ್ರಾಖ್ಯವಾಯು ಮಿಗಿ ।
ಲಾರನ ಪೆತ್ತಳಯ್ಯ ಕ್ರಮದಿಂದಲಿ ।
ಸರಸ್ವತಿ ಯೆಂದೆಂಬೊ ಪ್ರಕೃತಿ ಮತ್ತೆ ಶ್ರದ್ಧ
ವರ ಕನ್ನಿಕೆಗಳ ಕೃತಿಯಾಗಿ ಪಡೆದೆ ।
ಚರಿತೆ ಏನಂಬಿನೊ ಅವರವರಿಗೆ ಮದುವೆ ।
ಸರಸದಿಂದಲಿ ಮಾಡಿ ನಿಮ್ಮೊಳು ನೀವೆ ।
ಸರಿಯಾಗಿ ಬೀಯಾ ಬಿಜ್ಜರ ತೆರದಿಂದ ।
ಪರಿ ಪರಿ ಲೀಲೆಯ ತೋರುತಲಿ ।
ತರುಳನಾಗಿಯಿಪ್ಪ ವಿಜಯ ವಿಠಲನಿಗೆ ।
ಸರಿಯಾದ ಧೊರೆಗಳ ನಾನೆಲ್ಲಿ ಕಾಣೆ ||೫||

## ಅಟ್ಟ ತಾಳ

ಪುರುಷನಾಮಕ ಬೊಮ್ಮಾ ಪುಟ್ಟಿದ ಎರಡನೆ ।
ವರಷಕೆ ಪ್ರಧಾನಮಾರುತ ಪುಟ್ಟಿದನಯ್ಯಾ ।
ಮರಳೆ ಬೊಮ್ಮನ ರಾಣಿ ಶ್ರದ್ಧಾದೇವಿ ಈ ।
ರ್ವರು ತ್ರಯ ವರುಷಕೆ ಜನಿಸಿದರು ನಾ ।
ಲ್ವರು ತತ್ವಭಿಮಾನಿಗಳು ಕಾಣೊ ।
ಸರಸ್ವತಿ ಪುಟ್ಟಿದ ಎರಡನೆ ವರುಷಕೆ

ಉರುಗಾಕಾರ ಜೀವ ಕಾಲನಾಮಕನೆಂಬೊ ।
ಗರುಡನುದ್ಭವಿಸಿದ ರಜ ವಾಯುವಿನಿಂದ ।
ಸರಿಯಿಲ್ಲದೆ ವಾಸುದೇವನ್ನ ತನುಜಗೆ ।
ವರುಷ ಏಳಾದವು ಅಹಂಕಾರ ತತ್ವಕೆ ।
ಕರಸಿಕೊಂಡರು ಅಭಿಮಾನಿಗಳುಯೆಂದು ।
ಹರಿಗೆ ಹಾಸಿಕೆ ವಾಹನರಾಗಿ ಜಗದೊಳು ।
ಮೆರದಾರು ಯಿತ್ತಲೊಂದು ಚರಿತೆವುಂಟು ।
ಪುರುಷಾಖ್ಯನೆಂಬಜನಿಂದ ಬಲಾತ್ಮಕ ।
ಮರುತ ಸೂತ್ರನು ಭಾರತಿ ಜನಿಸಿದರು ।
ಮರಳೆ ಯಿವರಿಗೆ ಗರುಡ ಶೇಷ ಪುಟ್ಟಿ ।
ದರು ಇವರೀರ್ವಾರು ವೊಂದು ವೆಶೆಯಲ್ಲಿ ।
ಪರಮ ಪುರುಷನಾದ ವಿಜಯ ವಿಠಲ ಹರಿಯ ।
ಪರಿ ಪರಿ ಸೋಜಿಗದ ಯೆಣಿಸಾರಾಲಳವೆ ।೬॥

**ಆದಿತಾಳ**

ಖಗ ಶೇಷರುತ್ಪತ್ಯವಾದ ಒಂದು ಪರುಷಕೆ ।
ಜಗದೀಶ ಹರಿ ಯಿಚ್ಛೆಯಿಂದ ಆದ್ಯ ಬೊಮ್ಮ ।
ಮಗನಾದನು ಪ್ರದ್ಯುಮ್ನಗೆ ಪುನರಪಿ ।
ತ್ರಿಗುಣಾಭಿಮಾನಿಯು ವಾಣಿಯಲ್ಲಿ ತಾನೆ ।
ಮಗನಾದ ಸೂತ್ರನಾಮಕ ವಾಯುಸಮ್ಮತ ।
ತ್ರಿಗುಣದಲ್ಲಿ ಒಂದೊಂದು ಬ್ಯಾರೆ ಬ್ಯಾರೆ ಮೂರು ।
ಒಗೆ ರೂಪಾದನು ರುದ್ರವೈಕಾರಿಕ ।
ಮಿಗೆ ತೈಜಸ ಅಹಂಕಾರನು ಯೆಂದೆಂಬೊ ।
ಪೊಗಳಾಲಳವೆ ತನ್ನಸ್ತ್ರೀಸಹ ಪುಟ್ಟಿದ ಷ ।
ಣ್ಣಗ ಜೀವ ಮುಖ್ಯಪ್ರಾಣಾ ಪುರುಷ ನಾಮಕ ಜೊಮ್ಮಾ । ನಾಲ್ಕು
ಮೊಗನಿಂದ ಕ್ರಮವಿಡಿದು ಒಂದೊಂದು ಗುಣಧರಿಸಿ ।

ಅಗಣಿತ ಲೀಲೆಯನ್ನು ತೋರಿದ ಮಧ್ಯದಲ್ಲಿ |
ವಿಗಡ ವಿಷವನುಂಡ ಮೂಲವಾಯು ಮತ್ತೆ
ಖಗನೆಂಬೊ ಕಾಲನಿಂದ ವಿಷ್ವಕ್ಸೇನ ಜಯಾ
ದಿಗಳು ಪಾರ್ಷದರು ಪುಟ್ಟಿದರಯ್ಯಾ ಜೀ ।
ವಿಗಳು ಸ್ಥೂಲದೇಹ ಯಿಚ್ಚೈಸುವರಾಗಿ |
ನಿಗಮ ವಿನುತ ಶ್ರೀ ಹರಿಯ ಅನುಜ್ಞದಿಂದ |
ಅಗಣಿತ ಜೀವರು ತಮ್ಮ ತಮ್ಮ ಅಂಶದಿಂದ ।
ಸೊಗಸಾಗಿ ಪ್ರದ್ಯುಮ್ನ ದೇವರ ವುದರವ ।
ನಗುತ ಪ್ರವೇಶವಾದರದು ಪೇಳುವರಾರು |
ಭೃಗುಮುನಿ ಬಲ್ಲಾನಮ್ಮಾ ವಿಜಯ ವಿಠಲರೇಯ |
ಯುಗ ಯುಗದಲ್ಲಿ ನಿಜ ಭಕ್ತರ ಪರಿಪಾಲಿಪ ||೭||

## ಜತೆ

ಸೂಕ್ಷ್ಮ ಸೃಷ್ಟಿಯೆನ್ನೀ ಅಜಗೆ ಹತ್ತನೆ ವರುಷ ।
ಈ ಕ್ಷ್ಮಾಧರದೇವಾ ವಿಜಯ ವಿಠಲರೇಯಾ ||೮||



## ೩೦) ಸುಳಾದಿ

ರಾಗ : ಕಾಂಬೋದಿ ಧ್ರುವತಾಳ

ಗುಣಕಾಲಾದೇಶಾತೀತ ವ್ಯಾಪ್ತ ಪ್ರಕೃತಿ ರಮಣ |
ಪ್ರಣವ ಮೂರುತಿ ಬ್ರಹ್ಮಾಭಿದಾ |
ಗಣ ರಹಿತಾನಂದ ಸಾಂದ್ರ ವಟಪತ್ರ ಶಾಯಿ ನಾರಾ |
ಯಣ ಯೇಕಮೇವ ಮೇಲುದೇವ |
ಅಣುಮಹತ್ತು ಯುಗಪದಿ ರೂಪಾನಂತರೂಪ |
ಪ್ರಣುತಾರ್ಥಿದೂರ ಪ್ರಭವೆ ಸುಶುಭ |
ಜನುಮ ಮೃತ್ಯುಂಜಯಾರಾತಿ ಸಂ |
ಪೂರ್ಣೈಶ್ವರ್ಯಘನ ರುಗ್ಮಶುಭ್ರ ರಕ್ತಪೀತ ನೀಲಾ |
ಇನಶಶಿ ಅಗ್ನಿನಾನಾವರ್ನ ವಾರಿಜನಯನ |
ತೃಣಜೀವ ಪರಿಯಂತ ಚೇಷ್ಟಪ್ರಪದ (ಪ್ರದ)
ಅನುಕಂಪನಾ ಆದಿ ಅನಾದಿಸ್ವಾತಂತ್ರ |
ತನು ರೂಹಸರ್ವಗಾನಂದ ಪರಮಾ |
ಮಣಿಗಣ ಬೂಷ ನಾನಾವಸ್ತುಭಿನ್ನಾ ನಿರ್ದೋಷ |
ಅನಿಮಿತ್ಯಾ ಬಂಧು ನಿಮಿತ್ತದೇವ |
ಮಣಿದುನಮಿಪೆನಿನ್ನ ಮಹಶಕ್ತಿಲೀಲಿಗೆ |
ಮನದೊಳಗಾಡುವ ತತ್ವಾಧೀಶಾ |
ವನಜ ಸಂಭವನ್ನೈಯ್ಯ ವಿಜಯ ವಿಠಲರೇಯ
ಎಣಿಸಿ ಪೇಳುವರಾರು ನಿನ್ನ ಉನ್ನತಕ್ರೀಯ ||೧||

### ಮಟ್ಟತಾಳ

ಸರಸಿಜ ಸಂಭವನ ಮಾನದಿಂದಲಿ ಯೇಳು |
ವರೆಪರುಷವ್ಯಾಲೆ ಎಂಭತ್ತು ಹಿಂದಾಗೆ |
ಇರಳು ವಂದುಯಾಮ ಉಳದಿರೆದುರ್ಗಾ ಈ |

ಹರಿಯಾಸ್ತುತಿಯ ಮಾಡೆ ಬಿನ್ನಪಕೈಕೊಂಡು ।
ತರುಣಿಯುಸಂತೈಸಿ ತವಕದಿಂದಲಿಯೆದ್ದು ।
ಪುರುಷರೂಪವನ್ನು ಪ್ರಥಮದಿಂದಲಿತಾನೆ ।
ಧರಿಸಿದ ನೀತನೇ ವಾಸುದೇವನೆಂದು ।
ಕರಸಿದನಾದಿಯಲ್ಲಿ ತಮ ಪರಿಹರಿಸಿದನು ।
ಧೊರೆಯಂದೆನಿಸಿದ ಸೂಕ್ಷ್ಮ ಅವ್ಯಕ್ತಕ್ಕೆ ।
ಮರುಳೆ ಈವಾಸುದೇವ ಚತುರತನದಲ್ಲಿ ।
ಎರಡೆರಡೊಂದು ರೂಪವನೆಧರಿಸಿ ।
ಚರಿಯ ತೋರಿದ ನೋಡಿ ಗುಣಕ್ಷೋಭಕ ರೂಪ ।
ಸಿರಿ ನಾರಾಯಣದೈವ ನಾಮಕನೆಂದು ಸರುವದ ಪೊಗಳುವರು ।
ಪುರುಷ ಪ್ರದಾನೇಶಾ ವಿಜಯ ವಿಠಲರೇಯ ।
ಪರಿ ಪರಿ ಸರ್ಗವನು ಮಾಡಿದ ಲಿಂಗದಿಂದ ॥೨॥

## ತ್ರಿವಿಡಿ ತಾಳ

ಜೀವಾವರಣ ಪ್ರಕೃತಿ ಸಾಮ್ಯವನೆ ಬಿಡಿಸಿ ।
ದೇವನಾರಾಯಣ ವೈಷಮ್ಯವ ।
ತ್ರೀವಿಧ ಪರಮಾಣು ಪುಂಜಗಳೊಂದಿಸಿ ।
ಮೂವತ್ತಾರು ತತ್ವನಾಮದಿಂದ ।
ಆವಾವಾಬಗೆಯಿಂದ ಸತ್ವ ರಾಜಸ ತಾಮಸ ।
ಭಾವಿಸುವದು ದ್ವಾದಶ ಹತ್ತುವೊಂದು ।
ಆ ವಿರಂಚಿಗೆ ಯಿದೆ ಅವ್ಯಕ್ತದೇಹ ಗು ।
ಣಾ ವೈಷಮ್ಯದಿಂದ ಪ್ರಥಮಾವರ್ಕಾ ।
ದೈವ ನಾರಾಯಣ ಯಿನಿತು ರಚಿಸಿ ದ್ವಿತಿಯ ।
ಶ್ರೀ ವಾಸುದೇವನ್ನ ಕೈಗೆ ಕೊಡಲು ।
ಪಾವನ್ನ ಮೂರೂತಿ ತನ್ನ ಹೆಂಡತಿ ಮಾಯಾ ।
ದೇವಿಯಲ್ಲಿ ವಿರ್ಯಧಿಟ್ಟ ಮಾಡಿ ।

ಕೋವಿದ ಬ್ರಹ್ಮನ ಪಡೆದ ಈತಗೆ ಪೆಸರು ।
ತಾ ವುಂಟಾಯಿತು ಮಹಾತತ್ವಾತ್ಮಕ ।
ಈ ವಿಧಾತಗೆ ಪುರುಷನೆಂಬೊ ನಾಮವೆ ವುಂಟು ।
ದೇವಾರೊಳಧಿಕನು ದ್ವಿತಿಯಾವರಣಾಮೂರ್ತಿ ಸೂ ।
ತ್ರನಾತನ ಪೆತ್ತಾಜಯ ಸತಿಯಿಂದ ।
ದೇವಿ ಪ್ರಕೃತಿ ಶ್ರದ್ಧರೀರ್ವರ ಪಡೆದ ಕೃತಿ ।
ದೇವಿಯಾನೆರದು ಪ್ರದ್ಯುಮ್ನ ಮೂರ್ತಿ ।
ಈ ವಿಚಾರವೆ ತಿಳಿ ಅಜ ಪ್ರಾಣಾರೀಶುದ್ಧ ।
ಪಾವಿತ್ರ ಜನ ನಾಲ್ವರ ಸರ್ಗಕಾಣೋ ।
ಭೂವಿವಲ್ಲಭ ನಮ್ಮ ವಿಜಯ ವಿಠಲರೇಯ ।
ಲಾವಣ್ಯ ಮೂರುತಿ ನಾನಾ ರೂಪವ ಧರಿಪ ॥೩॥

## ಝಂಪೆತಾಳ

ಸರಸಿಜ ಸಂಭವಗೆ ಮೊದಲು ಬಂದದೆ ।
ಪುರುಷ ತತ್ವಾತ್ಮಕ ಯಿದೇ ಮಹಪೆಸರಿಲಿ ।
ಕರಸಿ ಕೊಂಬುವದಯ್ಯಾ ಯಿತ್ತಲೂಯಿದೆ ।
ಪರಮಾಣು ಲಿಂಗಗಳ ಸಂಮ್ಮಂಧ ಪ್ರತ್ಯೇಕ ।
ಭರಿತ ವಾಗಿವೆ ನೋಡು ಅನಂತ ಪರಿಯಾಗಿ ।
ತರುವಾಯ ಅಲ್ಲಿಂದ ಅನಿರುದ್ಧದೇವನು ।
ಧರಿಸಿದನು ಬ್ರಹ್ಮಾದಿ ಜೀವರ ವುದರದಲ್ಲಿ ।
ಮರಳೆ ಸರ್ವರಿಗೆ ತನ್ನಾಮಕ ದೇಹವನು ।
ಕರುಣಿಸಿದನಂದು ತತ್ವಪುಟ್ಟದ ಮುನ್ನಾ ।
ಶರೀರಗಳಾದವು ಗುಣಿತ ನೋಡು ।
ಪರಮೇಷ್ಠಿಗೆ ಅವ್ಯಕ್ತ ಪರಚ್ಛೇದ ಮೂರು ಗಾ ।
ತುರ ನೇಮಿಸಿದನು ಪುರುಷ ದೇಹದವ್ಯಾಲೆ ।
ತಿರುಗಿಯಿದರ ವ್ಯಾಲೆ ಮಹತತ್ವಾತ್ಮಕಕಾಯ ।

ವಿರಚಿಸಿದನು ಯಿದರಂತೆ ಸರ್ವವೂ ।
ಇರತಕ್ಕವಾದವು ಕ್ರಮೇಣ ಉತ್ಪತ್ತಿ ।
ಪರಮ ಪುರುಷರಂಗ ವಿಜಯ ವಿಠಲರೇಯ ।
ಸಿರುತ ಪ್ರಜಾಸರ್ಗ ಮಾಡುವ ಮುದದಿಂದ ॥೪॥

### ರೂಪಕತಾಳ

ಅನಿರುದ್ಧ ದೇವನು ಸರ್ವಜೀವರ ತನ್ನ ।
ತನುವಿನೊಳಗೆ ಯಿಟ್ಟುಕೊಂಡು ಲಿಂಗ ।
ತನುವಿನಿಂದಲಿ ಪ್ರತ್ಯೇಕ ಪ್ರತ್ಯೇಕ ।
ಎಣಿಕೆಯಿಂದಲಿ ಕೊಟ್ಟು ಉಪಚಯದಲ್ಲಿ ।
ವನಜ ಸಂಭವಗೆ ಇಪ್ಪತ್ತೆಂಟು ಗಾತುರ ।
ಅನುವಾಗಿ ಬಂದವೈಯ್ಯಾ ತುರ್ಯನಿಂದ ।
ಗುಣಿಸು ಒಂದಾವರ್ಕವೆ ಮೊದಲು ದೇಹವೆನ್ನಿ ।
ಮಿನುಗುತಿಪ್ಪದು ಮಹಾಕಾಂತಿಯಿಂದ ।
ಇನಿತು ಗ್ರಹಿಸುವುಂದೆ ಕ್ರಮೇಣಾವರ್ಕ ಬ್ರ ।
ಹ್ಮನಿಗೆ ದ್ವಿತಿಯ ತೃತಿಯ ಚತುರ್ಥ ಪಂಚ ।
ಮನಸು ಮಿಕ್ಕಾದ ತತ್ವಪರಮಾಣು ವ ।
ಖ್ಖಣಿಸಲಿಬೇಕು ರೂಪಾಂತರಗಳು ।
ತನವು ಮಾತ್ರವೆಭೇಧ ಆವಾವಕಾಲ ಸಾ ।
ಧನ ಜ್ಞಾನವೊಂದೆ ಸಮಕಾರ್ಯದಲಿ ।
ಅನಿಮಿಷರ ಪರಿಪಾಲ ವಿಜಯ ವಿಠಲರೇಯ ।
ಗುಣವೈಷಮ್ಯ ಯಿಲ್ಲದವುನ್ನೆ ಇತ್ತ ॥೫॥

### ಅಟ್ಟತಾಳ

ಗರುಡಾಹಿಈಶಾ ಮೂವರ ವಿಚಾರವು ।
ಪರಮೇಷ್ಠಿ ಪುರಷಾನಿಂದಲಿ ಜೀವನಾವಿಕ ।

ಉರಗ್ರೇಂದ್ರಗೆಗಾತುರ ಖಗದೇವಗೆ |
ಮರುತಸೂತ್ರನಿಂದ ಈರ್ವರುದ್ಭವರೈಯ್ಯ |
ಹರಿಗೆ ಮೂರುದೇಹ ಬ್ರಹ್ಮ ಪವಮಾನ |
ಉರಗಾನಿಂದಲಿ ಸತ್ವರಜೋತಾಮಸಭಾಗ |
ಅರಿವದು ಯಿದರೊಳು ಶೇಷಗರುಡರಿಗೆ
ಶರೀರಾವೆ ವೊಂದೊಂದು ಪ್ರಾಪ್ತವಾಯಿತುಕೇಳಿ |
ಎರಡೊಂದು ಶರೀರ ಗರುಡಾಹಿಶರಿಗೆನ್ನಿ |
ತರುವಾಯು ಅನಿರುದ್ಧ ದೇವನು ಸರ್ವಜೀ
ವರನು ತನ್ನುದರಾದೊಳಟ್ಟು ಪ್ರಥುಕವಾಗಿ |
ಪರಮೇಷ್ಠಿ ಮೊದಲಾದ ಸರ್ವಚೇತನಕೆ ಸ
ತ್ಕರುಣದಿಂದಲಿ ಯಿಪ್ಪತ್ತೆಂಟು ಯಿಪ್ಪತನಾಲ್ಕು ಇಪ್ಪತ್ತೊಂದು |
ಶರೀರವ ಕರುಣಿಸಿ ಸರ್ಗವ ಮಾಡಿದ |
ಪರಮ ಪುರುಷ ನಮ್ಮ ವಿಜಯ ವಿಠಲರೇಯ |
ನಿರುತ ಬಾಲಕ್ರೀಡೆಯಾಡುವ ಸ್ವಭಾವ ||೬||

ಆದಿತಾಳ

ಹರಿನಿಮಿತ್ಯ ಕಾರಣ ಗುಣ ಉಪಾದಾನದಿಂದ |
ಪರಿ ಪರಿ ಜೀವಿಗಳ ಪುಟ್ಟಿಸುವನು ನೋಡಿ |
ಭರದಿಂದ ಅನಿರುದ್ಧ ದೇಹವನಿತ್ತು |
ತರುವಾಯು ಪ್ರಕೃತಿಯಿಂದ ಸ್ಥೂಲದೇಹವನಿತ್ತು
ನರರು ಈ ಪರಿಯಿಂದ ಚಿಂತಿಸಿ ಮನದೊಳು |
ಹರಿಯನ್ನು ಕಾಣಬೇಕು ತತ್ತ್ವಸ್ಥಾನದಲ್ಲಿ
ನಿರುತ ಸಂಪೂರ್ಣವ್ಯಾಪ್ತ ವಿಜಯ ವಿಠಲರೇಯನ |
ಚರಣವ ನೆರೆನಂಬಿ ಧ್ಯಾನವ ಮಾಡುವದು ||೭||

ಜತೆ

ದ್ವಿವಿಧ ಸರ್ಗವ ತಿಳಿದು ಯೋಚಿಸು ನಿನ್ನೊಳಗೆ |
ಭವದೂರ ವಿಜಯವಿಠಲರೇಯನೆ ಬರುವ ||೮||

**ಬಹಿಂಬ್ರಹ್ಮಾಂಡ ಸಂಕ್ಷಿಪ್ತ ಸೃಷ್ಟಿ ಬ್ರಹ್ಮಾಂಡಾವರಣವರಗೆ ಅವ್ಯಾಕೃತಾಕಾಶವಿಾರಿದ ಅಪರಿಚ್ಛಿನ್ನಹರಿಯು ಪ್ರಳಯೋದಕದಿ ವಟಪತ್ರಶಾಯಿಯಾಗಿ ಏಳುಕೋಟಿಯೋಜನ ಬಾಲರೂಪದೇಹ ಧರನ ಮಹಿಮೆ — ಮುಂದೆ ಸವಿಸ್ತರ ಸೃಷ್ಟಿ ವಿವರ**

## ೩೧) ಸುಳಾದಿ

ರಾಗ: ಭೂಪಾಳಿ ಧ್ರುವತಾಳ

ನೀನಾದಿಮೂರುತಿಯಾಗಿ ಅವ್ಯಾಕೃತಾಕಾಶದಲ್ಲಿ ।
ಸ್ವಾನಂದಾತಿಶಯವಾಗಿ ಪ್ರಕೃತಿಮಿರಿ ।
ನಾನಾ ವ್ಯಾಪಾರದಿಂದ ಪೂರ್ಣಪರಬೊಮ್ಮ ।
ಜ್ಞಾನ ಸ್ವರೂಪರೂಪ ವಿಶ್ವರೂಪ ।
ಮಾನವಮೊದಲಾದ ವೇಷವಧರಿಸಿ ಸು ।
ಮ್ಮಾನದಿಂದಲಿ ಕ್ರೀಡೆಯಾಡುತಿಪ್ಪೆ ।
ನೀನೆ ಸರ್ವಕರ್ತ ತ್ರಿಗುಣವ ಮನೆಮಾಡಿ ।
ಅನಾದಿಯಿಂದ ಬಿಡದೆ ಲೀಲಾಮಾತ್ರ ।
ಅನಂತಾನಂತ ಕಾರಣ ಕಾರ್ಯದಿಂದಲಿ ।
ಏನಂಬೆ ಚತುರಾಸ್ಯ ಮಿಕ್ಕತತ್ವ
ಮಾಣದೆ ನಿರ್ಮಾಣವ ಮಾಡಿದೆ ಚಮತ್ಕಾರ ।
ಮೇಣು ಬಣ್ಣಿಪರಾರು ಗುಣಿಸಿಗುಣಿಸಿ
ಆ ನಾವದು ನಿನ್ನ ಮಾಯವ ನೋಡಿ ಕಡೆ
ಗಾಣೆನೋ ಸರ್ವದ ಅಪರಿಚ್ಛಿನ್ನ ।
ನೀನೆ ಅಂತರಬಾಹಿರನೊಬ್ಬನೆಂಬೋದೆ ಉ ।
ತ್ತಾನುಪಾದಿ ನೋಡಬಲ್ಲ ತಪಸ್ಸಿನಲ್ಲಿ ।

ಪ್ರಾಣವದನ ನೇತ್ರ ಕರ್ನ ರಸನ ನಾಸ ।
ಜಾನು ಜಂಘೆ ಚರಣ ಉದರ ನಾಭಿ ।
ಪಾಣಿ ಕಂಧರ ಬಾಹುರೋಮ ಸರ್ವಶರೀರ ।
ಎಣಿಕೆಗೆ ಭಿನ್ನ ಅರ್ಚಿಪುದಕೆ ।
ಪ್ರಾಣ ಮಾಳ್ಪವ್ಯಾಪಾರ ರೋಮಾದಿಗಳಿಗುಂಟು
ಸ್ಥಾನ ಸ್ಥಾನಕೆ ನಿನಗೆ ಐಕ್ಯವಹದು ।
ನೀನಂದು ಕೃಷ್ಣನಾಗಿ ಜನಿಸಿದ್ದು ರೋಮವೇದು ।
ಆ ನಿರ್ಜರಗಣ ಪೇಳುತಿದಕೊ ।
ದಾನವಾಂತಕ ನಿನ್ನ ಕರ್ನ ಮಾಡೊವಿವರ ।
ಪಾಣಿನಖಾದಿಗಳು ಮಾಳ್ಪವಯ್ಯ ।
ಈ ನಾಡಿನೊಳಗೆ ನಿನಗೊಬ್ಬಗೆ ಸಲ್ಲುವದು ।
ಯೋನಿಜರಿಗೆ ಯಿದೆ ಒಪ್ಪದೇನೊ ।
ಆ ನೀರೊಳು ವಟಪತ್ರಶಯನನಾದ ।
ಶ್ರೀ ನಾರಾಯಣ ಯೋಗನಿದ್ರ
ನೀನೇಬಾಲಕನಾಗಿ ಯೇಳುಕೋಟಿ ಯೋ ।
ಜಾನ (ಜನ) ಪ್ರಮಾಣದಿನಿತು ನಲಿದಾಡುವೆ ।
ಅನಂತಾನಂತಕಾರ್ಯ ರೂಪಕ್ಕೆಯಿದೆ ಪ್ರ ।
ಧಾನ ಮೂರುತಿ ಕಾಣೊಯಿದಕೆಮಿಗಿಲು ।
ತಾನೆ ತಾನಾಗಿಯಿಪ್ಪ ಅಮಿಶ್ರವ್ಯಾಪ್ತನೆಂದು ।
ಶ್ರೀ ನಾರಿ ನೋಡುವಳು ಬೆರಗಾಗುತ ।
ವಾಣಿಯು ತಗ್ಗಿಸಿ ತನಗಗೋಚರನೆಂದು ।
ಅನಂತಾನಂತಮಡಿ ವೇದಾನುಕ್ತ ।
ಧೇನಿಸಿಮನೊವಾಚ ಕಾಯದಿಂದಲಿ ಬಲು ।
ಗಾನವನು ಮಾಡಿ ನಲಿಗಾಣಳು ।
ಹೇನು ಯಿರುವುನೊಣ ಜಲಚರ ಪಕ್ಷಿಗಳು ।
ಆನೆ ಶಾರ್ದೂಲ ಸಿಂಹ ಶರಭ ಸರ್ಪ ।

ಮಾನವ ಯಕ್ಷ ರಕ್ಷಗಂಧರ್ವ ಸಿದ್ಧ ಸಾಧ್ಯ ।
ದಾನವಾಮರ ತಾತ್ವಿಕರ ಮೀರಿ ।
ಆ ನೀರಜಮಂದಿರ ನೋಡಲಾಗಿ ಮೇಲು ।
ನಿನೇ ಘನ್ನ ಘನ್ನ ಘನ ಘನ ಮಹ ಘನ್ನ ।
ಈ ನುಡಿಯಂತೆ ಆಣುತ್ವ ತಿಳಿದು ಆಜಾ ।
ಘಾನೆ ಮಾಡಿದವನು ಸತತದಲ್ಲಿ ।
ಜ್ಞಾನಿಗಳೊಳು ಶ್ರೇಷ್ಠ ಹರಿಯರಡು ಕಡೆಯಲ್ಲಿ ।
ನೀನಲ್ಲದೆ ಅನ್ಯರಾರಿಲ್ಲ ನಿತ್ಯ ।
ಘೇನುವಿನಿಂದಬೇಡಿ ದಾರ್ಥವ ಕೊಡಿಸುವ ಸ ।
ತ್ರಾಣನೆ ನಿನಗಿದಾಶ್ಚರ್ಯವಲ್ಲ ।
ಅನಾಥ ಬಂಧುವೆ ಏಕಮೇವದ್ವಿತಿಯಾ ।
ಆನಂದ ಬೊಮ್ಮಮಯ ಅನಂತಾತ್ಮ ।
ಅನಾದಿಲಿಂಗಬದ್ಧ ಜೀವಿಗಳ ಮುಖ್ಯ ।
ಪ್ರಾಣನಿಂದಲಿ ಕೈಕೊಂಡವರ ।
ಶೋಣಿತ ಶುಕ್ಲ ಸಮಂಧಿಗಳನ್ನು ಮಾಳ್ಪ ।
ಜಾಣತನವನ್ನು ವ್ಯಕ್ತ ಮಾಡಿ ।
ಶ್ರೇಣಿ ಕರ್ಮಗಳನ್ನೆ ನೋಡಿದೆ ಜೀವರ ಆ ।
ಧೀನದಲಿ ಕಾಯತಂದು ಕೊಡುವ ।
ನಾಣಿಯುರಸನ್ಯೆಯ್ಯ ವಿಜಯ ವಿಠಲರೇಯ ।
ನೀನಾಡುವಲೀಲೆ ತಿಳಿಯದವರಿಗೆ ಕಠಿಣ ॥೧॥

### ಮಟ್ಟತಾಳ

ಜಗವೆಲ್ಲಶಿರಸ ಜಗವೆಲ್ಲ ಫಾಲ ಜಗವೆಲ್ಲನಯನ ।
ಜಗವೆಲ್ಲಕರ್ನ ಜಗವೆಲ್ಲನಾಸ ಜಗವೆಲ್ಲವದನ ।
ಜಗವೆಲ್ಲರಸನ ಜಗವೆಲ್ಲರದನ ಜಗವೆಲ್ಲಕಂಠ ।
ಜಗವೆಲ್ಲಬಾಹು ಜಗವೆಲ್ಲಹಸ್ತ ಜಗವೆಲ್ಲವಕ್ಷ ।

ಜಗವೆಲ್ಲಉದರ ಜಗವೆಲ್ಲನಾಭಿ ಜಗವೆಲ್ಲಕಟಿ ।
ಜಗವೆಲ್ಲಊರು ಜಗವೆಲ್ಲಜಾನು ಜಗವೆಲ್ಲಜಂಘೆ ।
ಜಗವೆಲ್ಲಪರುಡು ಜಗವೆಲ್ಲಪಾದ ।
ಜಗವೆಲ್ಲಬೆರಳು ಜಗವೆಲ್ಲನಖ ।
ಜಗವೆಲ್ಲಯಿನಿತು ಬಗೆತುಂಬಿದೆ ನೋಡಿ ।
ಜಗವಪುಟ್ಟಿಸಿದವನೆ ಜಗದಾಧಿಷ್ಟನೆ ಜಗದಾಧಾರನೆ ।
ಜಗಸ್ವಾಮ್ಯನ್ಮಯನೆ ಜಗತ್ತಿನ ಭೇದನೆ ।
ಜಗದಂತರ್ಯಾಮಿ ವಿಜಯಠಲನೆಂದು ।
ಪೊಗಳಿದವರನತೊಲಗದೆ ಸಾಕುವದೈವ । ॥೨॥

### ತ್ರಿವಿಡಿತಾಳ

ಶ್ರೀ ವಾಸುದೇವ ಸಂಕರುಷಣ ಪ್ರದ್ಯುಮ್ನ ।
ದೇವ ಅನಿರುದ್ಧ ಚತುರ ಮೂರುತಿಯಾಗೆ ।
ಈವಿಧ ಹರಿ ನೀನೆ ರೂಪವ ಧರಿಸಲು ।
ದೇವಿ ಲಕುಮಿತಾನೆ ಮಾಯಾ ಜಯಾಕೃತಿ ।
ಜೀವರ ಪಡೆದ ಶಾಂತಿ ಯೆಂಬೊ ಪೆಸರಿಲಿ ।
ಪೂವಿನ ಮಗನನ್ನು ವಾಸುದೇವ ಪೆತ್ತ ।
ಭೂವನ ಜೀವನ ನೇಗಲಿ ಧರನೈಯ್ಯಾ ।
ಆವಾಣಿ ಭಾರತಿ ಯಿಬ್ಬರನ್ನ ಪ್ರದ್ಯುಮ್ನ ।
ಮೂವರಿಂದಲಿ ಯಿನಿತು ಪಡೆದನಂದು ।
ವಿವಾಹ ಮಾಡಿದ ಅಜ ಸರಸ್ವತಿಗೆ ಮ ।
ತ್ತಾವಾಯು ಭಕ್ತ್ಯಾಭಿಮಾನಿನಿಗೆ ।
ಕೋವಿದರಾಯನು ತನಗೆ ತಾನೇ ಬೀಗ ।
ವಾವಿಲಿ ನಡಕೊಂಡು ಸುಖಿಸುವನೊ ।
ಸಾವಿಲ್ಲದ ದೈವ ವಿಜಯ ವಿಠಲರೇಯ ।
ಆವುಗಳ ಕಾಯ್ದ ಅಣುವೆ ಕೊಂಡಾಡಿದಣುವೆ ॥೩॥

### ಅಟ್ಟತಾಳ

ಇವರಿಂದಲಿ ಯಿವರು ಪುಟ್ಟಿದರು ಮ |
ತ್ತಿವರಿಂದ ಸರ್ವ ದೇವತೆಗಳು ಉದ್ಭವ |
ಅವರ ಪೆಸರು ನೋಡು ಖಗರಾಜ ಉರಗೇಂದ್ರ |
ಶಿವ ಮೊದಲಾದಂಥ ದಿವಿಜಾದ್ಯರು ಪುಟ್ಟಿದ |
ರವರಿಂದ ರವರಂದು ಊಹೋಚ್ಚಾಭಾವದಿ |
ಭವದಲ್ಲಿ ಯಿವರನ್ನು ಯಿಟ್ಟ ಮರಳು ಮಾ |
ಡುವ ಮಹಮಾಹತ್ಮ ನಿನಗೆಣೆ ಆವಾವ |
ಭುವನದೊಳಗೆ ಕಾಣೆ ಯೆಂದೆಂದಿಗೂ |
ತ್ರಿವಿಧಾತ್ಮಕವಾದ ಗುಣದಿಂದ ಸರ್ವತ |
ತ್ವವನು ನಿರ್ಮಿಸಿದ ಪ್ರಭುವೆ ಪ್ರಳಯದೂರ |
ನವನವ ಗುಣವುಳ್ಳ ವಿಜಯ ವಿಠಲರೇಯ |
ನವವಿಧ ಭಕುತಿಯ ಕರುಣಿಸೊ ಯೆನಗೆ ||೪||

### ಆದಿತಾಳ

ಮೊದಲು ಗುಣತ್ರಯ ಆಮೇಲೆ ಮಹತತ್ವ |
ಅದರ ತರುವಾಯ ಅಹಂಕಾರ ಆಕಾಶ |
ಇದರಿಂದತ್ತವಾಯು ಅನಳೋದಕ ತತ್ವ |
ತದನಂತರದಲ್ಲಿ ಪೃಥಿವಿ ಬೊಮ್ಮಾಂಡ ಖರ್ಪ |
ರದಕೆ ಲೆಖ್ಖವೆನ್ನಿ ತುದಿಯಲ್ಲಿ ಯಿಪ್ಪದೆಂದು |
ಅಧಿಕಾಧಿಕ ತಿಳಿಯದೆ ನೀ ಚಕ್ರಮಾನು ಪಂ |
ದದಕೆ ಈರೈದು ಮಾಡಿ ಕಡಿಮೆ ಯಾಗಿಪ್ಪದೆಂದು |
ಪದುಮ ಜಾಂಡದೊಡಿಯ ವಿಜಯ ವಿಠಲ ಮುಂದೆ |
ಅದು ಭೂತವಾಳ್ಪನೆಂದು ಸ್ತುತಿ ಸಬೇಕು ನಿನ್ನ ||೫||

### ಜತೆ

ಸಕಲಕ್ಕೂ ಕಾರಣ ಕಾರ್ಯರೂಪನು ನೀನೆ |
ಲಕುಮಿ ವಲ್ಲಭ ನಮ್ಮ ವಿಜಯ ವಿಠಲರೇಯ ||೬||

## ವಿಷ್ಣು ರಹಸ್ಯ ಅಧ್ಯಾಯವು (೨೩)

**ಗುಣಬಿಂದು ಸೃಷ್ಟಿ, ಪ್ರದ್ಯುಮ್ನ ದೇವರು ಅರ್ಧನಾರಿ ವೇಷ ದಿಂದ ಬ್ರಹ್ಮದೇವರ ೧೧ ನೇ ವರ್ಷ ಆರಂಭಿಸಿ ೨೦ ವರುಷ(ದ) ವರಿಗೆ ೧೦ವರ್ಷ ದೇವತೆಗಳ (೪) ಜಾತಿ-ಗಳ ವಿಭಾಗಗೈದ ಮೇಲೆ ೨೧ನೇ ವರುಷ ಅನಿರುದ್ಧ ಗುಣಬಿಂದುಗಳ ವೈಷಮ್ಯದೊಡನೆ ಮಾಡಿದ ಸೃಷ್ಟಿ**

### ಸುಳಾದಿ ೩೨

ರಾಗ : ಬೈರವಿ ಧ್ರುವತಾಳ

ಕೃತಿ ಕಾಂತ ಅರ್ಧನಾರಿ ರೂಪವ ಧರಿಸಿ ನ ।
ಗುತ ಯೋಗಸರ್ಗ ಮಾಡಿದ ಪಿತ ಮಹನ್ನ ।
ಶತವತ್ಸರ ಪರಿಯಂತ ವರ್ಣಾಶ್ರಮಾಚಾರ ।
ಹಿತದಿಂದ ರಚಿಸಿದನು ಪ್ರತ್ತ್ಯೇಕದಿ ।
ಸತತ ಸರ್ವಜೀವರನು ಬೀಜಾಂಕುರದಂತೆ ।
ಅತಿ ಶಯದಿಂದಲಿ ಗೈಸಿ ಮುಂದೆ ।
ಗತಿ ಸಾದನಕ್ಕೆ ಕೇಳಿ ಗುಣತ್ರಯದ ಗ್ರಾತ ಉ ।
ತ್ಪತ್ತಿಯಾಗುವದಕ್ಕೆ ಅನಿರುದ್ಧ ದೇವ ।
ಪತಿ ಕರಿಸಿ ತನ್ನ ಉದರದಿಂದಲಿ ನಿಜ ।
ಸತಿ ಶಾಂತಿಯಲ್ಲಿಯಿಟ್ಟ ಅಭಿಮುಖದಿಂದ ।
ಮತಿ ವಂತರು ಕೇಳಿ ಬ್ರಹ್ಮನ ಯೇಕ ವಿಂ ।
ಶತಿ ಅಬ್ದ ಪ್ರಥಮಾದಿ ದಿವಸದಲ್ಲಿ ಯೆನ್ನಿ ।
ಚ್ಯುತ ದೂರ ಅನಿರುದ್ಧ ಮಾಡಿದ ಸೃಷ್ಟಿ ಕೇಳಿ ।
ಸ್ಥಿತ ಮೂಲ ಪ್ರಕೃತಿ ನಾಮ ಕಳಿಂದಲಿ ।

ತೃತಿಯಾಗುಣಾಭಿಮಾನಿ ನಿಯಾಮಕನಾಗಿ ।
ಸತುವ ರಜೋತಮ ಪರಮಾಣುರೂಪ ।
ಮಿತಿಯಿಲ್ಲದ ಲೊಂದೊಂದು ಸಾವಯವಂಗಳ ಸ ।
ಹಿತವಾಗಿ ಕಾಲಾದಿಯಂತೆ ನಿತ್ಯ ವ್ಯಾ ।
ಪುತ ವಾಗಿಯಿಪ್ಪದು ವಿಃಶ್ರವಾಗಿ ಉ ।
ತಮಹಿಮೆ ಯೇನೆಂಬೆ ವಿಚಾರಿಸಿ ।
ಸ್ಥಿತಿ ಯಿಂತು ವುಂಟು ಮೂಲಜಡ ಪ್ರಕೃತಿ-ಯಿಂದ ।
ಪ್ರತಿ ಪ್ರತಿ ಬೊಮ್ಮಾಂಡ ಪುಟ್ಟುವದಿದಕೊ ।
ಗತಿಯ ಲಾಲಿಸುವದು ಆರಂಭದಲ್ಲಿ ಉ ।
ತ್ಪತಿ ಗೆ ತೆಗೆದು ಕೊಂಡು ಪ್ರಕೃತಿ ಗಣಿತ ।
ಸತುವ ರಾಜಸ ತಮೊ ಗುಣವೊಂದೊಂದಕ್ಕೆಕಡಿಮೆ ।
ಚತುರ (೪) ದ್ವಿ (೨) ಯೇಕ (೧) ಮುಷ್ಠಿಪರಿಮಿತಮನಕೆ ।
ಸತುವ ಗುಣರಾಶಿ ಸೃಷ್ಟಿಸಲ್ಲದು ಮು ।
ಕುತವಂತರ ಕ್ರೀಡಿಗೆ ಅನುಕೂಲವೊ ।
ಇತರ ಎರಡುರಾಶಿ ಸೃಷ್ಟಿಗೆ ಕಾರಣ ।
ಮಿತವಾಗಿ ವೊಂದೊಂದು ರಾಶಿಯೊಳಗೆ ।
ಪ್ರಥುಕು ಪ್ರಥುಕುವಾಗಿ ಭಾಗವಿಶಿಷ್ಟ ವಿ ।
ಹಿತ ರಜೊರಾಶಿ ಮೂರು ಮೂರು ವುಂಟು ।
ಜತೆ ವೊಂದು (೧) ಮಡಿತಮಸು ಅದರ ನೊರ್ಮಡಿ (೧೦೦) ರ
ಕುತ ಅದರ ನೂರ್ಮಡಿ (೧೦,೦೦೦) ಸತ್ವವೆನ್ನಿ ।
ಪ್ರತಿ ನಿಧಿಯಾದ ತಮಕೆ ವಿಶಿಷ್ಟಭಾಗ ಗು
ಣಿತ ಮಾಡುವೊಂದುಮಡಿ ರಜಸು ಆಮ್ಯಾಲೆ ಅದರ ।
ಶತ (೧೦೦) ಮಡಿತಮಸು ಅದರದಶ (೧೦) ಮಡಿ (೧೦೦೦) ।
ಸತುವ ಈ ವಿಧದಿಂದ ಎರಡು ರಾಶಿಗಳು ಮಿ ।
ಳಿತ ವಾಗಿಯಿಪ್ಪದು ತ್ರಿ (೩) ಪ್ರಕಾರ ।
ಪತಿ ತ ಪಾವನ ರಂಗ ವಿಜಯ ವಿಠಲರೇಯನ ।
ತುತಿ ಸಿ ಕೊಂಡಾಡುವದು ಪ್ರಕೃತಿ ವಿಚಾರ ತಿಳಿದು ॥೧॥

## ಝಂಪೆತಾಳ

ಒಂದು (೧) ಶತಾಯುತ (೧೦೦) (೧೦,೦೦೦) ವಿಶಿಷ್ಟರಾಶಿರಜೊ
ಒಂದೆಂಬೊಭಾಗ ಮೂರು ಪರಿಯೊಳಗೆ ।
ಪೊಂದಿಪ್ಪವುಕೇಳಿ ತಮೊ ರಾಜಸ ಸತ್ವ ।
ಒಂದೊಂದರ ಮಧ್ಯ ಸಮವಾಗಿ ಪೊಳವುತ್ತ ।
ಒಂದು ಮಡಿ ತಮಸುಯಿದಕೆ ವಿವರ ಸಂ ।
ಮ್ಮಂಧ ತಮೊ ತಮೊ ರಜ ತಮೊ ಸತ್ವ ।
ಮುಂದೆ ನೂರುಮಡಿ ರಾಜಸಕೆಯಿದ ।
ರಂದದಿ ರಜೊತಮ ರಜೊರಜ ರಜಸತ್ವ ।
ಸಂದಿದೆ ಆಯುತ ಮಡಿಸತ್ವಕೆ ಸತ್ವತಮ ।
ವೆಂದು ಸತ್ವರಜಸಿನ ಸತ್ವಸತ್ವಗುಣ ।
ದಿಂದ ರಜೊರಾಶಿಭಾಗ ವಿಶಿಷ್ಟದಲಿ ।
ಎಂದೆಂದಿಗೆ ಕರಸಿ ಕೊಂಬುವದುಯಿದೆ ।
ಸಂದೆಹವಿಲ್ಲ ಅಂತರಗರ್ಭಿತವೊ ।
ಮುಂದೆ ತಮೊಗುಣ ವಿಶಿಷ್ಟರಾಶಿಯ ಭಾಗ ।
ಒಂದುಮಡಿ ರಜಸ ಹತ್ತುಮಡಿ ತಮಸು ।
ಆಂದವಾಗಿ ನೂರು ಮಡಿ ಸತ್ವ ಲೆಖ್ಖ ।
ದಿಂದ ತಮೊಗುಣ ಯಿದರೊಳು ವಿಭಾಗ ।
ಒಂದೊಂದು ಮಡಿಯೊಳಗೆ ತ್ರಿವಿಧ ಗುಣವುಂಟು ।
ಒಂದು ಮಡಿರಕ್ತಕೆ ರಜೊರಜ ರಜೊತಮಸ ।
ಸಂದು ರಜೊಸತ್ವ ಅಮ್ಯಾಲೆ ಹತ್ತುಮಡಿ ।
ಪೊಂದಿದೆ ತಮ್ಮನಲ್ಲಿ ತಮೊ ತಮೊ ತಮ ರಾಜಸ ।
ಛಂದದ ತಮಸತ್ವ ಬೆರದಿದೆ ಮಿಗೆಯಿತ್ತ ।
ಲಿಂದ ನೂರುಮಡಿ ಸತ್ವದೊಳಗೆ ಕೇಳಿ ।
ನಿಂದಿರದೆ ಸತ್ವತಮ ಸತ್ವರಜೊ ।

ಮುಂದೆ ಸತ್ವಸತ್ವಯಿನಿತು ನೋಡಿ ಮನಕೆ |
ತಂದು ತಿಳಿದುಯಿದೆ ತಮೋಗುಣದರಾಶಿ |
ಹಿಂದೆ ವಿಸ್ತರಿಸಿದ್ಧ ರಜೋಗುಣದರಾಶಿ |
ಒಂದೊಂದು ರಾಶಿ ವಿಶಿಷ್ಟ ಭಾಗದವು |
ಕುಂದದೆ ಎರಡರಲಿ ಮೂರರ ಪ್ರಕಾರ |
ದಿಂದ ವಿಭಾಗಗುಣ ಸಿದ್ಧವಾಗಿವೆ ಮೂಲ |
ಸುಂದರಾಂಗ ಸಿರಿ ವಿಜಯ ವಿಠಲನಂಘ್ರಿ |
ದ್ವಂದ ಧ್ಯಾನವ ಮಾಡಿ ಯೋಚನೆ ಯೊಳಗಾಗು ||೨||

### ತ್ರಿವಿಡಿ ತಾಳ

ಅಜನ ಪ್ರಳಯದಲ್ಲಿ ಗುಣ ಸಾಮ್ಯವಾಗುವ |
ರಜೋರಾಶಿ ವಿಶಿಷ್ಟ ಭಾಗಾಂತರ |
ರಜೋಮಡಿ ನೂರರೊಳು ವಿಭಾಗತ್ರಯ ವೆನ್ನಿ |
ರಜೊತಮ ರಜೋರಜ ರಜಸತ್ವವೊ |
ನಿಜವಾಗಿಯಿದರೊಳು ಹನ್ನೆರಡು (೧೨) ಬಿಂದು |
ತ್ರಿಜಗವ್ಯಾಪಿಸಿಯಿಪ್ಪದು ಅಂಶದಿಂದ |
ಪ್ರಜಸರ್ಗವೊದಲಾದ ತತ್ವಕೆ ಉಪಾದಾನ |
ರಜಸತ್ವ ಪೊಂದಿದ ವಿಭಾಗವೊ |
ತೆಜಿಸು ಸತ್ವ ಅಯುತ ಮಡಿವೊಂದು ಮಡಿತಮಸು |
ಸೃಜಿಸಿಕೊಳ್ಳದು ಕಾಣೊ ಬ್ರಹ್ಮಾಂಡಕೆ |
ರಜಸತ್ವಬಿಂದು ಹನ್ನೆರಡು ವಿಭಾಗದಲಿ |
ಅಜ ತತ್ವಪುಟ್ಟಿತು ತಿಳಿವಿಶೇಷ |
ರಜೋರಾಶಿಯೊಳಗಿನ ಸತ್ವಮಡಿಯೊಳಗೆ |
ಭಜಿಸು ಸತ್ವಸತ್ವ ಬಿಂದು ಹತ್ತು |
ರಜಸತ್ವ ಕೂಡಿದರೆ ಅದರಂತೆ ವೊಪ್ಪಿದವು |

ಭುಜಗ ತಲ್ಪಸಿರಿ ವಿಜಯ ವಿಠಠರೇಯ ।
ಎಜಮಾನ ತಾನಾಗಿ ಗುಣಕಾರ್ಯಂಗಳ ಮಾಡುವ ॥೩॥

**ರೂಪಕತಾಳ**

ರಾಶಿ ಭೂತವಾದ ತಮೊದೊಳಗಿನ ವಿ ।
ಶೇಷ ಹತ್ತುಮಡಿ ತಮೊಭಾಗದೊಳಗುಳ್ಳ ।
ಲೇಸು ತಮೊತಮ ಗುಣದ ಬಿಂದುವೊಂದು ।
ಭೂಷಣದಲಿ ಒಂದು ರಜಸತ್ವಕೂಡೆ ಸ್ವ ।
ರಾಶಿ ಮಧ್ಯದಲ್ಲಿಂದ ವೊಂದು ಬಿಂದು ಸಹಿತ ।
ದೇಶ ತ್ಯಾಗವಮಾಡಿ ತೆರಳಲಾಗಂದು ಯೋ ।
ಚಿಸಲು ಮೂರುಭಾಗಾದವು ಕೇಳಿ ।
ರಾಶಿ ಭೂತ ಮೂಲರಜಭಾಗ ವಿರಳ ।
ಅಸತ್ವ ಸತ್ವಾಂಶ ಮಿಳಿತವಾದದು ಯೇಕ ।
ರಾಶಿಯೆನಿಸುವದು ಅವ್ಯಕ್ತದಿಂದ ಪ್ರ ।
ಕಾಶವಾಯಿತುಕೇಳಿ ಎರಡೆತತ್ವಾ ।
ವಾಸುದೇವಾತ್ಮಕಾ ವಿಜಯ ವಿಠಲರೇಯ ।
ಆಶಿಯಿಲ್ಲದೆ ಸರ್ವ ನಿರ್ಮಾಣ ಮಾಡುವ ॥೪॥

**ಝಂಪಿತಾಳ**

ಕೇಶವಾದಿ ಮೂರ್ತಿಗಳ ಸೂರ್ಯ ಪ್ರ ।
ಕಾಶವರ್ನವು ದಿಗ್ಗೇಶ ಕೃತ್ಯವು ॥೫॥

ಈ ಸುಳಾದಿ ಅರ್ಧವೆ ಇದೆ, ಮುಂದಿನ ಭಾಗ ಎಲ್ಲಿಯೂಸಿಕ್ಕಿಲ್ಲ. ಇದರ ವಿಚಾರ ಗ್ರಂಥಗಳ ಆಧಾರ ಮೇಲಿಂದ ಪರಿಶಿಷ್ಟಭಾಗದಲ್ಲಿ ಕಾಣಿಸಿದೆ.

ಚಿಪ್ಪಗಿರಿ ಹಳೆ ಪುಸ್ತಕದಲ್ಲಿ ಗುಣತ್ರಯ ವಿವರ

| ೧ | ೨ | ೩ |
|---|---|---|
| | ಇದರ (೧೦) ಮಡಿ ತಮ | |
| ೪ ಸತ್ವ | ೧ ತಮೊತಮ | ೧ ರಜತಮ |
| ೨ ರಜೊ | ೧ ತಮೊರಜ | ೧ ರಜೊರಜ |
| ೧ ತಮುಸು | ೧ ತಮೊಸತ್ವ | ೧ ರಜಃಸತ್ವ |
| ೭ಭಾಗ | ೩ | ೩ |

| ೪ | ಇದರೊಳಗೆ ತಮೊಗುಣ ವಿಚಾರ ಅಂತರ ಗುಣತ್ರಯ | ತಮೊಗುಣದ ದ್ವಿಗುಣ ರಜೋ ಭಾಗ ವಿವರ |
|---|---|---|
| ೧ ಸತ್ವತಮ | ೧ ಭಾಗ ರಜೊ | ೧ ತಮುಸ್ಸು |
| ೧ ಸತ್ವರಜ | ೧೦ ಭಾಗ ತಮ | ೧೦೦ ರಜಸ್ಸು |
| ೧ ಸತ್ವಸತ್ವ | ೧೦೦ ಭಾಗ ಸತ್ವ | ೧೦,೦೦೦ ಸತ್ವ |
| ೩ | ೧೧೧ ಈ ಪ್ರಕಾರ | ೧೦,೧೧೧ ಬಿಂದುಗಳು |

| ಇದರ ಪ್ರಭೇದಗುಣ ತ್ರಯ ವಿವರ | ಒಂದು ಮಡಿ ತಮ ದೊಳಗೆ ಗುಣ ವಿಭಾಗ | ರಜದ ೧೦೦ ಮಡಿ (೧೦,೦೦೦) ಇದರ ವಿವರ ತಮೊಗುಣದೊಳಗೆ ತಮೊಗುಣದ ಹತ್ತು ಮಡಿ ಸತ್ವ ೧೦೦. |
|---|---|---|
| ೧ ರಜೊರಜ | ೧ ತಮೊತಮ | ೧ ಸತ್ವತಮ |
| ೧ ರಜೊತಮ | ೧ ತಮೊರಜ | ೧ ಸತ್ವರಜ |
| ೧ ರಜೊಸತ್ವ | ೧ ತಮೊಸತ್ವ | ೧ ಸತ್ವಸತ್ವ |
| ೩ | ೩ | ೩ |

ತಮುದ (೧೦೦) ಮಡಿ ರಜೊ
ಗುಣ ಇದರ ಅಂತರ ಪ್ರಭೇದ ಗುಣತ್ರಯ

**ಲಯು ವಿವರೆ, ಬಾಹ್ಯಾಂಡ ಸೃಷ್ಟಿಕ್ರಮು ೧೦ ವರ್ಷ ಸವಿಸ್ತಾರೆ. ಈ ಸೃಷ್ಟಿ ನಂತರೆ ಸಂಕ್ಷಿಪ್ತವಾಗಿ ೧೧ ವರ್ಷದಿಂದ ಬ್ರಹ್ಮದೇವರೆ (೪೫-೪೬) ವರ್ಷ ತನಕಾ ಸೃಷ್ಟಿ**

## (೩೩) ಸುಳಾದಿ

ರಾಗ: ಭೈರವಿ ಧ್ರುವತಾಳ

ಪರನ ಪರಿಯಂಕ (ನಿಂದ) ಅಂಭೃಣಿ ಸ್ತುತಿಗೆ ಮೆಚ್ಚಿ |
ಪುರುಷನಾಮಕ ದೇವ ಜನಿಸಿದನು |
ತರುವಾಯ ಯಿವನಿಂದ ವಾಸುದೇವ ಮೂರ್ತಿ ಸಂ |
ಕರುಷಣ ಪ್ರದ್ಯುಮ್ನ ಅನಿರುದ್ಧನು |
ವರವಾಸುದೇವನಿಂದ ಮಾಯಾದೇವಿಯಲ್ಲಿ |
ಪುರುಷನಾಮಕ ವಿರಂಚಿ ಜನಿಸಿದನು |
ಮರುಳೆ ಈತನೆ ನಾನಾ ಅಂಶಂಗಳ ಚನ್ನಾಗಿ |
ಧರಿಸಿದನು ದಿವ್ಯರೂಪಂಗಳ |
ವರಣಾತ್ಮಕವೇದ ಕಾಲ ಮೂಲಕೃತಿ |
ಇರದೆ ಆಕಾಶಲಿಂಗ ಕಳೆಗಳಿಗೆ |
ಮಿರುಗುತಿಪ್ಪ ವಿರಂಚಿ ಅಭಿಮಾನಿಯಾದನು |
ಸ್ಮರಿಸಿ ಅತಿ ಸೂಕ್ಷ್ಮತರತಮು ಕಾಯ ನೊ |
ಪುರುಷನಾಮಕನಾಗಿ ಪುಟ್ಟಿದ ಬ್ರಹ್ಮನು |
ಸರುವ ಜೀವರಿಗೆ ಅಭಿಮಾನಿಯಾದ |
ಭರದಿ ಪ್ರಳಯದಲ್ಲಿ ವ್ಯುತ್ಕ್ರಮದಿಂದ ಲಯವು |
ಪುರುಷಕಾಲದಲ್ಲಿ ವಿಲಯನಾಗುವನೀತ |
ವಂಮಾಯಾ ದ್ವಾರದಿಂದ ವಾಸುದೇವನಲ್ಲಿ |

ಇರುತಿಪ್ಪ ಕಾಲನಾಮಕ ಬ್ರಹ್ಮರಾಯಾ |
ಪರಿಮಿತ ಉಂಟು ಮೊದಲು ಸರ್ಗಕ್ರಮದಲ್ಲಿ |
ಪುರುಷ ಪುಟ್ಟುವ ಪ್ರಳಯದಲ್ಲಿ ವಾಸಾ |
ಸರುವ ಅಂಶಗಳೆಲ್ಲ ಮಿಳಿತವಾಗಿದ್ದ ಅವಾಂ |
ತರ ಪುರುಷ ವಿರಂಚಿಯ ನುಂಗುವನು |
ಪರಮ ಜ್ಞಾನಿಗಳು ಈ ಕಾಲನಾಮಕ ಅಜನ |
ಅರಿತು ಕೊಂಡಾಡಬೇಕು ಪ್ರಳಯಸರ್ಗ |
ಗುರುತುಪೇಳುವೆ ನಿದಕೆ ಮೂಲಮರುತನ್ನಾ ಅಂಶಾ |
ಹರಿಕಂಡಾ ಹನುಮ ಭೀಮ ಮಧ್ವರಾಯಾ |
ಎರಡೊಂದು ಸಿದ್ಧವೆನ್ನಿ ಯುಗಗಳಲ್ಲಿ ಅವ |
ತರಿಸಿದನು ಹನುಮಾನ್ ಮೊದಲು ದ್ವಿತಿಯ ಭೀಮ |
ಮರುಳೇ ಪ್ರಳಯದಲ್ಲಿ ಭೀಮನೊಳಗೆ ಹನುಮ |
ಇರುತಿಪ್ಪದೇನು ಪೇಳಿ ಅಂಶಯಿನಿತು |
ಸರಿ ಬಂದಂತೆ ಯೆಲ್ಲಾದೆ ಹರಿಇಚ್ಛೆ ಅಂಥಾದೆ |
ನರರು ಎಣಿಸಿದರೆ ಸಿಗಬಲ್ಲದೇ |
ವರಮೂರ್ತಿವೋದ ನಮ್ಮ ವಿಜಯ ವಿಠಲರೇಯ |
ಕರುಣದಿಂದಲಿ ಪ್ರಜಸರ್ಗವ ಮಾಡಿದನು ||೧||

### ಮಟ್ಟತಾಳ

ಜಯ ಸಂಕರುಷಣಗೆ ಸೂತ್ರನಾಮಕ ತ |
ನಯನಾದನು ಕಾಣೊ ಮುಂದಣಾಗಮ ಕೇಳಿ |
ಭಯರಹಿತ ಪ್ರದ್ಯುಮ್ನ ದೇವನಿಂದ |
ತ್ರಯಗುಣದಭಿಮಾನಿ ಪ್ರಧಾನ ಪ್ರಕೃತಿ ನಿ |
ರಯ ದೂರೆ ಶ್ರದ್ಧ ಎಂದೆಂಬೊನಾಮ |
ದಯವಂತರೀರ್ವ ಜನ ಪುಟ್ಟಿದರು ಯೇಕ |
ಭಯನಿವಾರಣ ನಮ್ಮ ವಿಜಯವಿಠಲರೇಯ |
ಪ್ರಿಯನಾಗಿ ತನ್ನ ಭಕ್ತರನ ಪೊರೆವ

## ತ್ರಿವಿಡಿತಾಳ

ಪುರುಷನಾಮಕ ಬ್ರಹ್ಮ ಪ್ರಕೃತಿ ನಾಮಕಳಾದ ।
ಸರಸ್ವತಿಯಲಿ ಜೀವನಾಮಕ ಸರ್ಪ ।
ಮರುತ ಸೂತ್ರ ಶ್ರದ್ಧಳೆಂಬೊ ಭಾರತಿಯಲ್ಲಿ ।
ಗರುಡನು ಜನಿಸಿದ ಜೀವ ಕಾಲನಾಮಕನೆಂದು ।
ಮರಳೆ ಪ್ರಮೇಯ ತಿಳಿ ಪುರುಷನಾಮಕ ವಿರಂಚಿ ।
ಸರಸ್ವತಿ ದೇವಿಗೆ ಪುಟ್ಟಿದ ಬಲಾಖ್ಯದಲಿ ।
ಮರುತು ದೇವನು ತನ್ನ ಅರ್ಧಾಂಗಿನಿ ಸಹಿತ ।
ಚರಿಯಾದಲ್ಲಿ ಮೆರದ ಬಲನೆಂಬೊ ಮಾರುತಗೆ ।
ತಿರುಗಿ ಪುಟ್ಟಿದ ಜೀವ ಅಜನಿಂದ ಪುಟ್ಟಿದವ ।
ಅರಿತು ಪೂಜಿಯ ಮಾಡಿ ಈತನೆ ಫಣಿರಾಜ ।
ವರ ವಾಸುದೇವನಲಿ ಪುಟ್ಟಿದ ಬ್ರಹ್ಮ ।
ಹರಿ ರೂಪ ಪ್ರದ್ಯುಮ್ನ ಕೃತಿಗೆ ಕುವರನಾದ ।
ಪರಮ ರಹಸ್ಯವೊ ಇದೆ ಬ್ರಹ್ಮನಿಜತೆಳಿಯೋ ।
ವರಿಯಾದ ಸಾವಿತ್ರಿಯು ಸರಸ್ವತಿ ಯೆಂದೆಂಬೊ ।
ಎರಡೊಂದು ರೂಪವ ಧರಿಸಿರೆ ಅಮೋಘವಿರ್ಯ ವಿಟ್ಟು ।
ಎರಡೊಂದು ರೂಪವ ವೊಂದಿಯಾಗಿ ನಿಂದು ।
ಹೆರದಾಳೆ ಬೊಮ್ಮ ವಾಯು ಗಳೀರ್ವರ ।
ಚರಿಯ ತೋರಿದ ತನ್ನ ಹೆಂಡತಿ ಯಲಿ ತಾನೆ ।
ತರುಳನಾಗಿ ಪುಟ್ಟಿ ಮೆರದ ಮಹಿಮ ।
ಕುರುಹು ತಿಳಿಯಬೇಕು ತನಗೆ ತಾನೆ ಜನಿಸಿದ ।
ಸುರಜೇಷ್ಠ ತನ್ನ ಹೆಂಡತಿ ಗಾಯತ್ರಿ ।
ನೆರದು ಪ್ರಾಣನಿಂದ ಪುಟ್ಟಿದ ಜೀವನಾಮಕ ।
ಉರಗೇಂದ್ರ ಮತ್ತೆ ವೈಕಾರಿಕರುದ್ರ ।

ಸರಿಯಾಗಿ ಜನಿಸಿದರು ತಮ್ಮ ಹೆಂಡರ ಸಹಿತ ।
ಸ್ಥಿರವೆನ್ನು ಬ್ರಹ್ಮನಿಗೆ ಪುಟ್ಟಿದ ಬಲನಿಂದ ।
ಗರುಡನೆಂಬೊಕಾಲ ತೈಜಸ ರುದ್ರನು ।
ತರುಣೀರ ವೊಡಗೂಡಿ ಉದ್ಭವರಾದರು ।
ಸರಸಿಜೋದ್ಭವ ನಿಂದ ಪುಟ್ಟಿದ ಜೀವನಾಮಕ ।
ಉರಗನಿಂದಲಿ ತಾಮಸರುದ್ರ ಪಾರ್ವತಿ ।
ಭರದಿಂದ ಜನಿಸಿದರು ಅಂಶಿ ಅಂಶಗಳಿಂದ ।
ಇರುತಿಪ್ಪವು ಅವರವರ ರೂಪಂಗಳ ।
ಪರಮೇಷ್ಠಿಗೆ ಮೂರು ಮರುತಗೆಯಿದರಂತೆ ।
ಗರುಡ ಶೇಷಗೆ ಈವಿಧ ತಿಳಿವೋದು ।
ಹರಗೆ ಕಮಲಾಸನ ಪ್ರಾಣ ಪನ್ನಗನಿಂದ ।
ಎರಡೊಂದು ರೂಪಗಳಾದವದಕೋ ।
ಕರಸಿ ಕೊಂಡವು ವೈಕಾರಿಕ ತೈಜಸ ತಾಮಸವೆಂದು ।
ನಿರುತ ಕೃತುಭೋಕ್ತ ವಿಜಯ ವಿಠಲರೇಯ ತಾನೆ ಉತ್ಪ ।
ತಿ ರಹಿತ ಸರ್ಗವನು ಮಾಡಿದಕೇಳಿ ॥೩॥

## ಅಟ್ಟೆ ತಾಳ

ಶಿವನು ತ್ರಿರೂಪ ಧರಿಸಿದ ವಿಷ್ಣು ಕಂಜೋ ।
ದ್ಭವ ಬ್ರಹ್ಮೇಶಾನೆಂದು ಗುಣಪ್ರಾಚುರ್ಯದರುದ್ರ ।
ಕುವರರ ಪಡೆದನು ಬುದ್ಧಿಗಭಿಮಾನಿ ।
ಯುವತಿಯ ಸಂಗಡರಮಿಸಿ ಪ್ರೇಮದಿಂದ ।
ದಿವಿಜೇಶ ಮನುಮಥ ಅಹಂಕಾರಿಕ ಪ್ರಾಣ ।
ದಿವಿಜ ಕುಲಾಚಾರ್ಯ ಶಚಿ ಶುಕ್ರ ಅನಿರುದ್ಧ ।
ಪವಮಾನ ಸಖ ನಿಋುರತಿ ಗಣಪತಿ ವೈ ।
ಶ್ರವ ರುದ್ರರು ಸ್ವಹಸ್ವಧಾ ಬುಧ ಅವಿರುದ್ಧ ಕರ್ಮಪ ।
ಅವನಿ ಪಿತೃರು ಗಂಧರ್ವ ಸಮಸ್ತ ।

ಪ್ರವರ ಜೀವರ ಮುಕ್ತಿಯೋಗ್ಯರ ಪಡೆದ ವಿಷ್ಣು ನೆಂ |
ಬವರುದ್ರ ಪ್ರತ್ತೀಕವಾಗಿ ಜನಿಸಿದರು |
ಪವನಸೂತ್ರನಾಮ ಭಾರತಿಯಲಿ ಸಂ |
ಭವಿಸಿದರು ಮತ್ತೆ ಗರುಡ ಇಂದ್ರಾದ್ಯರು |
ಪವಿತ್ರವಾದಂಥ ಯಾಗಾಭಿಮಾನಿನಿ ಲೋಕ |
ಧವಳಾಸ್ಯ ಸೌಪರಣಿದೇವಿಗೆ ಹರಿಯದ್ವಾರ |
ದವರು ಜಯಾದ್ಯರು ವಿಷ್ವಕ್ಸೇನ ಮಿಕ್ಕಾ |
ದುವರ ಮಕ್ಕಳಾಗಿ ಸಮಸ್ತರು ವೊಪ್ಪೆ |
ಸವದು ಪೊದವು ಹತ್ತು ಅಜನ ಅಬ್ದಯಿಲ್ಲಿಗೆ |
ವಿವರವ ತಿಳಿವದು ಚತುರಾನನ ಉ
ದ್ಭವಿಸಿದ ಎರಡು ಸಂವತ್ಸರ ಪೋಗಲು
ಪವಮಾನ ಪುಟ್ಟಿದ ನೀತ ಪುಟ್ಟಿದ ವ್ಯಾ |
ಲಿವರು ಸರಸ್ವತಿ ಭಾರತಿ ದೇವೇರು |
ದ್ಭವ ವಾದರು ಕೇಳಿ ಯೆರಡೊಂದು ವರಷಕ್ಕೆ |
ಇವರ ತರುವಾಯ ಜೀವಕಾಲಾಖ್ಯರು |
ಲವಲವಿಕೆಯಿಂದ ಯೆರಡು ವತ್ಸರಕೆ ದೇ |
ಹವ ಧರಿಸಿದರೆಂದು ತದನಂತರದಲ್ಲಿ ತ್ರಿ |
ಭುವನ ಶ್ರೇಷ್ಠನು ಪ್ರದ್ಯುಮ್ನ ಕೃತಿಗೆ ಮತ್ತೆ |
ಕುವರನಾದನು ವೊಂದು ವತ್ಸರಕೆ ವೇಗ |
ಅವಸರವಾಗಿದೆ ಯಿಲ್ಲಿಂದಿತ್ತಲು ಕೇಳು |
ತ್ರಿವಿಧ ಅಹಂಕಾರ ಉತ್ಪತ್ತಿ ಜೀವಾದ್ಯರು |
ಶಿವನು ವೈಕಾರಿಕ (ವಿಷ್ಣು) ರೂಪಧರಿಸಿ ಕ್ರೀಡೆಯಿಂದ |
ದಿವಿಜೇಶ ವಿಡಿದು ಗಂಧರ್ವ ಪರಿಯಂತ |
ಪವಮಾನನಿಂದ ಪುಟ್ಟಿದ ಯಿಂದ್ರಾದ್ಯರು |
ಕವಿಯಿಂದ ನೋಡಲು ಜೀವಕಾಲಾಖ್ಯರು |
ದ್ಭವಿಸಿದ ಯೆರಡು ವತ್ಸರಕೆ ಯಿವರು ಕಾಣೋ |

ವಿಸರಿಸೆ ಹತ್ತು ವರುಷ ಲೆಖ್ಖ ದಿಂದಲಿ ।
ನವನವ ಮೋಹನ್ನ ವಿಜಯ ವಿಠಲನ್ನ ।
ಸ್ತವನ ಮಾಡುವರು ತಮ್ಮ ಸಾಧನದಿಂದ । ||೪||

ಆದಿತಾಳ

ಸ್ವಾಮಿ ಪ್ರದ್ಯುಮ್ನ ಮೂರ್ತಿ ಅರ್ಧನಾರಿವೇಷ ।
ಪ್ರೇಮದಿಂದಲಿ ಧರಿಸಿದ ವರ್ಣಭೇದದಿಂದ ।
ತಾಮರಸ ಪೀಠ ವರುಣ ಅನಲ ಮರೀಚ್ಯಾದಿ ।
ಆ ಮಾರುತ ಶಂಭು ಯಿಂದ್ರ ಚಂದ್ರಾದಿಗಳು ।
ನೇವ ದಿಂದಲಿ ರುದ್ರವಸುಗಳು ಮಿಗಿಲಾದವರು ।
ಭೂ ಮೃತ್ಯು ನಿಋರತಿ ಕಾಲಾದ್ಯರನ್ನ ದಕ್ಷಣ ।
ವಾಮ ಭಾಗದಿಂದ ಪಿತ್ರನು ಯಿಲ್ಲಿಗೆ ।
ಭೂಮಿಸುರ ಭೂಭುಜಾ ವೈಶ್ಯ ಶೂದ್ರರಾದರು ।
ಕಾಮಿಸು ಹತ್ತು ವರುಷಾ ಸಂದಿಪೋಯಿತುನೋಡು ।
ಸಾಮಸ್ತ ಜೀವಿಗಳು ಉತ್ಪತ್ತಿಕ್ರಮ ಗ್ರಹಿಸು ।
ಕೋಮಲಾಂಗರು ಅತಿಸೂಕ್ಷ್ಮ ಗಾತುರದಿಂದ ।
ಈ ಮರಿಯಾದಿಯಲ್ಲಿ ಜನಿತವಾದರು ಮುಂದೆ ।
ನೀಮನಸುಮಾಡು ಬೊಮ್ಮಗೆ ಪತ್ತುವರುಷ
ತಾವಿಗಾರಿ ಪೋದವು ಪೂರ್ವಾರಭ್ಯವೆ ವಿಡಿದು ।
ಈ ಮೂಲ ಪ್ರಕೃತಿ ಗುಣಸಾಮ್ಯ ವೈಷಮ್ಯ ।
ಆಮಹ ಅಹಂಕಾರ ಮನಸು ಸರ್ವೇಂದ್ರಿಯಗಳು ।
ವ್ಯೋಮಾದಿ ಮೊದಲಾದ ಸರ್ವ ವರ್ಣಗಳು ।
ಈ ಮಧ್ಯದಲ್ಲಿ ರುದ್ರನ್ನ ಸೃಷ್ಟಿ ಹದಿನಾಲ್ಕು ವರುಷ ।
ತಾಮಸ ತೈಜಸ ವೈಕಾರಿಕದಿಂದ ।
ಸೌಮನಸರ ಪಡೆದ ಮೂರು ವಿಕಾರದಲ್ಲಿ ।

ಸಾಮರ್ಥನಾಹದು ಕಾಣೊ ವೊಂದುವರುಷ ತಪವಂಗೈದ ।
ಈ ವ್ಯಾಲೆ ಬೊಮ್ಮಾಂಡ ಆವರಣ ಹತ್ತು ವರುಷ ।
ಹೇಮ ಕಾಂತಿಯಂತೆ ನಿರ್ಮಾಣ ವಾಯಿತು ।
ಶ್ರೀ ಮನೋಹರ ನಮ್ಮ ವಿಜಯ ವಿಠಲ ಸುರರಿಗೆ ।
ಧಾಮವೆ ಮಾಡಿಕೊಟ್ಟು ಬೊಮ್ಮಾಂಡದಲ್ಲಿ ಪೊಗಿಸಿ ||೫||

**ಜತೆ**

ಬಾಹ್ಯಾಂಡ ಸರ್ಗ ಸೂಕ್ಷ್ಮ ಸ್ಥೂಲವೆ ತಿಳಿದು ।
ದೇಹ ದೊಳಗಿದ್ದ ವಿಜಯ ವಿಠಲನ ನೋಡು ||೬||

—●—



## ಪಂಚಮಹಾ ಭೂತಗಳ ವೈಭವ ಮತ್ತು ಸೃಷ್ಟಿ ಸಂಕ್ಷಿಪ್ತ ವರ್ಣನಾಪೂರ್ವಕ (ಮಹನಿಂದಾ ವರ್ಜನ)

### ೩೪) ಸುಳಾದಿ

ರಾಗ : ರೇಗುಪ್ತಿ ಧ್ರುವತಾಳ

ಎತ್ತಣ ಭೂತಂಗಳೊ ಯೆಲ್ಲಿ ಪೊಕ್ಕರೆ ಬಿಡವು ।
ಹತ್ತಿ ಕೊಂಡಿಪ್ಪವು ನಾನಾ ಜನುಮ ।
ಸುತ್ತಿದ ಕಾಲಕ್ಕು ತೊಲಗದೆ ವ್ಯಾಪ್ತವಾಗಿ ।
ಅತ್ತಲಿತ್ತ ಪೋಗದೆ ಯಿರುತಿಪ್ಪವು ।
ಮೃತ್ತಿಕೆ ನೀರು ಬೆಳಕು ಘಾಳಿ ಬಯಲು ಯೆಂಬೊ ।
ಮತ್ತೆ ನಾಮಗಳಿದಕೆ ಸರ್ವಕಾಲ
ಉತ್ತರೋತ್ತರದಿಂದ ಗುಣಗಳು ಅಧಿಕವುಂಟು ।
ಜತ್ತಾಗಿಪ್ಪವು ಒಂದನ್ನೊಂದು ಬಿಡದೆ ।
ಹೊತ್ತು ಹೊತ್ತಿಗೆ ಲೋಕ ಪೇಳವ ದಾಡುವದು
ಬಿತ್ತುವದು ಬೆಳೆಯುವದು ಚರಿಸುವದು ।
ತುತ್ತು ಮಿಕ್ಕಾದ ಚೇಷ್ಟೆ ಈ ಭೂತಗಳಿಂದ ।
ನಿತ್ಯದಲಿ ಯಾಗುವದು ಬೊಮ್ಮಾಂಡದಿ ।
ಮುತ್ತು ಮಾಣಿಕ ಹೇಮ ರಜತ ನಾನಾದ್ರವ್ಯ ।
ಮೊತ್ತಂಗಳಲ್ಲಿ ಈ ಭೂತಂಗಳು ।
ಸುತ್ತಿಕೊಂಡಿಪ್ಪವು ಬ್ರಹ್ಮಾಂಡ ಬಾಹಿರಕ್ಕೆ ।
ಹತ್ತು ಹತ್ತು ಮಡಿ ಆವರ್ಕದಿ ।
ಕಿತ್ತಿ ಬಿಸುಟಾಲಳವೆ ರುದ್ರಾದ್ಯರಿಗಾದರು ।
ಬತ್ತದಯ್ಯ ಕರ್ಮವುಳ್ಳ ತನಕ ।
ಉತ್ತಮೋತ್ತಮ ಮರಿದಕೆ ಆಶ್ರಯ ವಾಗಿಪ್ಪರು ।

ಪ್ರತ್ತ್ಯೇಕ ಗುಣ ತಾರತಮ್ಯ ದಿಂದ |
ಅತ್ಯಂತ ಜಗದ್ಭರಿತ ವಿಜಯ ವಿಠಲರೇಯ |
ಕರ್ತನಾಗಿ ಪಂಚಭೂತಗಳ ಪೊಂದಿಸಿಪ್ಪ | ||೧||

## ಝಟ್ಟೆತಾಳೆ

ಈ ಭೂತಗಳಿಂದ ವೈಭವ ವಾಗುವದು |
ಈ ಭೂತಗಳಿಂದ ವೈಭೋಗ ದೊರಕುವದು |
ಈ ಭೂತಗಳಿಂದ ಶೋಭನ ವೊದಗುವದು |
ಈ ಭೂತಗಳಿಂದ ಲಾಭವೆ ಬರುವದು |
ಈ ಭೂತಗಳಿಂದ ಸೌಭಾಗ್ಯ ತುಳುಕುವದು
ಈ ಭೂತಗಳಿಂದ ಭೂ ಬೂಷಣಕಾಣೊ |
ಈ ಭೂತಗಳಿಂದ ಪ್ರಭಾವ ವೆನಿಸುವ |
ಈ ಭೂತಗಳೌಘ ಪ್ರಭಾವ ಯಿರಲಾಗಿ |
ಶೋಭಿಸುವರು ವಿಪ್ರಬೂಭುಜ ಮಿಕ್ಕವರು |
ಈ ಭೂತಗಳಿಂದ ಸಾಭಿಮಾನವೆ ವುಂಟು |
ಈ ಭೂತಗಳಿಂದ ಲೋಕಕ್ಕೆ ಕಾರಣ |
ವಿಭೂತಿವಂತ ವಿಜಯ ವಿಠಲರೇಯ |
ಈ ಭೂತಗಳಿಂದ ಭೂಭಾರ ಯಿಳುಹುವ ||೨||

## ತ್ರಿವಿಡಿ ತಾಳ

ಒಬ್ಬೈದು ಭೂತ ಹೊಡೆದಿರಲು ಅವನ |
ಉಬ್ಬಿಸಿ ವತ್ತ್ಯೈದು ಭೂತಂಗಳ |
ಅಬ್ಬರದಲಿ ತಂದು ಕಟ್ಟಿಹಾಕಲು ನೆರದ |
ನಿಬ್ಬಣದ ಭೂತಂಗಳು ವೊಂದಾಗಿ |
ಗಬ್ಬಿನಲಿ ಯಿದ್ದಾ (ತ್ತಾ) ಕೆಲವುಕಾಲಕೆ ಮದವ |

ಗಬ್ಬು ತಾಕಲು ಹತ್ತು ಭೂತಾಕೂಡೆ ।
ಇಬ್ಬಗೆಯಿಂದ ಒಂದೊಂದು ಕೂಡಲು ।
ಹಬ್ಬಿತು ಭೂತವ ಬಳಗ ಸಂಖ್ಯೆ ।
ನಿಬ್ಬಿಡಿ ಕೃತವಾದ ಭೂತದೊಳಗೆ ಬಿದ್ದು ।
ಕಬ್ಬುಬಾಯಲಿ ಕಚ್ಚಿ ಜಂಬುಕನು ।
ಉಬ್ಬಸ ಬಟ್ಟಂತೆ ಭೂತಗಳ ಮೋಹ ।
ಯಿಬ್ಬಗೆಯನು ನೋಡಿ ಹೀನ (ವದು) ವಾದ ।
ಮಬ್ಬಿನ ಕಡೆಗೆ ಈ ಭೂತಗಳಟ್ಟಿದೆ ।
ಕಬ್ಬುಲ ದಾಟುವ ವುಪಾಯ ಹರಿಚರ ।
ಣಾಬ್ಜ ಕೊಂಡಾಡಿ ಕೊಳುತಲಿಪ್ಪೆ ।
ಒಬ್ಬರ ಮನೆಯಲ್ಲಿ ದ್ರವ್ಯ ಕದ್ದವನಲ್ಲ ।
ಒಬ್ಬರ ವಸ್ತಿಕೆ ಪೋಗಲಿಲ್ಲ ।
ಉಬ್ಬೀಗ ಉತ್ತುಮರ ಸರಿಯೆಂದು ಹಿಗ್ಗುತ ।
ಬೊಬ್ಬಾಟದಲಿ ಪೇಳಿಕೊಳ್ಳಲಿಲ್ಲವೊ ।
ಕಬ್ಬಿನಾಲಿಯ ಬಳಿಯ ಕುಳಿತು ಮಲಕೆ ಮಿಾರಿದ ।
ಅಬ್ಬು ಕುಡಿವರ್‍ಯಾರೊ ಮಾನವರು ।
ಒಬ್ಬರ ಶ್ರೇಯಸ್ಸು ನೋಡಿ ಧರಿಸಲಾರದೆ ।
ಹಬ್ಬದಲ್ಲುಪವಾಸ ಬಿದ್ದವನಂತೆ ।
ಹುಬ್ಬಿನ ಗೋಸಗ ಕಣ್ಣು ತೆಗೆಸಿಕೊಂಡು ।
ದೊಬ್ಬಿಸಿ ಕೊಳುತಾ ತಾ ಬದುಕಿದಂತೆ ।
ಇಬ್ಬಳ ಮಣಿಕೊಟ್ಟು ತಿಪ್ಪಿಮೇಲಿನ ಬೂದಿ ।
ಬೊಬ್ಬುಳಿ ಗಿಡಕೊಯ್ದು ಹರಹಿದಂತೆ ।
ಒಬ್ಬರ ಪೋಗಲಾಡುವದೇನು ನೀರಿನ ।
ಬೊಬ್ಬುಳಿ ಸಮಕಾಣೋ ಈ ಶರೀರ ।
ಶಬ್ದದಿಂದಲಿ ಪುಣ್ಯ ಪೋಗುವದು ಪಾಪ ।

ದಬ್ಧಿಯೊಳಗೆ ಮುಣುಗಿ ಪೊರಗಾಗರು ।
ಅಬ್ಧಿಶಯನ ನಮ್ಮ ವಿಜಯ ವಿಠಲನಂಘ್ರಿ ।
ದಭ್ರವಾದರು ಭಜಿಸುವನೆಂಬವ ಧನ್ಯ ।೩॥

ಅಟ್ಟ ತಾಳ

ಒಂದು ಪೈಶಾಚಿ ಹಿಡದವ ಮನಸಿಗೆ ।
ಬಂದಂತೆ ಪೊರಲುವ ಕಂಡಲ್ಲಿ ತಿರುಗುತ್ತ ।
ಒಂದಲ್ಲ ಎರಡಲ್ಲ ಐದು ಭೂತಂಗಳು ।
ಒಂದೇ ಪ್ರಕಾರವು ಅನಾದಿ ಕಾಲದ ।
ಲಿಂದ ಹಿಡಿದರೆ (ಹಿಡದಿರೆ) ತಮ್ಮ ಪುಣ್ಯಕೆ ಯೇ ।
ನೆಂದದೆ ಸರಿ ಪ್ರತಿಕೂಲರಾಗುವರು ।
ಬಾಂಧವ ತಾಸಾಗಿ ಹರಿ ಒಲಿದು ನಿತ್ಯ ।
ಗಂಧವಾದರು ತನ್ನ ಪರವಾದ ಸ್ತೋತ್ರಗ ।
ಳಿಂದವಾಗಲಿ ಮತ್ತಾಗದೆ ಪೋಗಲಿ ।
ಸಂಧಿಸಿ ಕೊಂಡಿದ್ದು ಭೂತಗಳೊಳು ತಾನೆ ।
ನಿಂದು ಈ ಪರಿಯಿಂದ ನುಡಿಸಿದ ಯಿದರಿಂದ ।
ನಂದ ವಾದರೆಯೇನು ಆಗದಿದ್ದರೆಯೇನು ।
ಮಂದಿಗವನ ಚಿಂತೆ ವ್ಯರ್ಥ ಹಚ್ಚಿಕೊಂಡು ।
ನಿಂದಿಸುವ ಆವಗತಿ ಮಾರ್ಗ ।
ಮುಂದೆ ಕಾಣದೆ ಪೋಗಿ ಮೂರ್ಖರಾಗುವರು ।
ಎಂದಿಗಾದರು ಯಮರಾಯನ ಸಭೆಯಲ್ಲಿ
ಬಂದು ಯಿವನ ಕರ್ಮಕೆ ಅಡ್ಡಬಾಹನೆ ।
ತಿಂದನ್ನ ಮೈಗೆ ಹತ್ತದಂತೆ ಯಿಪ್ಪದು ।

ಛಂದವಲ್ಲವಿದು ತಿಳಿದ ಪ್ರಾಜ್ಞರಿಗೆ |
ಕಂದು ಗೊರಳಪಿತ ವಿಜಯ ವಿಠಲರೇಯ |
ಬಂಧಾನ ದೊಳಗಿಡುವ ಭಕ್ತರಿಗಂದವನ್ನ ||೪||

**ಆದಿತಾಳ**

ನಿರ್ದೋಷ ಹರಿಯೊಬ್ಬ ಆ ತರುವಾಯ ಸಿರಿ |
ತದ್ದಾಸರು ಬ್ರಹ್ಮ ವಾಯು ಭಾರತಿ |
ಶುದ್ಧರಿವರು ಕಾಣೊ ವುಳದಾದವರು ಮಹ |
ರುದ್ರಾದ್ಯಲ್ಲರು ಸದ್ದೋಷಿಗಳು ಕಾಣೊ |
ವಿದ್ಯವಂತರಹುದು ನಮಗಿಂದಧಿಕರು |
ಪದ್ಮಬಾಂಧವರ ನೋಡೆ ಇವರು ನೀಚರಾದರು |
ಬುದ್ಧಿಯ ಹಳಿಯರು ಹೊರ ಬೀಸ ಬಿಸಾಟರು
ಇದ್ದ ಮಾನವರಿನ್ನು ಸಮ್ಮನಿರದೆ ನಿತ್ಯ
ಪೊದ್ದಿದ ಸುಕೃತ ಪೋಗಲಾಡಿ ಕೊಂಬರು |
ಸದ್ಧಿ ಸಂಸಾರವೆಂಬ ಮಾಯಾವಾದ ಪಾಶಾ |
ಬದ್ಧರಲ್ಲಿ ಶಿಲ್ಕಿ ಚರಿಸುವ ಮಾನವರು |
ದುರ್ದೋಷಿಗಳು ಕಾಣೊ ಗುಣವ ಪೇಳುವದೇನು |
ಕದ್ದು ತಂದವನಲ್ಲ ಅನ್ಯರ ಮನೆಸೇರಿ |
ಸುದ್ದಿಗಳಾಡಿ ಕೊಂಡು ಪೊಟ್ಟೆ ಪೊರದವನಲ್ಲ |
ಸಿದ್ಧವಾದ ಮತ ಸಜ್ಜನರ ಸಮ್ಮತ
ಇದ್ದದೆ ಭೂತಂಗಳು ಪೇಳುತಲಿವೆ ಕೇಳು |
ಕೃದ್ಧವ ತಾಳಿ ಜನರು ಪ್ರತಿಕೂಲವಾಗಿ ಅಪ |
ಶಬ್ದ ನುಡಿದರೆ ಯಿತರ ಜನರಿಗೇನು |
ರದ್ಧರಿಯೊಳಗಿದ್ಧ ಭೂತವಾದರು ಬಂದು |
ಪೊದ್ದಿದ ರೇನಯ್ಯಾ ಹರಿನಾಮ ನುಡಿವದು |

ಕ್ಷುದ್ರ ವೃತ್ತಿಯ ಪೋಗಿ ಕುಲಗೇಡಿ ಯಾಗಿದ್ದರೆ।
ಒದ್ದು ಬಿಡಲಿಬೇಕು ಗುಣವಂತರಾದವರು।
ಸಿದ್ಧ ಮಹಿಮ ನಮ್ಮ ವಿಜಯ ವಿಠಲರೇಯ।
ಭದ್ರಕೊಡುತಿಪ್ಪ ಭೂತವುಳ್ಳವನಿಗೆ। ॥೫॥

ಜತೆ

ಎಲ್ಲ ಭೂತಗಳೊಡೆಯ ವಿಜಯ ವಿಠಲನೊಬ್ಬ।
ಬಲ್ಲಿದ ವೊಲಿದಿರೆ ಅನ್ಯ ಭೂತಗಳಿಲ್ಲ ॥೬॥



## ೨೪ ತತ್ವಗಳ ವೈಭವಾದಿ ಲಕ್ಷಣ, ಅವುಗಳ ಉಪಚಯಾತ್ಮಕ ಸೃಷ್ಟಿ ವಿವರ

### ೩೫) ಸುಳಾದಿ

ರಾಗ : ರೇಗುಪ್ತಿ ಧ್ರುವತಾಳ

ತತು ಪೂರ್ವದಲ್ಲಿ ಯನಗೆ ಹಿತವಾದ ಹಿರಿಯರು।
ಪ್ರತಿ ಯಿಲ್ಲದ ಧನ ಸ್ಥಾಪಿಸಿರಲು।
ಕ್ಷಿತಿಯ ಶೋಧಿಸಲಿಲ್ಲ ಕಂಡ ಕಡೆ ತಿರುಗಿ।
ಮತಿ ಭ್ರಮಣನಾಗಿ ಅರಸಲಿಲ್ಲ।
ಸಥೆ ಯಿಲ್ಲಿಟ್ಟಂತೆ ಬರುತಲೆ ಗುರುತು ಕಂಡೆ।
ಮಿತಿಯಾವುದು ಯೆನ್ನ ಅತಿಶಯಕೆ।
ಚತುರ ಬಾಹು ನಾಮ ವಿಜಯ ವಿಠಲನ್ನ।
ನುತಿಸುವ ಭಾಗ್ಯ ಸುಕೃತ ಧನವೆಂತೊ ॥೧॥

### ಮಟ್ಟತಾಳ

ಚತುರ ವಿಂವಶತಿ ಹಳೆ ನಾಣ್ಯಗಳಯ್ಯ ।
ಪ್ರತಿ ಪ್ರತಿ ಪೆಸರುಗಳು ಪೊಂದು ಪೊಂದರ ಮ್ಯಾಲೆ ।
ಪೃಥುವಿಗೆ ನೂತನದ ಶುದ್ಧ ಮುದ್ರೆಪಡಿ
ಶ್ರುತಿಯಲ್ಲಿ ಶೋಧಿಸಲು ಆದಿಯಲ್ಲಿ ವುಂಟು ।
ಚತುರ ಮೂರುತಿ ನಾಮ ವಿಜಯ ವಿಠಲನ್ನ ।
ನತಜನಾಶ್ರಯವೊ ಎನ್ನ ಪುಣ್ಯಭಾಗ್ಯವೊ । ।।೨।।

### ರೂಪಕ ತಾಳ

ಬಣ್ಣ ನೋಡಲು ಷೋಡಶ ಬಣ್ಣಾಧಿಕಾನೇಕ ।
ಚಿನ್ನವಾದರು ವರೆಗಲ್ಲಿಲಿ ನೋಡಲಿ ಸಲ್ಲ ।
ಚಿನ್ನಿವಾದರು ಯಿವಕೆ ಬೆಲೆಕಟ್ಟಲಾರರು ।
ಕಣ್ಣಿಂದ ನೀಕ್ಷಿಸೆ ಪರಿ ಪರಿ ವರ್ನಗಳು ।
ತನ್ನಿಂದ ತಾನೆ ಉದ್ಭವವಾದದಲ್ಲದೆ ।
ಅನ್ಯರಿಂದಲಿ ನಾಣ್ಯ ಕಲ್ಪಿತ ವಾದುದಲ್ಲ ।
ಚನ್ನ ಸವರ್ನ ವರ್ನ ವಿಜಯ ವಿಠಲ ।
ಚಿನ್ನಿವಾರನೆ ಯಿದರ ಮೂಲಾಗ್ರವನು ಬಲ್ಲ ।।೩।।

### ಝಂಪಿ ತಾಳ

ಕಾಸುವದಲ್ಲ ಕಂಡವರು ಅಲ್ಪರಿದರೆ ।
ಕಾಶಿನಷ್ಟು ಕಡಿದು ಕೊಡುವದಲ್ಲ ।
ಕಾಶಿ ರಾಮೇಶ್ವರ ದೇಶವನು ತಿರುಗಿದರೆ ।
ಬ್ಯಾಸತ್ತು ಹೊರಲಾರೆ ನೆಂಬೊದಲ್ಲ ।
ಏಸುದಿನ ಯಿದ್ದರು ಭಾರ ಕಿಂಚಿತುಯಿಲ್ಲ ।

ಬೀಸ ಬಿಸುಟರೆ ಕೆಳಗೆ ಬೀಳುವದಲ್ಲ |
ವಿಶೋಧನನಾಮ ವಿಜಯವಿಠಲನ್ನ |
ಪೋಷಿಸುವಿ ನೀ ನಾಣ್ಯ ಸೇರಿದವರ ||೪||

### ತ್ರಿವಿಡಿತಾಳ

ಒಂದು ನಾಣ್ಯದಿಂದ ಯಿಂದ್ರಾದಿ ನಿರ್ಜರರ |
ಮಂದಿರ ಸಹಿತ ಬೆಲೆಗೊಳಲೆಬಹುದು |
ಹಿಂದೆ ಮುಂದೆನ್ನ ನೂರೊಂದು ಕುಲದವರಿಗೆ |
ಬಂದ ದೋಷ ದಾರಿದ್ರ ಕಳೆಯ ಬಹುದು |
ಮಂದಮತಿ ಯೆಂಬೊ ಬಡತನ ಬಿ(ಬ)ಡದಿರೆ |
ಒಂದು ಕ್ಷಣದಲ್ಲಿ ಬಿಡಿಸಬಹುದು |
ಸಂದೇಹ ವಿದಕಿಲ್ಲ ಸಮ ವಿಜಯವಿಠಲ |
ಬಂಧು ಬಾಂಧವನಾಗುವ ಯಿದರ ದೆಶೆಯಿಂದ ||೫||

### ಅಟ್ಟತಾಳ

ನೃಪತಿಚೋರ ಪಾವಕನ ಭಯವೆ ಯಿಲ್ಲ |
ಸ್ವಪನದಲ್ಲಾ್ಯದರು ತೊಲಗಿ ಪೋಗುವದಲ್ಲ |
ತಪಶಿಗೆ ಯಾದರು ವೇಗ ಶಿಗುವದಿಲ್ಲ |
ಜಪಿಸಿದ ಹಾಗೆಲ್ಲ ಸಾಧ್ಯವೆ ಪುಶಿಯಲ್ಲ |
ತಪಿಸುವ ದುರಿತಾನಳಕೆ ಶಾಂತನಾಗಿ |
ಉಪಕಾರವೆಂಬೋ ಸೋನೆ ಗರುವುದು |
ಸ್ವಪನ ನಾಮ ವಿಜಯವಿಠಲನ ಚರಣ ಸೇ
ವಿಪ ಮನುಜರಿಗೆ ಸಮಿಾಪದಲ್ಲಿಪ್ಪುದು ||೬||

## ಆದಿತಾಳ

ಸಂಚಿತಾರ್ಥ ಪುಣ್ಯದಿಂದ ವಂಚನೆಯಿಲ್ಲದಹಾಗೆ |
ಸಂಚಿತಾದ ಮಂಗಳಧನ ಕೊಂಚೆಯಾಗದಂತೆ ಮನಕೆ |
ಹಂಚಿಕೆ ಬೇಡುವರಿಲ್ಲ ಪಂಚರಾತ್ರಿಯನಸಲ್ಲ |
ಅಂಚೆ ಆಂಚೆ ಜನುಮಕ್ಕೆ ಪ್ರಾಪಂಚ ಬಿಡದಲ್ಲಿಪ್ಪುದು |
ಮುಂಚೆಯಿದ್ದಲ್ಲಿದರ ಮಹಿಮೆ ಕಿಂಚಿತಾದರು ತಿಳಿಯ ದಿದ್ದೆ |
ಹಿಂಚಿನ ಸುಕೃತದಿಂದ ಸಂಚಾರ ಫಲಿಸಿತು |
ಪಂಚವೊಗ (ದವನ) ವದನ ವಿಷ್ಣು ವಿಜಯ ವಿಠಲನ್ನ |
ಪಂಚ್ಯೆಯಲ್ಲಿ ಸೇರುವಂಥ ಚಂಚಲ ಘನವಾಯಿತು ||೭||

## ಜತೆ

ಕುಕ್ಷಿಯೊಳು ಸ್ಥಾಪಿಸಿ ಈ ಕ್ಷಿತಿಯೊಳು ಬೀರಿ |
ಅಕ್ಷಯಾ ವಿಜಯವಿಠಲಗೆ (ನು) ಬಡ್ಡಿಗೆ ಯೀವ ||೮||



## ಪಂಚ ಭೂತಾತ್ಮಕ, ಬ್ರಹ್ಮಾಂಡ ಬಹಿರಾವರಣ ಸೃಷ್ಟಿ ವಿಚಾರ

## ೩೫ ವರ್ಷ ದಿಂದ ೪೫ ವರ್ಷ ವರೆಗೆ

### ೩೬) ಸುಳಾದಿ

ರಾಗ: ಭೈರವಿ ಧ್ರುವತಾಳ

ಗುಣಭಾಗತ್ರಯ ನಿತ್ಯ ಅನಾದಿಯಿಂದಲಿ ।
ಎಣಿಸಿ ಸತ್ವ ರಾಜಸ ತಮ ಪೆಸರು ।
ಗಣನೆ ಯಿಲ್ಲದೆ ವುಂಟು ಅಂಶಿ ಅಂಶಗಳಾಲೋ ।
ಚನೆ ಮಾಡಿದರೆ ವಂದಾನಂತಾನಂತ ।
ಎಣಿಕೆ ಮಾಡುವದಕ್ಕೆ ಅಂತುಗಂಡವರಾರು ।
ಮನಕೆ ತೋರದು ವಟ ಬೀಜವಂತೆ ।
ಇನಿತು ಪೇಳುವದೇನು ಯಿದರೊಳು ಚತುರ ವಿಂಶತಿ ।
ಘನ ತತ್ವ ಸೂಕ್ಷ್ಮ ರಾಶಿತರಯಿಪ್ಪೊವೊ ।
ಗುಣಶುದ್ಧ ಸತ್ವ ಶುಭ್ರ ಪದ್ಮರಾಗ ರಾಜಸ ತಮ ।
ಮಿನಗುವ ನೀಲವರ್ಣ ಈಬಗೆ ಅಕ್ಕು ।
ತೃಣ ಸೂಕ್ಷ್ಮರಾಶಿ ಭೂತಜಗಕೆ ಉಪಾದಾನ ।
ಕಣರಾಶಿಯಿಂದ ಪರಿಣಾಮೈಸಿ ವಲಯ ।
ಅನಿರುದ್ಧ ದೇವನಿಂದ ಯಿಂತು ಪಲ್ಲೈಸುವದು ।
ವನಜಜಾಂಡಕ್ಕೆ ಆವರಣ ಭೂತ ।
ಮಣಿಪ್ರಕಾಶದಂತೆ ಯೇಕೇಕ ವರ್ಣಸ್ವಚ್ಛ ।
ಅಣುಮಾತ್ರ ದೋಷವಿಲ್ಲ ಧೂಮ್ರಾದಿಯು ।
ಕೊನೆ ಮೊದಲು ನೋಡಿದರೆ ವೊಂದಕ್ಕೆ ವೊಂದು ಸ್ಥೂಲ ।
ಗುಣತ್ರಯದಿಂದಲಿ ಪೃಥಿವಿ ತನಕ ।
ಅನುದಿನ ಅವಕಾಶಕೊಡುತಿದೆ ನೋಳ್ಪರಿಗೆ ।
ನೆನೆದು ನೆನೆದು ಜ್ಞಾನಿ ಸಂಖ್ಯಮಾಳ್ಪ ।

ಗುಣಸತ್ವ ವಿಶಿಷ್ಟರಾಶಿ ವಿರಳವನ್ನು ।
ಕ್ಷಣದೊಳು ನಿರ್ಮಾಣ ಮಾಡಿದ ದೇವ್ನ।
ಗುಣಸತ್ವಬಿಂದು ಸಾಂಶವುಳ್ಳವು ತೆಗೆದುಕೊಂಡು ।
ಮನದಿಚ್ಛೆಯಲಿ ಪ್ರದೇಶ ವ್ಯಾಪ್ತಿ ।
ಯನು ಮಾಡಿಹರಹಿದ ರಾಜಸಾವರಣಕ್ಕೆ ದ್ವಿ ।
ಗುಣ ಪರಿಮಿತವಧಿಕ ವಲಯಾಕಾರ ।
ಗಣಿತ ಮಾಡೆಲೊ ಯಿದರ ಲೆಖ್ಖ ಅನೇಕಯೋ
ಜನೆ ವುಂಟು ನೋಡಿಕೊಂಡು ಮುಂದೆ ಅರುಣಾ ।
ಗುಣದಾವರಣ ಭೂತ ಪುಟ್ಟಿದ ಬಗೆಕೇಳು ।
ವಿನಯದಿಂದೇಕಭಾಗ ತಮ ಮೂಲದಿ ।
ಇನಿತು ರಜೋಸೂಕ್ಷ್ಮರಾಶಿ ಭೂತಾಂತರದಿಂದ ।
ಗುಣಗಳು ಪೊರಟವು ನೂರುಭಾಗ ।
ಎಣಿಕೆ ಮಾಡು ಪ್ರಥಮಾವರಣದಿ ದಶಭಾಗ ।
ಗಣಿತಮಾಡಲು ಯಿಷ್ಟರಿಂದಲಿದೆ ।
ಗುಣವಂತ ತನ್ನ ರಾಣಿಯರ ಸಹಿತ ಪ್ರವೇಶಿಸಿ ।
ಗುಣಮೂರರಿಂದ (ವನು) ಪರಿಣಾಮ (ಮಾಣ) ವನೆಮಾಡಿ ।
ದಿನದಿನಕೆ ಬೆಳಸಿ ಆವರಣಭೂತ ತಮೊದ್ವಿ ।
ಗುಣಮಾಡಿದನು ರಾಜಸ ಪರಿಚ್ಛೇದ ।
ಎಣಿಸು ಯಿದರ ಯೋಜನ ಅಸಂಖ್ಯವೆಂದು ।
ಮನದಲ್ಲಿ ತಮೊ ಭಾಗಾವರುಣೋತ್ಪತ್ತಿ ।
ನೆನಸು ಆವರಣ ಭೂತರಾಜಸರೊಳೊಂದಂಶ ।
ಗುಣತಮೊ ಸೂಕ್ಷ್ಮರಾಶಿ ಭೂತದೊಳಗೆ ।
ಅನುಕರಿಸು ರಾಜಸ ದ್ವಾದಶಮಡಿ ಕಪ್ಪುಬಿಂದು ।
ಅನುಮಾನವಿಲ್ಲ ಕೆಲವು ಸತ್ವಭಾಗ ।
ಅನುವಾಗಿಯಿವು ಮೂರು ಕಲಸಿ ಅದರೊಳು ತಾನೆ ।
ಚಿನುಮಯ ದೇಹದಲ್ಲಿ ಪೊಕ್ಕು ತನ್ನ ।

ವನಿತೆ ಸಹಿತ ವಲಯಾಕಾರ ಬೆಳಸಿ ತವೊ ।
ಗುಣ ಪರಿಚ್ಛೇದ ಪುಟ್ಟಿಸಿದನುಗಡ ।
ವನಜ ಪೀಠನ ತತ್ವದ ದಶಮಡಿ ಯೆನಿಸಿ ಯೋ ।
ಜನೆ(ನ) ಭೇದ ಮಾಡಿದ ಅವ್ಯಕ್ತಾವರಣ ।
ಜನರು ಕೊಂಡಾಡಿ ಯಿಂತು ಪ್ರಥಮಾವರಣ ಭೂತ
ಮಣಿ ಪ್ರಕಾಶದಂತೆ ಝುಗಿ ಝುಗಿಪುದು ।
ಘನ ಆನಂದಮಯ ವಿಜಯ ವಿಠಲರೇಯ
ಮನದೊಳ ಗಾಡುವ ಅವ್ಯಕ್ತನಾಮದಿ

## ಮಟ್ಟತಾಳ

ದ್ವಿತಿಯಾವರ್ಣ ಭೂತ ಮಹತತ್ವ ।
ಸತುವ ಭಾಗದಿ ಹತ್ತು ತಮೊಗುಣದಲಿ ವೊಂದು ।
ಅತಿಶಯವಾಗಿ ಲೋಹಿತಗುಣದಲಿ ವೊಂದು ।
ಮತಿವಂತರು ಕೇಳಿ ಗುಣಸಾಮ್ಯದಲಿ ರ ।
ಕುತ ಬಿಂದುಗಳಯ್ಯ ಅವ್ಯಕ್ತದಲಿ ಮಹ ।
ತತುವ ಉಪಾದಾನ ವೈಷಮ್ಯಕಾಲದಲಿ ।
ತೃತಿಯ ರಜಸು ತೆರಳಿ ತಮೊದೊಳಗೊಂದು ಬಿಂದು ।
ಪ್ರತಿಕೂಲ ವಿಲ್ಲದೆಲೆ ವೊಂದೊಂದು ವೆರಸಿ ।
ಸತಿ ಸಮೇತದಲಿ ಪರಮಾತ್ಮನು ಪ್ರವೇ ।
ಸಿತನಾಗಿ ಬೆಳಸಿ ವಲಯಕಾರದಲ್ಲಿ ।
ಚತುರಾನನ ತತ್ವ ಪುಟ್ಟಿಸಿದನುಗಡ ।
ಚತುರ ಪಂಚಭಾಗವೆಂದು ಪೇಳುವದೇನು
ಮತ ಸಮ್ಮತವಿದೆ ಭಾಗಾಂತರ ಮಹ
ತತುವ ಸೂಕ್ಷ್ಮರಾಶಿಯೊಳಗಿನ ಯಿದೆ ಬಿಂದು ।
ಗತಿ ತಪ್ಪದಲೆ ಬಂದು ಕೂಡಿದ ಕಾರಣ ।

ಹಿತವಾಯಿತು ನೋಡಾ ತಜ್ಜಾತಿಯಾಗಿ ।
ಚತುರವೊಗನು ಯೆಮ್ಮ (ಉಂಟು) ವಾಯುದೇವರು ಸರ ।
ಸ್ವತಿ ಭಾರತಿ ಉಂಟು ಅಭಿಮಾನಿಗಳಾಗಿ ।
ಸತತ ಅಹಂಕಾರಕ್ಕೆ ದಶಮಡಿ ಯಾಗಿದೆ ।
ಸತು ರಜೊ ತಮೊ ಬಿಂದು ಸಾಂಶಗಳು ಮಿ ।
ಳಿತವಾಗಿವೆ ನೋಡು ಲಕ್ಷ ಸಾವಿರ ನೂರು
ಶತ ಆರಂಭಿಸಿ ವೊಂದೊಂದೀಪರಿಯು
ಪತಿ ವಿಜ್ಞಾನಮಯ ವಿಜಯವಿಠಲ ನಿತ್ಯ ।
ತುತಿಸಿದವನ ಮಹಾಖ್ಯಾತಿ ಮಾಡುವಕಾಣೊ ॥೨॥

**ರೂಪಕತಾಳ**

ಶಿವನ ತತ್ವದ ಮಹಿಮೆಯ ಯೇನು ಪೇಳಲಿ ವನಜ ।
ಭವನ ತತ್ವಾಂತರ್ಗತ ತದ್ಗತ ವಿಜ್ಞಾನಮಯ ।
ವಿವರ ತಮೊಭಾಗ ಅಹಂಕಾರ ಸೂಕ್ಷ್ಮ ವಿಂ
ಚುವ ರಾಶಿಯೊಳಗೆ ತ್ರಿಭಾಗ ಕೂಡಿದ ಲೇ ।
ಶವ ತೆಗೆದು ಅದರಲ್ಲಿ ಹರಿ ಪ್ರವಿಷ್ಟನಾಗಿ ।
ದಿವಸ ದಿವಸಕೆ ಬೆಳಸಿ ವಲಯಾಕಾರದಿಂದ ।
ತ್ರಿವಿಧ ಬಗೆಮಾಡಿದ ವೈಕಾರಿಕ ತೈಜಸ ತಾಮ ।
ಸವನು ಯಿದರಿಂದ ಮಿಗಿಲಾದ ತತ್ವಜನನ ।
ಕವಿಗಳು ಕೇಳಿ ಈ ಅಹಂಕಾರದಿಂದ ಚಿ ।
ತ್ತವು ಬುದ್ಧಿಮನ ತತ್ತ್ವದ್ರಾಶಿಯಿಂದುತ್ಪತ್ತಿ ।
ತವಕದಿಂದಲಿ ನೋಡಿ ಚತುರವಿಂಶತಿ ತತ್ವ ।
ದಿವಿಜರ ಗಾತುರ ಬ್ಯಾರೆ ಬ್ಯಾರೆ ವು ।
ದ್ಭವವಾಯಿತು ವೈಕಾರಿಕ ಅಹಂಕಾರ ಮನದಿಂದ ತೃತಿ ।
ಯಾವರಣಕೆ ಭೂತ ಗಗನ ತತ್ವಕ್ಕೆ ಪರಿಮಿ ।

ತವಾಗಿದೆ ಹತ್ತುಮಡಿ ಲೆಖ್ಖದ ವ್ಯಾಪ್ತಿ ।
ಪವನ ಪರಿಪಾಲ ವಿಜಯ ವಿಠಲರೇಯ ।
ನವ ನವ ಭಕುತಿಯ ಕೊಡುವಾ ವಿರಕುತಿಯಾ ॥೩॥

## ಝುಂಪೆತಾಳ

ಎರಡನೇ ಅಹಂಕಾರ ತೈಜಸ ವೆಂಬೋದು ।
ಅರುಣ ರೂಪದಲಿಂದ ವೊಪ್ಪುತಿದಕೊ ।
ಪರಮಾತ್ಮ ತೈಜಸ ಭಾಗದ ದೆಶೆಯಿಂದ ।
ಪೊರಡಿಸಿ ದಶವಿಧ ಬೀಜಾಂಕುರ ।
ಎರಡೈದು ಯಿಂದ್ರಿಯಗಳು ಯಿದರಿಂದ ವುಪಚಯ ।
ಸರಿ ಬೆರಸಿ ಯಿಪ್ಪವು ಸೂಕ್ಷ್ಮದಿಂದ ।
ಮರಳೆ ತೈಜಸ ಭಾಗ ಮೂಲದಲ್ಲಿದ್ದ ಶ್ರೋ ।
ತುರ ಶಬ್ದಾಕಾಶ ಸೂಕ್ಷ್ಮ ರಾಶಿಯಲ್ಲಿ ।
ಇರುತಿಪ್ಪ ದೊಂದೊಂದು ಭಾಗವನು ತೆಗೆದು ಶ್ರೋ ।
ತುರ ತತ್ವ ಪುಟ್ಟಿತು ಹರಿಯಿಂದಲಿ ।
ಎರಡೆರಡು ಶಬ್ದ (ರಬ್ದ) ದಿಂದಲಿ ಯಿದು ನಿರ್ಮಾಣ ।
ಪರಿಯಾಗಿ ಯಿಪ್ಪುದು ಬಲು ವಿಚಿತ್ರ ।
ಅರಿವುದು ಯಿದರಂತೆ ವುಳಿದ ವೊಂಭತ್ತು ನೇ ।
ತುರ ಮೊದಲಾದ ಉಪಸ್ಥ ತನಕ ।
ಧರಿಯೊಳಗೇವೆ ಜ್ಞಾನ ಕರ್ಮೇಂದ್ರಿಯಗಳೆಂದು ।
ಕರಸಿ ಕೊಳು ತಿಪ್ಪವು ಸರ್ವದಲ್ಲಿ ।
ತರುವಾಯ ತಾಮಸ ಅಹಂಕಾರ ಭಾಗಾಂತರದಿ ।
ಎರಡೈದು ವಿಭಾಗ ಮಾಡಿ ಶಬ್ದ ।
ಸ್ಪರಿಶ ರೂಪ ರಸ ಗಂಧ ಪಂಚ ತನ್ಮಾ ।
ತುರ ಗಗನ ಪೃಥಿವಿ ಪರಿಯಂತ ಸೃಷ್ಟಿ ।

ಮಿರಗುವ ತಾಮಸ ಅಹಂಕಾರಿಕದ ಬಗೆಪ್ಪೊಂದು |
ವರ ಶ್ರೋತ್ರ ತತ್ವ ದಶಭಾಗ ವೊಂದು |
ನಿರುತ ತಾಮಸದಲ್ಲಿ ಯಿಪ್ಪ ಸೂಕ್ಷ್ಮರಾಶಿ |
ತರ ಭೂತದಲ್ಲಿ ಯಿದ್ದ ಶಬ್ದಗಗನ |
ಎರಡು ಪೂರ್ವದ ಲೆರಡು ಪೇಳಿದವು ಕೂಡಿ ನಿಂ |
ದಿರದೆ ಶಬ್ದ ತತ್ವ ಪುಟ್ಟಿತು ಗಡ |
ಸ್ಪರಿಶ ಮೊದಲಾದ ನಾಲ್ಕುಮಾತ್ರಾ ಯಿದರಂತೆ |
ಪರಿಗ್ರಹಿಸು ಅಂತರಂತರ ತದ್ಗತ |
ಚರಿತೆಯನು ತಿಳಿ ಚಿತ್ತಬದ್ಧಿ ಮನಸು ದಶ !
ಕರಣಗಳು ಪಂಚ ತನ್ಮಾತ್ರಗಳು ಆ |
ವರಣ ಭೂತಗಳೆಲ್ಲ ವೊಂದಂದರಲ್ಲಿ ಸು |
ಸ್ಥಿರವಾಗಿ ಪೊಂದಿಕೊಂಡಿಪ್ಪವಯ್ಯಾ |
ಮರುತ್ವದ ಮಿಕ್ಕಾದ ಪಂಚ ಭೂತದ ಸ್ಥಿತಿ |
ಅರುಹು ಸಜ್ಜನರ ಮನಕಾಗಬೇಕು |
ಪರಿಪೂರ್ಣ ಗುಣನಿಧಿ ವಿಜಯ ವಿಠಲರೇಯ |
ಸುರನಿಕರ ಸಿರಿಸಹಿತ ಅಲ್ಲಲ್ಲೆ ವಾಸನೊ ||೪||

### ತ್ರಿವಿಡಿತಾಳ

ಒಂದು ಅಂಶ ತಾಮಸಾಂಹಕಾರದಿಂದ |
ಬಂದದ್ದು ಆಮೇಲೆ ಶ್ರೋತ್ರ ತತ್ವದ ಭಾಗ |
ಒಂದಾಂಶಾ ಶ್ರೋತ್ರವು ಶಬ್ದ ತತ್ವವಿಭಾಗ |
ಒಂದು ಈ ವಿಧದಿಂದ ಮೂರುಯೆಣಿಸೆ |
ಸಂದಿದೆ ಯಿದರಲ್ಲಿ ತಾಮಸಾವರಣ ಭೂತ |
ಪೊಂದಿದನಭ ಸೂಕ್ಷ್ಮರಾಶಿಯೊಳಗೆ |
ಬಂದು ಭಾಗವ ತೆಗೆದು ಆಕಾಶ ತತ್ವವ |
ಅಂದದಲಿ ಮಾಡಿದ ಹರಿ ವಿನಿಯದಿಂದಲ್ಲಿ |

ಕುಂದದಲೆ ಪ್ರಾದೇಶ ಗಣಿತವನ್ನು ತಿಳಿದು |
ಬಂಧಾನ ಕಳಕೊಂಡು ಸುಖಿಸುವದು |
ಮುಂದಿನ ತತ್ವಗಳು ಯಿದರಂತೆ ಗ್ರಹಿಸ ಬೇಕು |
ಒಂದು ತಮೋಭಾಗ ಜ್ಞಾನೇಂದ್ರಿ ಮಿಗಿಲಾದ |
ಒಂದೊಂದಂಶವನೆ (ವೆ) ವುಂಟು ಸೂಕ್ಷ್ಮರಾಶಿಯು |
ಸಮ್ಮಂಥ ವಾಯುವಾದಿ ಅನುಕ್ರಮದಿಂದ |
ಛಂದ ಛಂದವಾಗಿ ವೊಪ್ಪುತಿವೆ ನೋಡಿ |
ಒಂದಕ್ಕೆ ವೊಂದೊಂದು ದಶಮಡಿಲೆಖ್ಖ
ಬಿಂದು ಬಿಂದುಗಳಿಂದ ಯಿಂತಾವರಣ ಭೂತ |
ಗಂಧಾದಿ ಯಿದರಲ್ಲಿ ಅಂತರವಾಸ |
ಎಂದಿಗೆಂದಿಗೆ ದೋಷ ಲೇಶವಿಲ್ಲ ಪ್ರತಿ |
ಛಂದಕ ವಿಲ್ಲದೆ ಸುತ್ತಿಪ್ಪವು |
ಇಂದು ಪೇಳುವದೇನು ಪಂಚಕೋಶದಲ್ಲಿ ಯಿದ |
ರಿಂದಲೆ ತಿಳಿದರೆ ತತ್ತದ್ಭಾಗ
ಸಂದೇಹವಾಗದೆ ಮನಕೆ ಬರುವದು ಆ |
ನಂದ ವಾಹದು ಹರಿ ಕರುಣ ಮಾಳ್ಪ |
ಇಂದ್ರಾದಿ ಜನರೆಲ್ಲ ಯಿವಕೆ ಮಾನಿಗಳು ಯೇ |
ನೆಂದು ಕೊಂಡಾಡಲಿ ಹರಿಯ ಶಕ್ತಿ |
ಸಂದೇಹದಿಂದಲಿ ಜ್ಞಾನ ಪುಟ್ಟದು ಕೇಳು |
ಮಂದ ಮತಿಗಳಿಗಿದು ಶುಲಭವೇನಯ್ಯ |
ಇಂದಿರಾ ಪತಿ ನಮ್ಮ ವಿಜಯ ವಿಠಲರೇಯ |
ಒಂದೊಂದು ಭಾಗ ವಿಭಾಗ ತ್ರಿಗುಣ ಬಲ್ಲ |೫||

### ಅಟ್ಟತಾಳ

ಕುರುಹು ತತ್ವಗಳು ವೊಂದಕ್ಕೊಂದು ಕಾರಣ |
ಪರಿಮಿತವಾಗಿವೆ ಸೂಕ್ಷ್ಮಸ್ಥೂಲ ತರ |
ಧರಣಿವಿಡಿದು ಮಹ ಅವ್ಯಕ್ತತತ್ವವು |

ಸರಸಿ ಜಾಂಡಕ್ಕೆ ಆವರ್ಕವಾಗಿವೆ ।
ವರ ತುರ್ಯಾ ಮೂರುತಿ ಅನ್ನಮಯಾದಿ ನಾಮಾಂ ।
ತರದಿ ಯಿರುತಿಪ್ಪ ತದಕಾರ ಅವಿಕಾರ ।
ಪರಮ ಪುರುಷನಿತ್ಯ ಚತುರವಿಂಶತಿ ತತ್ವ ।
ಮರಿಯಾದೆ ಮಾಡಿದ ಬೊಮ್ಮಾಂಡ ಖರ್ಪರ ।
ಎರಡೇಳು ಲೋಕಸಮುದ್ರ ಪರ್ವತನದಿ ।
ವಿರಚಿಸಿ ತತ್ತದೇವತೆಗಳ ಸ್ಥಾಪಿಸಿ ।
ಭರತಾಖ್ಯಖಂಡ ಕರ್ಮ ಭೂಮಿಯಲ್ಲಿ ನಿ ।
ಬ್ಬರಯೆಂಬತ್ತು ನಾಲ್ಕುಲಕ್ಷ ಜೀವರ ಗಾ ।
ತುರ ನಿರ್ಮೈಸಿದ ಸರ್ವ ತತ್ವಗಳಿಂದಲಿ ।
ಇರತಕ್ಕದಾಯಿತು ಪ್ರಚುರ ಭಾಗಭೂತ ।
ಭರಿತವಾಗಿದೆ ವಿರಾಟರೂಪದ ಮಧ್ಯ
ಕರುಣಾಕರ ನಮ್ಮ ವಿಜಯ ವಿಠಲರೇಯ ।
ನಿರುತ ನಿಮಿತ್ಯನೊ ಗುಣ ಉಪಾದಾನವು ॥೬॥

### ಆದಿತಾಳ

ಚತುರ ವಿಂಶತಿ ತತ್ವಾತ್ಮಕವಾದ ಗುಣತ್ರಯ ।
ಶಿತ ರಕ್ತಾಶಿತ ವರ್ಣ ಅನಾದಿ ನಿತ್ಯಸೂಕ್ಷ್ಮ ।
ಪ್ರತಿ ಪ್ರತಿ ಪರಮಾಣು ವಂದನೇಕವಾಗಿ ।
ಗತಿ ತಪ್ಪದಲೆ ಬೀಜಾಂಕುರದೋಪಾದೆಯಲ್ಲಿ ।
ಅತಿಶಯವಾಗಿದೆ ಜಗತ್ತಿಗೆ ಉಪಾದಾನ ।
ಶ್ರುತಿ ತತಿಯಿಂದ ತಿಳಿದು ಕೊಂಡಾಡಬೇಕು ಯಿದಕೆ ।
ಇತರ ಸಂಶಯ ಸಲ್ಲ ವೊಂದಕ್ಕೊಂದು ಸಂಯೋಗ ।
ತತುವ ವರ್ಣ ಭೂತವಾಗಿಪ್ಪವು ನೋಡೆ ।
ಚತುರರ ಮನಸಿಗೆ ಸೋಜಿಗವಾಗಿದೆ ।
ಅತುಳ ಬಲವೀರ್ಯ ಹರಿಯ ಸ್ವೇಚ್ಛ ಅ ।

ಚಿಂತ್ಯಾದ್ಭುತ ಶಕ್ತಿ ಗುಣ ರೂಪಕ್ರಿಯೆಕ್ಕೆ ನಮೊ ನಮೊ |
ಚ್ಯುತದೂರ ಚಿನ್ಮಯ ಯಿವನೆಲ್ಲ ಕೂಡಿಸಿ |
ಉತುಪತ್ತಿ ಸ್ಥಿತಿ ಮಾಡುವ ಕಡಿಗೆ ಸಾಮ್ಯಾವಸ್ಥಿ |
ಪೃಥುವಿಗೆ ಜಲ ಜಲಕೆ ತೇಜ ತೇಜಕ್ಕೆ ಮರುತ ಮ |
ರುತಗೆ ಗಗನ ಗಗನಕ್ಕೆ ನೋಡು ಅಹಂ |
ಕೃತಿ ಯಿದಕ್ಕೆ ಮಹತತ್ವ ಮಹತತ್ವಕೆ ಅವ್ಯಕ್ತ |
ಹಿತವಾಗಿಯಿವೆ ವೊಂದಂದಕ್ಕೆ ಕಾರಣ |
ರತಿ ಪತಿ ಜನಕ ತಾನೆ ಯಿವಕ್ಕೆಲ್ಲ ಮೂಲ ಪ್ರ |
ಕೃತಿಯ ಕಾರಣಮಾಡಿ ಸತಿ ಸಹಿತ ಕ್ರೀಡಿಸುವ |
ಪ್ರತಿಮೆ (ಕಾ) ಸ್ಥಾನವೆಯಿದು ವಾಸುದೇವಗೆ ಯೆಂದು |
ನುತಿಸಿ ನಾನಾಪರಿ ವಿಚಾರ ತಿಳಿದು ವು |
ಚಿತವಾದ ಮನುಜಂಗೆ ಪಂಚಕೋಶದ ಮಾರ್ಗ |
ಸುತನಾಗಿ ತೋರಿಸುವ ಹರಿ ಮುಂಭಾಗದಿ ನಿಂತು |
ಪತಿತಪಾವನ ಮೂರ್ತಿಯ ಕರುಣಕ್ಕೆ ಎಣೆಯುಂಟೆ |
ಕೃತಭುಜ ತತಿಯೊಳಗಿಂತು ನೋಡಲು ಯಿಂಥ |
ಅತಿ ಸುಲಭ ದೈವವ ಕಾಣೆನೊ ಕಾಣೆನೊ |
ಕ್ಷಿತಿಯೊಳಗೀತನ ಬಿಟ್ಟವನ ಜನ್ಮಧಿಕು |
ಕೃತ ಅನ್ನಪಾನವೆ ಧಿಕು ಯಾಗಧ್ಯಾನವೆ ಧಿಕು |
ವೃತ ವೋದನವು ಧಿಕು ವಯಸು (ವ) ಕಾಯವೆ ಧಿಕು |
ತುತಿಸಿ ಕೊಂಡಾಡುವ ಕಾವ್ಯವೆ (ವಾಕ್ಯವೆ) ಧಿಕು ಧಿಕು |
ಹಿತದಿಂದ ಲೆಸಗುವ ತೀರ್ಥಯಾತ್ರೆಯೆ ಧಿಕು |
ಚತುರಾಶ್ರಮವೆ ಧಿಕು ಅವನ ಆಚಾರವೆ ಧಿಕು |

ಗತಿಯು ಸತ್ಕರ್ಮ ಆವಾವ ಸಾಧನ
ಸತತ ಮಾಡುವದೆಲ್ಲ ಧಿಕು ಧಿಕು ಎಂದಿಗೆ ।
ಮೃತ ಭರ್ತ ಸ್ತ್ರೀಯಳು ಋತುಸ್ನಾನ ಮಾಡಿದಂತೆ ।
ವ್ಯಥೆಯಲ್ಲದೆ ಸುಖ ಫಲ ಪ್ರಾಪುತವಿಲ್ಲ ।
ಸತುವ ಬುದ್ಧಿಯಿಂದ ನರನು ಬಿಂದೋದಕ ಅ ।
ರ್ಪಿತವೆಂದು ಕೊಡಲು ಪುಣ್ಯಮೇರು ತುಲ್ಯಮಾಡುವ ।
ಜಿತ ದೈತ್ಯ ಗುಣಪೂರ್ಣ ವಿಜಯ ವಿಠಲ ಶಾ ।
ಶ್ರಿತವಾಗಿ ಭಕ್ತರ ಮನದೊಳಗೆ ಆಡುತಿಪ್ಪ ॥೭॥

**ಜತೆ**

ಭೂತ ಭೂತಾಭಿಮಾನಿಗಳ ನೆನೆದು ಪರಂ ।
ಜೋತಿ ವಿಜಯ ವಿಠಲ ಸರ್ವ ಕರ್ತನೆನ್ನು । ॥೮॥



## ಪಂಚಕೋಶದ ವಿವರ

### ೩೭) ಸುಳಾದಿ

ರಾಗ : ಧ್ರುವತಾಳ

ನವ ಪಂಚ ಪಂಚವೇಲೆ ಆರಂಗುಲಿ ಪ್ರಮಾಣ ।
ಅವಯವಂಗಳ ಸಹಿತ ಯಿಪ್ಪ ಗಾತ್ರ ।
ನವಕೋಟಿ ರೋಮದಿಂದ ಯುಕ್ತವಾಗಿಪ್ಪದು
ನವಕೋಟಿ ದೇವತೆಗಳು ಅಭಿಮಾನ್ಯರು ।
ಇವರು ಶತಸ್ಥರೊಳು ಪಂಚಪ್ರಾಣರ ತರುವಾಯ ।
ಭವ ದೂರರಾಗಿ ಸರ್ವದಲ್ಲಿಪ್ಪರು ।
ನವ ದ್ವಿದ್ವಾರಗಳಿಂದ ಶೋಭಿಸುತಿದೆ ನೋಡೆ ।
ತ್ರಿವಿಧ ಗುಣಗಳುಂಟು ವೊಂದು ಕ್ಷಣಕೆ ।
ನವ ದ್ವಿಯಿಂದ್ರಯಂಗಳು ಅಲ್ಲಿಗಲ್ಲಿಗೆ ಯಿಪ್ಪ ।
ವಿವರವನ್ನೆ ತಿಳಿವುದು ಯಿವು ತೈಜಸದಿ ।
ದಿವಿಜೋತ್ತರು (ಮಾರುತ) ತತ್ತದ್ವ್ಯಾಪಾರವನ್ನೆ ಬಿಡದೆ ।
ತವಕದಿಂದಲಿ ಮಾಳ್ಪರು ಹರಿ ಪ್ರೇರಣೆ ।
ಸುವಿರುದ್ಧವಾದರು ಯಿವರಿಗೆ ದೋಷವಿಲ್ಲ ।
ಕವಿಗಳು ಕಾಣೋ ಸದಾ ಸಾಂಶರು ।
ಭುವನ ಹೊರಗೆ ಯಿವರು ತಮ ತಮ್ಮ ತತ್ವದಲ್ಲಿ ।
ಅವಿಕಾರ ವಾಗಿಪ್ಪದು ಅಣುಮಹದಲ್ಲಿ ।
ಅವಕಾಶ ಪ್ರದರಾಗಿ ವೊಬ್ಬೊಬ್ಬರೊಳಗೆ ।
ಕವಲಾ ಬುದ್ಧಿಯಿಲ್ಲದೆ ಪೊಂದಿಪ್ಪರು ।
ಇವು ಪೇಳಿದವು ಉಳಿದ ವಾಗ್ವಾದಿ ತತ್ವಸಂಖ್ಯ ।
ಪವನನಾಧಾರದಿಂದ ಬೆಳಗುತಿವಕೊ ।
ತಿವಿಷ್ಟಪ ರಂಗ ವೈಕಾರಿಕದಿಂದ ನಿರ್ಮಾಣ ।

ಹವಣಿಸಿ ಯಿಪ್ಪನು ಹರಿ ಸ್ವತಂತ್ರ ।
ಇವೆ ದೇಹದೊಳು ತಿಳಿ ಮಿಶ್ರಭಾವದಿ ವುಂಟು ।
ಶ್ರವಣಾದಿಗಳ ವ್ಯಾಪಾರ ಉತ್ತುಮವಾಗೆ ।
ಸವೆಯೊದ ಪದವಿಗೆ ಸಾಧ್ಯನವೈಯ್ಯಾ ।

ಜವನಗೇರಿಗೆ ಸಲ್ಲ ಪುಣ್ಯವೆ ಮಾಡುತ್ತ ।
ದಿವಸ ದಿವಸ ಕೀರ್ತಿವಂತನಾಹ ।
ದಿವಿಜ ವೈರಿಗಳು ವಿಪರೀತ ಕರ್ಮ ಮಾಡಿಸೆ ।
ಅವಿರಕ್ತನಾಗುವ ಮತಿದೂರನು

ಅವಕ್ರೀಯನಾಗಿ ಕೆಟ್ಟು ಪೋಗುವ ಶ್ರೀ ।
ಧವನ ನಾಮಾಮೃತ ಮರೆದು ಬಿಡುವ ।
ಇವಕ್ಕೆಲ್ಲ ಶ್ರೀಹರಿ ಮುಖ್ಯಕರ್ತನು ತಾನೆ ।
ಅವರವರ ಸಂಸ್ಕಾರ ದಂತೆ ನಡಿಸಿ ।
ಪವಮಾನ ಶಿವ ಪಾರ್ವತಿ ಯಿಂದ್ರಾರ್ಕ ಮಿಶ್ಯಾ ।
ದವರ ಭವದೆಡಿಗೆ ಜೀವನವ ವಯ್ಯದಂತೆ ।

ನವ ಭಕುತಿಯಿಂದ ಸಾಧನವ ಮಾಡುವಂತೆ ಕೇ ।
ಶವನು ಸುರರಿಗೆ ನೇಮಿಸಿ ದೈತ್ಯರಿಗೆ ।
ಅವ ಕೃಪೆಯಿಂದ ಶೀಕ್ಷಿಸಿ ಸಜ್ಜನರ ಮಾ ।
ರ್ಗವನ್ನು ಪೋಗದಂತೆ ಮಾಡುವನು ।
ಪವನಂತರ್ಯಾಮಿ ನಮ್ಮ ವಿಜಯ ವಿಠಲರೇಯ ।
ರವಿಯಂತೆ ಪೊಳೆವನು ಮಧ್ಯನಾಡಿಯಲ್ಲಿ ।

## ಝಂಪೆತಾಳ

ಅನ್ನಮಯ ಪ್ರಾಣಮಯ ಮನೊ ವಿ
ಜ್ಞಾನಮಯ ಆನಂದಮಯವೊ ।
ಇನಿತು ಪಂಚಕೋಶ ತನುವಿನೊಳಗೆ ವುಂಟು ।

ಘನವಾಗಿ ತಿಳಿದು ಗುಣಿಸು ನಿರಂತರದಿ
ಚಿನುಮಯ ಮೂರುತಿ ವಿಜಯ ವಿಠಲರೇಯ ।
ಇನಿತು ಪೆಸರಿನಿಂದ ಕರಿಸಿ ಕೊಂಬುವನು ಬಿಡದೆ ॥೨॥

### ತ್ರಿವಿಡಿತಾಳ

ಭೂಮಿ ಉದಕದಿಂದ ಅನ್ನಮಯ ವಾಗಿಪ್ಪುದು ।
ಆ ಮಾರುತ ಭೂತ ಅನಲಾಕಾಶದಲಿ ಪ್ರಾ ।
ಣಾಮಯ ಮನ ಮತ್ತೆ ಅಹಂಕಾರದಿಂದ ಮ ।
ನೋಮಯ ಮಹದಿಂದ ವಿಜ್ಞಾನಮಯವಯ್ಯ ।
ಕಾಮಜನನಿ ತತ್ವದಿಂದ ಆನಂದಮಯವೊ ।
ನಾಮವೆ ಯಿದು ಸಿದ್ಧ ವೊಂದೊಂದು ಬೆಚ್ಚಿಕೆ ।
ಶ್ರೀ ಮಾಯಾರಮಣನು ಯಿದೆ ಯಿದೆ ಪೆಸರಿನಲಿ ।
ಪ್ರೇಮದಿಂದ ಕರೆಸಿ ಕೋಳುತಲಿಪ್ಪ ।
ನಾಮಗಳುಂಟು ಮತ್ತೆ ಅನಿರುದ್ಧಾದಿ ಐದು ।
ಈ ಮಹ ಪಂಚಕೋಶದಲ್ಲಿ ವಾಸ ।
ಭೂಮಿ ಶನೇಶ್ಚರ ವರುಣ ಅನ್ನಮಯದಲ್ಲಿ ।
ಆ ಮರೀಚಿ ವಾಯು ಅಗ್ನಿ ಗಣಪ ಪ್ರಾ ।
ಣಾಮಯದಲ್ಲಿ ಇಂದ್ರ ರುದ್ರ ಮನೋಮಯದಲ್ಲಿ ।
ತಾಮರಸ ಪೀಠ ವಿಜ್ಞಾನಮಯದಲ್ಲಿ ।
ಸೋಮ ಸೋದರೆ ಲಕುಮಿ ಆನಂದಮಯದಲ್ಲಿ ।
ಕೋಮಲ ನಡತಿಯಲ್ಲಿ ವಾಸವಕ್ಕು ।
ಈ ಮೂರೆರಡು ಜಡದ್ರವ್ಯದಲ್ಲಿ ಯಿವರು ।
ಸ್ವಾಮಿಯ ಪೂಜಿಪರು ಅನಿರುದ್ಧಾದಿಗಳ ।
ಈ ಮಾತು ಲಾಲಿಸಿ ತಿಳಕೊಂಡ ಜನರಿಗೆ ।

ಯಾಮ ಯಾಮಕೆ ಬುದ್ಧಿ ನಿರ್ಮಲಿನೆ ।
ತಾಮಸ ಜನವೈರಿ ವಿಜಯ ವಿಠಲರೇಯ ।
ನೇಮಿಸಿ ಈಪರಿವಾಲಗ ಕೊಳುತಿಪ್ಪ ॥೩॥

ಅಟ್ಟತಾಳ

ಧರೆಯೊಳು ಮಾನವ ಉದಕಾನ್ನ ಉ ।
ದರದಲ್ಲಿರದರೆ ಅದರಲ್ಲಿ ಚತುರವಿಂಶತಿ ತತ್ವ ।
ಇರುತಿಪ್ಪವು ಕೇಳಿ ಮಿಶ್ರಭಾವದಿಂದ ।
ಪರಮಾಣು ಅತ್ಯಣು ವೊಂದನಂತವಾಗಿ ।
ಪರಿ ಪರಿ ಅಂಶಿ ಅಂಶಗಳಿಂದ ತತ್ವೇ ।
ಶರಸಹಿತವಾಗಿ ಉಪಚಯ ಕೊಡುತಲಿ ।
ಸ್ಮರಿಸಿ ಮಹಾತತ್ವ ವಿಜ್ಞಾನಮಯ ಈಶಮಾಯದಿಂದ ॥
ಧರಣಿಯೊಳಗೆ ವ್ಯಾಪಿಸಿಕೊಂಡಿಪ್ಪವು ನೋಡಿ ।
ಅರಿದವ ಬಲುಧನ್ಯ ತತ್ವ ಭಾಗಂಗಳ ।
ಅರುಹುವೆ ಪೃಥ್ವಿ ಗಂಧ ಘ್ರಾಣ ಉಪಸ್ಥ ।
ತರುವಾಯ ಜಲ ರಸ ಜಿಂಹ್ವೆ ಪಾಯು ನಾ ।
ಲ್ಕೆರಡು (೮) ತತ್ವಂಗಳು ಅನ್ನಮಯ ಕೋಶಕ್ಕೆ ।
ನಿರುತ ಉಪಚಯ ಯೀಕಿ ಭೂತವಿದೆ ।
ಸರಿಯೆನ್ನು ತೇಜಸ್ಸು ರೂಪ ಚಕ್ಷುಸ ಪಾದ ।
ಚರಿಸುವ ಮಾರುತ ಸ್ಪರಿಶ ತ್ವಕು ಪಾಣಿ ।
ಮಿರುಗುವ ಗಗನ ಶಬ್ದ ಶ್ರೋತ್ರ ವಾಕು ಹ ।
ನ್ನೆರಡು (೧೨) ತತ್ವಂಗಳು ಪ್ರಾಣಮಯದಲ್ಲಿ ।
ಇರುತಿಪ್ಪವು ಕೇಳಿ ಉಪಚಯ ವಾಗುತ್ತ ।
ಮರಳೆ ಮನಸು ಅಹಂಕಾರ (೨) ಮನೋಮಯ ।
ಬೆರಸಿ ಕೊಂಡಿಪ್ಪುದು ಉಪಚಯ ಕೊಡುತಲಿ ।
ಸ್ಮರಿಸಿ ಮಹಾತತ್ವ (೧) ವಿಜ್ಞಾನ ಮಯದಲ್ಲಿ ।

ಭರಿತ ವಾಗಿಪ್ಪದು ದಿನಪ್ರತಿ ಉಪಚಯ ।
ಪರಮ ಶೋಭಿತವಾದ ಅವ್ಯಕ್ತ ತತ್ವ (೧) ನಿಂ ।
ದಿರದೆ ಆನಂದಮಯದಲ್ಲಿ ಸೇರೋದು ।
ಸ್ಥಿರವಕ್ಕು ಈ ಪರಿ ತತ್ವ ಭಾಗದಲ್ಲಿ ವಿ ।
ವರಗಳ ತಿಳಿವದು ಸ್ಥೂಲ ಸೂಕ್ಷ್ಮವೆಂದು ।
ಪುರುಷೋತ್ತಮ ನಮ್ಮ ವಿಜಯ ವಿಠಲರೇಯ ।
ಕರುಣಾಕರನಾಗಿ ಸರ್ವರೊಳಗೆ ಯಿಪ್ಪ

### ಆದಿತಾಳ

ತತು ತತು ತತ್ವಭಾಗ ತತು ತತು ಮಯದಲ್ಲಿ ।
ಸತತಪೋಗಿ ವಿಲೀನ ವಾಗುವುವು ।
ಗತಿ ತಪ್ಪದಂತೆ ನಿತ್ಯಗಾತ್ರ ದೊಳಗೀಪರಿ ।
ಮಿತವುಂಟು ಕಾರಣ ಕಾರ್ಯ ತತ್ವಗಳೆಂದು ।
ಅತಿಶಯವಾದ ಸ್ಥೂಲವಿಟಮೂತ್ರ ಮಜ್ಜಾಸ್ಥಿಯು ।
(ಭೌ) ಭೌತಿಕದಲ್ಲಿ ಯಿದ್ದು ಕೋಶದಲ್ಲಿ ।
ಅತಿ ಸೂಕ್ಷ್ಮ ಕಾರ್ಯ ತತ್ವನಿಕರ ಅನಿರುದ್ಧದಲ್ಲಿ ।
ಹಿತವಾಗಿಪ್ಪದು ಅಲ್ಲಿಂದಾಚೇಲಿ ಲಿಂಗದಲ್ಲಿ ।
ಚತುರವಿಂಶತಿ ತತ್ವಕಾರಣ ರೂಪವಾಗಿ ।
ಪ್ರತಿ ಪ್ರತಿ ದಿವಸಕ್ಕೆ ಕೊಡುತಿಪ್ಪವು ಭ ।
ರಿತವಾದ ಕಾಲಕ್ಕು ಹೆಚ್ಚು ಕುಂದಗಳಿಲ್ಲ ।
ತತು ವೇಶರು ಯಿಲ್ಲ ಮುಖ್ಯಾಭಿಮಾನಿ ಲಕುಮಿ ।
ಶತಾನಂದ ವಾಯು ಸರಸ್ವತಿ ಭಾರತಿ ಗಳಂಟು ।
ತೃತಿಯ ಪರಿಚ್ಛೇದವಾಗಿದ್ದ ಲಿಂಗದೇಹ ।
ಸಿತದಲ್ಲಿ ಅವ್ಯಕ್ತ ಮಹ ಅಹಂಕಾರ ಮನಸು ರ ।
ಕುತ ವರ್ಣದಲ್ಲಿ ಹತ್ತು ಯಿಂದ್ರಿಯಂಗಳು ವು ।

ನ್ನತ ಕಪ್ಪಿನಲಿ ಪಂಚ ತನ್ಮಾತ್ರೆಗಳು ಭೂತ ।
ತತಿಗಳಂಟು ಯಿವು ಪ್ರಾಚುರ್ಯದಲಿ ನೋಡಿ ।
ಮತಿವಂತರು ಕೇಳಿ ಯಿವು ಅನಾದಿಯಿಂದ ।
ಜಿತವಾಗಿ ಹತ್ತಿಕೊಂಡಿಪ್ಪವು ಲಿಂಗದೊಡನೆ ।
ಇತರ ಕಾರ್ಯ ಭಾವಕ್ಕೆ ಯಿವೆ ಮುಖ್ಯಯಿವೆ ಮುಖ್ಯ ।
ಖತಿ ಗೊಳದಿರಿ ಜನರು ಸಿದ್ಧಾಂತವೆನ್ನಿ ಮುಂದೆ ।
ತತುವ ವಿಭಾಗವ ಮಾಡಿ ವ್ಯಾನನೆಂಬೊ ಮಾ
ರುತ ಸೇರಿಸುತ್ತಿಪ್ಪನಲ್ಲಿಗಲ್ಲಿಗೆ ವೈದು ।
ಪತಿತ ಪಾವನ ನಮ್ಮ ವಿಜಯ ವಿಠಲರೇಯ ಸ ।
ದ್ಗತಿಯನೆ ಕೊಡುವನು ಯಿದನು ತಿಳಿದವಂಗೆ ।೫॥

**ಜತೆ**

ಪಂಚಕೋಶಗಳಲ್ಲಿ ಯಿಂಥ ಮಹಿಮೆಯುಂಟು ವಿ
ರಂಚಿ ಜನಕ ವಿಜಯ ವಿಠಲ ನಿಯಾಮಕ ॥೬॥





ಶ್ರೀ ಜಗನ್ನಾಥ ವಿಠಲ ವಿರಚಿತ

## ಪಂಚಕೋಶ ಆವರಣ

### ೩೮) ಸುಳಾದಿ

ರಾಗ: ವಸಂತ ಭೈರವಿ ಝಂಪಿತಾಳ

ತಿಳಿವದನ್ನಮಯಾದಿ ಕೋಶಗಳನು
ಇಳಿಯೊಳಚ್ಚುತನ ದಾಸರು ನಿತ್ಯದಲ್ಲಿ ಇನಿತು ।ಪಲ್ಲ।

ಮೇದಿನೀ ಸಲಿಲಾನ್ನಮಯ ವಿಹಾಯಸ ವಾಯು ।
ಆದಿತ್ಯ ಮುಖ್ಯಪ್ರಾಣ ಮನೋಮಯಕೆ ॥
ಆದುದು ಮನ ಅಹಂಕಾರ ವಿಜ್ಞಾನಮಯ ।
ವೇದ ತತ್ವಾನಂದಮಯಕೆ ಅವ್ಯಕ್ತವನು ॥೧॥

ಅಂಬುಜ ಭವಾಂಡ ಪಿಂಡಾಂಡಕ್ಕೆ ಈತತ್ವ ।
ಒಂಭತ್ತು ಆವರಣ ವೆಂದೆನಿಪವು ।
ಕಂಬು ಪಾಣಿಯರೂಪ ಲಕ್ಷ್ಮಿರೂಪವು ಪಂಚ ।
ಇಂಬುಗೊಂಡಿಹ್ಯದು ಚಿಂತಿಪುದು ಭೂಸುರರು ॥೨॥

ಅನಿರುದ್ಧ ಶಾಂತಿ ಪ್ರದ್ಯುಮ್ನ ಕೃತಿ ಸಂಕರು ।
ಷಣ ಜಯಾ ಶ್ರೀ ವಾಸುದೇವ ಮಾಯಾ ॥
ಘನ ಸುಲಕ್ಷಣ ಲಕ್ಷ್ಮಿ ನಾರಾಯಣರು ಮುಖ್ಯ ।
ರೆನಿಸುವರು ಪಂಚಕೋಶದಲಿ ಯೆಂದೆಂದು ॥೩॥

ಪ್ರಾಣಪಾನ ವ್ಯಾನೋದಾನ ಸುಸಮಾನ ಪಂ ।
ಚಾನಿಳನ ರೂಪ ವಲ್ಲಿಹ್ಯವು ಮತ್ತೆ ॥

ದಾನವಾರಿಗಳಿಹ್ಯರು ಭೂತ ಮಾತ್ರವು ಕರ್ಮ ।
ಜ್ಞಾನೇಂದ್ರಿಯಗಳು ತನ್ನಿಷ್ಟ ವಾಗಿಹ್ಯವಲ್ಲಿ ||೪||

ಭೂ ಶನೇಶ್ಚರ ವರುಣ ಸುರನದಿಗಳನ್ನ ಮಯ ।
ಕೋಶದೊಳಗಿರುತಿಹ್ಯರು ಪ್ರಾಣಮಯದಿ ।
ಮೇಷ ವಾಹನ ಪ್ರವಾಹ ವಾಯು ಪ್ರಾವಹಿ ಮಹ ।
ಕಾಶಾಧಿಪತಿ ಗಣಪರಧಿಪರೆಂದೆನಿಸುವರು ||೫||

ಕಾಮೇಂದ್ರ ಶಿವ ರತೀಂದ್ರಾಣಿ ಪಾರ್ವತಿ ಮುಖ್ಯ ।
ರೀ ಮನೋಮಯಕಧಿಪರೆನಿಸುತಿಹರು ॥
ತಾಮರಸಭವ ವಾಯು ವಾಣಿ ಭಾರತಿ ಮುಖ್ಯ ।
ಸ್ವಾಮಿಗಳು (ಯೆ) ಎನಿಸುವರು ವಿಜ್ಞಾನಕೋಶದಲಿ ||೬||

ಆನಂದಮಯ ಕೋಶಗಭಿಮಾನಿ ಮಹಲಕುಮಿ ।
ಶ್ರೀನಿವಾಸನು ಪಂಚರೂಪಾತ್ಮಕ ।
ಈ ನಿರ್ಜರರೋಳಿದ್ದು ತತ್ತದಾಂಹ್ವಯನಾಗಿ ।
ಪಾನೀಯಜ ಭವಾಂಡದೊಳಗಿಪ್ಪ ಕರುಣಿ ||೭||

ಪೃಥಿವಿ ಗಂಧವು ಘ್ರಾಣೋಪಸ್ಥವು ರಸ ಜಿಂಹೆ ।
ಪ್ರಥಮ ಕೋಶದಿ ಪಾಯು ಅಪ್ಪತತ್ವಾ ॥
ದ್ವಿತೀಯ ಕೋಶದಿ ತೇಜರೂಪ ಚಕ್ಷು ಪಾದ ।
ಪ್ರಥಮಾಂಗ ಸ್ಪರುಶ ತ್ವಕು ಪಾಣಿ ತತ್ವಗಳಿಹ್ಯವು ||೮||

ಆಕಾಶ ಶಬ್ದ ಶ್ರೋತವು ಪಿಂತೆ ಪೇಳ್ದಷ್ಟು ।
ವಾಕು ಪ್ರಾಣದಿತತ್ವ ದ್ವಾದಶಕವು ॥
ಶ್ರೀಕಂಠ ತತ್ವ ಮನೋಮಯದಿ ವಿಜ್ಞಾನ ।
ಕಾ ಕಮಲಭವಾನಂದ ಮಯಕೆ ಅವ್ಯಕ್ತವನು ||೯||

ಸ್ಥೂಲ ದೇಹಕೆ ಯಿನಿತು ಲಿಂಗ ತನುವಿಲಿತತ್ವ ।
ಜಾಲ ಸೂಕ್ಷ್ಮಗಳಿಹ್ಯವು ಗುಣಭೇದದಿ ॥
ಪೇಳುವೆನು ಅವ್ಯಕ್ತ ಮಹದಹಾಂಕಾರ ಮನ ।
ವ್ಯಾಳ್ಯೈಸಿ ಯಿಹ್ಯವು ಸತ್ವ ಪರಿಚ್ಛೇದದಲಿ ॥೧೦॥

ರಜೋ ಪರಿಚ್ಛೇದದಲಿ ಜ್ಞಾನ ಕರ್ಮೇಂದ್ರಿಯವು ।
ರಜನಿ ಗುಣದೀ ಮಾತ್ರ ಭೂತಯಿಹ್ಯವು ॥
ಎಜಿಸು ಈ ತತ್ವಾಭಿಮಾನಿ ದಿವಿಜರ ನರಿತು ।
ವೃಜಿನ ವರ್ಜಿತನಾಗಿ ಸುಪದ ವೈದು ಮನಜ ॥೧೧॥

ಭೂಮ್ಯಪ್ಸು ಅನ್ನಮಯ ನಳ ನಿಳಾಗಸ ಪ್ರಾಣಾ ।
ಹಂ ಮನೋ ಮಯ ಮಹ ಅವ್ಯಕ್ತಗ ॥
ನಮ್ಮಹರಿ ವಿಜ್ಞಾನಮಯ ನೆನಿಸಿ ಗುರು ।
ಸಮ್ಮೀರ ನೊಳಗಿದ್ದು ಪಾಲಿಸುವ ಜಗವ ॥೧೨॥

ಪಂಚಕೋಶದ ವಿವರ ತಿಳಿದ ಮ(ಹಾ)ತ್ಮರಿಗೆ ।
ಕಿಂಚಿತಾದರು ದೋಷ ಬರಲರಿಯದು ॥
ಪಂಚ ಮಾರ್ಗಣ ಪಿತ ಜಗನ್ನಾಥ ವಿಠಲನು ।
ಸಂಚಿತಾಗಾಮಿ ಕರ್ಮಗಳ ಫಲ ಬಿಡಿಸುವದು ॥೧೩॥



ಪ್ರಾಣೇಶ ವಿಠಲ ಕೃತ

## ಪಂಚಕೋಶದ ವಿವರ

### ೩೯) ಉಗಾಭೋಗ

ರಾಗ : ಶಂಕರಾಭರಣ ತ್ರಿವಿಡಿ ತಾಳ

ಒಂದರೊಳೆಂಟೆ ಒಂದರೊಳಘನ್ನೆರಡೆನೊ ।
ಒಂದರೊಳೆರಡೊಂದೊಂದ ರೊಳೊಂದೆನು ।
ಇಂದಿರೇಶಾರಲ್ಲ್ಯಾವ ನಾಮಾದಲಿಹ್ಯರು ಆ ।
ಆನಂದ ತೀರ್ಥರಾವ ನಾಮದಲಿಹ್ಯರು ।
ವೃಂದಾಕರು ಅಲ್ಲಲ್ಲಿರುತಿಹರು ಹದಿನೆಂಟು ।
ಮಂದಿಸಿರಿ ಕೇಶವ ಯಿರುತಿಹರು ।
ಎಂದು ತಿಳಿಯದವ ಬಾಳಲ್ಯಾತಕೆ ಹದ್ದಿ ।
ನಂದದಿ ಬಹುಕಾಲ ವ್ಯರ್ಥವಾಗಿ ।
ಸಿಂಧು ಶಯನ ಸಿರಿ ಪ್ರಾಣೇಶವಿಠಲ ಅವ ।
ಗೆಂದೆಂದು ಪೊಲಿಯಾನು ಕೇಳಿ ಸಜ್ಜನರು ॥೧॥

—o—

(೧) ಅನ್ನಮಯ ಕೋಶದಿ– (೧) ಪೃಥ್ವಿ (೨) ಗಂಧ (೩) ಘ್ರಾಣ (೪) ಉಪಸ್ಥ (೫) ಅಪ್ಪು (೬) ರಸ (೭) ಜಿಂಹ್ವೆ (೮) ಪಾಯು ಎಂಟು ತತ್ವಗಳು ಅನಿರದ್ಧ, ಶಾಂತಿ, ಪ್ರಾಣ ಮತ್ತು ತತ್ವಾಭಿಮಾನಿಗಳು.

(೨) ಪ್ರಾಣಮಯ ಕೋಶದಲ್ಲಿ– (೧) ತೇಜ (೨) ರೂಪ (೩) ಚಕ್ಷು (೪) ಪಾದ (೫) ವಾಯು (೬) ಸ್ಪರುಶ (೭) ತ್ವಕು (೮) ಪಾಣಿ (೯) ಆಕಾಶ (೧೦) ಶಬ್ದ (೧೧) ಶ್ರೋತ್ರ (೧೨) ವಾಕು ಪ್ರದ್ಯುಮ್ನ, ಕೃತಿದೇವಿ ಅಪಾನ ಮತ್ತು ತತ್ವಾಭಿಮಾನಿಗಳು

(೩) ಮನೋಮಯದಿ – (೧) ಮನಸ್ಸು (೨) ಅಹಂಕಾರ, ಸಂಕರುಷಣ, ಜಯಾದೇವಿ, ವ್ಯಾನರೂಪಿ ವಾಯು ತತ್ವಾಭಿಮಾನಿ

(೪) ವಿಜ್ಞಾನಮಯದಿ – (೧) ಮಹತತ್ವ (೨) ವಾಸುದೇವ, ಮಾಯಾ, ಸಮಾನವಾಯು, ಬ್ರಹ್ಮ

(೫) ಆನಂದಮಯದಿ – (೧) ಅವ್ಯಕ್ತತತ್ವ, ನಾರಾಯಣ, ಲಕ್ಷ್ಮಿ ಉದಾನವಾಯು



## ಜೀವನಿಗೆ ಇರುವ (೫) ಶರೀರದಲ್ಲಿ ಐದು ಕೋಶಗಳ ವಿವರ

### ೪೦) ಸುಳಾದಿ

ರಾಗ:– ಶಂಕರಾಭರಣ ಧ್ರುವತಾಳ

ಚಿದ್ದೇಹಕಾರ ಆನಂದಮಯವಯ್ಯ ।
ಬದ್ಧ ದೇಹಕಾರ ವಿಜ್ಞಾನಮಯವಯ್ಯ ಅನಿ ।
ರುದ್ಧ ದೇಹಾಕಾರ ಮನೋಮಯವಯ್ಯ ।
ಶುದ್ಧ ಪ್ರಾಕೃತಾಕಾರ ಪ್ರಾಣಮಯವಯ್ಯ ।
ಶುದ್ಧ ಭೌತಿಕಾಕಾರ ಅನ್ನಮಯವಯ್ಯ ವಾ ।
ಸುದೇವಾದಿ ಮೂರುತಿ ನಾರಾಯಣ ।
ಚಿದ್ದೇಹದಲಿ ತಿಳಿ ಆನಂದಮಯಗೆ ।
ಪದ್ಧತಿಯುಂಟು ಉಳಿದದಕೆ ಚತುರನಾಮ ।
ವಿದ್ಯುಚ್ಛುಭ್ರ ರಕ್ತಪೀತ ಶಾಮವರ್ನ ।
ಹೃದ್ಗತ ತತ್ತದ್ದೇಹವಾಸ ಅನಿ ।
ರುದ್ಧಾದಿ ಮೂರ್ತಿಗಳ ವ್ಯುತ್ಕ್ರಮದಿಂದ ಗುಣಿಸು ಅ ।
ನಾದ್ಯ ವಿದ್ಯಾಕರ್ಮ ಕಾಲ ಗುಣತತ್ವ ।
ಹೊದ್ದಿಕೊಂಡಿಪ್ಪವಯ್ಯಾ ಆ ಲಿಂಗದಲ್ಲಿ ಅಯ್ಯ ಅಯ್ಯ ಅಯ್ಯ ।
ಚಿದ್ದೇಹಾತ್ಮಕ ಜೀವನ ಆಕೃತಿ ಅವ್ಯಕ್ತಮ ।
ಹದ್ದಾಹಂಕಾರ ಚೇತನ ಚಿತ್ತ ।
ಬುದ್ಧಿ ಮನಸು ಸರ್ವೇಂದ್ರಿಯಗಳು ಮಾತ್ರಭೂತ ಈ ಅ ।
ಭಿಧಾನ ವುಂಟು ನಿತ್ಯ ಕರೆಸುವವಯ್ಯ ।
ಪದ್ಮಾಲಯ ಆನಂದ ವಿಜ್ಞಾನ ಬೊಮ್ಮ ಪ್ರಾಣ ।
ರುದ್ರ ಮನೋಮಯ ಯಿಂದ್ರಾದ್ಯಮರರು ।
ಸದ್ದೇಶ ಮಿತ್ರಾದಿಗಳು ವಿಹಿತ ತಿಳಿದು ।

ತದ್ಭಕ್ತಿಯನ್ನು ಮಾಡು ತವಕದಿಂದ |
ಪದ್ಧತಿ ಪಂಚಮೂರ್ತಿ ಪ್ರತ್ತೀಕ ಪ್ರತ್ತೀಕ ತ |
ತ್ತ ದೇಹದಲ್ಲಿವಾಸ ಉರಭಾಗದಲ್ಲಿದ್ದ ಆತ್ಮನಾಮಾಂತರ |
ಸದ್ಗುಣ ಗಣಸಾಂದ್ರ ತುರ್ಯ ಕೃತ್ವಾಸಾ ? ಉ |
ರದ್ದೆಶಯಲ್ಲಿ ಆತ್ಮ ಪ್ರಾಜ್ಞಮೂರ್ತಿ |
ನಿರ್ಧಾರ ಕೇಳಿ ಕಡಿಮೆ ನಾಲ್ಕು ಸ್ಥಾನಗಳು |
ಹೃದ್ಗುಹ ಕಂಠ ಅಕ್ಷಿ ಮೂರ್ದ್ನಿಭಾಗ |
ಇದ್ದ ರೂಪಗಳಿಗೆ ನಾರಾಯಣನೆ ತುರ್ಯ ವಾ |
ಸುದೇವ ವಿಶ್ವ ಸಂಕರುಷಣ ತೈಜಸ |
ಪ್ರದ್ಯುಮ್ನ ಉರಭಾಗದಲ್ಲಿದ್ದ ಆತ್ಮನೆನ್ನಿ ಅನಿ |
ರುದ್ಧ ಭಗವಂತ ಪ್ರಾಜ್ಞನೆನ್ನಿ |
ಈ ಧರೆಯೊಳು ದೇಹಧಾರಿಗೆ ಸುಷುಪ್ತಿಯಾ |
ಸಿದ್ಧ ಮೂರ್ಧಾವಸ್ಥಾ ಸ್ವಪ್ನ ಜಾಗ್ರತ |
ವಿದ್ಯೆ ಅಪರೋಕ್ಷಿಯಿಂದ ಚತುರಾವಸ್ಥಿ ಅನಿ |
ರುದ್ಧಾದಿ ಭಗವದ್ರೂಪ ಪ್ರಾಜ್ಞಾದಿ ನಾಮ |
ಮಧ್ವವಲ್ಲಭ ನಮ್ಮ ವಿಜಯ ವಿಠಲರೇಯ |
ಮೂರ್ಧ್ನಿ ಮೇಲೆಯಿಪ್ಪ ತುರ್ಯ ಮುಕ್ತಿನೇಮಕ ||೧||

### ಮಟ್ಟತಾಳ

ಲಿಂಗ ಅನಿರುದ್ಧ ಪ್ರಾಕೃತ ಭೌತಿಕ |
ಹಿಂಗದೆ ನಾಲ್ಕಕ್ಕೆ ಷೋಡಶ ಕಳೆಗಳು |
ಸಂಗವಾಗಿವೆ ನೋಡು ಕಣ್ಣಿಗೆ ಕಾಣಿಸವು ಪು |
ಷ್ಪಂಗಳಿಗೆ ಶುದ್ಧ ಗಂಧ ಲೇಪನ ವಾದಂತೆ |
ಇಂಗಿತವಾಗಿ ಜಡ ಪ್ರಕೃತಿ ಕಲೆ |
ಮಂಗಳ ಕಾಂತಿಯಿಂದ ನಾಮಾಂತರ ಭೇದ |

ಜಂಗಮ ಸ್ಥಾವರಕೆ ನೆಲೆಯಾಗಿಪ್ಪವಯ್ಯ ।
ತುಂಗ ವಿಕ್ರಮ ಹರಿ ವಿಜಯ ವಿಠಲರೇಯ ।
ಇಂಗಡ ಮಾಡುವ ಗುಣ ತ್ರಯಗಳ ಬೆರಸಿ ॥೨॥

## ತ್ರಿವಿಡಿ ತಾಳ

ಪ್ರಾಣ ಶ್ರದ್ಧ ರುದ್ರ ಇಂದ್ರಾಗ್ನಿ ವರುಣ ಗ ।
ಜಾನನ ಪ್ರವಾಹ ಪಾವಕ ಪರ್ಜನ್ಯ ಕೃ ।
ಶಾನನ ಮಡದಿ ಮತ್ತೆ ಚಂದ್ರಸುತ ಉಷಾರವಿ ।
ಸೂನು ಪುಷ್ಕರ ಸೋಮ ಹದಿನಾರು ಜನಾರಂಭಿಸಿ ।
ಮಾನಿಗಳಾಗಿಹರು ಗುಣಗಳಲ್ಲಿ ।
ಈ ನಾಲ್ಕು ಸ್ಥಳದಲ್ಲಿ ವಿಚಾರಾಂಶವೆ ವುಂಟು ।
ಜ್ಞಾನಿಗಳು ತಿಳಿದು ನಿತ್ಯದಲ್ಲಿ ।
ಧ್ಯಾನವನ್ನೆ ಮಾಡಿ ಭೂತ ಪ್ರಾಕೃತ ಸಂ
ಧಾನನಿರುದ್ಧ ಲಿಂಗ ವಿಡಿದು ।
ನಾನಾ ಪ್ರಕಾರ ಉಪಚಾರಣೆ ಉಪಾಸನ ।
ಪ್ರಾಣಾ ಪ್ರಾಣಾರ ತನಕಾ ಅಪರೋಕ್ಷದಿ ।
ಮಾಣದೆ ಸಾಮಾನ್ಯ ಜ್ಞಾನ ಭಕುತಿಯಿನಿತು ಪೂಜಿಸಬೇಕು ।
ಶ್ರೀನಾಥ ಪ್ರತಿಮೆ ಬಹುವಿಧ ವುಂಟು ನಿ ।
ಧಾನಿಸು ಪರಮಾತ್ಮ ಪ್ರೇರಣೆಯಂತೆ ।
ಮೇಣಾವತಾರ ಅಂತರ ಬಾಹಿರ ಸರ್ವ ।
ಕಾಣುತ ಬಗೆಸಿದ್ಧ ಸಾಧನ ಭೇಧ ।
ಆನಂದ ಮೂರುತಿ ವಿಜಯ ವಿಠಲರೇಯ ।
ನೀನೆ ಯೆಂದವನಿಗೆ ನಿಶ್ಚಯ ಮತಿ ಕೊಡುವ ॥೩॥

## ಅಟ್ಟತಾಳ

ಮುಕ್ತ ಜಾಗ್ರತ ಸ್ವಪ್ನಮೂರ್ಛೆ ಸುಷುಪ್ತಿಯು ।
ಉಕ್ತ ಕ್ರಮದಿಂದ ನಿಯಾಮಕನಾಗಿ ।

ನಕ್ತ ಹಗಲು ಬಿಡದಾವವ ಕಾಲಕ್ಕೆ ।
ವ್ಯಕ್ತ ಮಾಡಿಕೊಡುವ ವೈಚಿತ್ರ ಸಂಪೂರ್ಣ ।
ಶಕ್ತ ಸಾರ್ವಭೌಮ ಸತತಪ್ರಾಕೃತ ನಿತ್ಯ ।
ಮುಕ್ತಾಳು ಮುಕ್ತರು ತುರಿಯನ್ನ ಧ್ಯಾನವ ।
ಮುಕ್ತ ಪ್ರಾಯರು ಬ್ರಹ್ಮರುದ್ರ ಇಂದ್ರಾದ್ಯರು ।
ತ್ಯಕ್ತ ದೋಷರಾಗಿ ದೇಹದೊಳಿಪ್ಪರು ।
ಉಕ್ತಿಯ ಕೇಳೋದು ಯಿವೆ ಮೂರ್ತಿಗಳೆಲ್ಲ ।
ಭಕ್ತಿಯಿಂದಲಿ ತಮ್ಮ ಸ್ವದೇಹದಲ್ಲಿ ಆ ।
ಸಕ್ತರಾಗಿ ಧ್ಯಾನವ ಮಾಡಿ ಕೇವಲ ।
ಭಕ್ತ ಜನರು ಸ್ವಪ್ನದಲಿ ಸಾರಿಸಾರಿದರು ವಿ ।
ರಕ್ತಿ ಮಾರ್ಗದಿಂದ ರುದ್ರೇಂದ್ರ ಗಣಪರು ।
ಭುಕ್ತ ಶೇಷರು ಕಾಣೊ ಆತರುವಾಯ ಅ ।
ವ್ಯಕ್ತಾವರಣವೆ ಪಂಚಕೋಶದಲ್ಲಿದ್ದ ।
ಭಕ್ತವತ್ಸಲನೈದು ರೂಪವ ಭಜಿಸಿ ಅಭಿ ।
ವ್ಯಕ್ತ ಗುಣಗಳಿಂದ ಅಧಿಕಾರಿಗಳಾಗಿ ।
ಮುಕ್ತಿಸಾಧಿಸುವರು ಬಹುರೂಪಗಳಿಂದ ।
ರಕ್ತರಮಣ ನಮ್ಮ ವಿಜಯ ವಿಠಲರೇಯ (ನಿಮ್ಮನು) ।
ಮುಕ್ತರ ಮಾಡುವ ಧೇನಿಪ ಭಕ್ತರ ಭಕ್ತಿಯ ಕೈಕೊಂಡು ||೪||

**ಆದಿತಾಳ**

ಪಂಚ ಪ್ರಾಜ್ಞಮೂರ್ತಿಗಳ ವುಪಾಸನೆಯ ಮಾಡು ।
ಪಂಚಸ್ಥಾನದಲ್ಲಿ ಭೂತಾದಿಯಲ್ಲಿ ತಿಳಿದು ।
ಪಂಚಸೂತ್ರ ರೂಪಗಳು ಅನುದಿನ ದೇಹದೊಳು ।
ಸಂಚಾರವನ್ನೆ ಮಾಳ್ಪ ಸಾಕಲ್ಯವನ್ನೆ ಗ್ರಹಿಸು ।

ಕಿಂಚಿತ್ಕಾಲವಾದರು ಆತ್ಮನ್ನ ಮರಿಯದೆ ಸ |
ಕಿಂಚನನಾಗು ಮಹಜ್ಞಾನ ವಿತ್ತದಿಂದ |
ಮುಂಚಿನ ಸಂಸ್ಕಾರ ಕೆಡದಂಕೆ ಪ್ರವರ್ತಿಸು |
ಪಂಚಮುಖಾದ್ಯರು ಸರ್ವ ಪ್ರಾಜ್ಞನ ಭಜಿಸಿ |
ಅಂಚ ಜ್ಞಾನದಿಂದ ತತ್ತ ತತ್ವಾದಲ್ಲಿ ಪ್ರ
ಪಂಚ ಹಿಂದುಗೈಸಿ ಸುಖಿಸುವರು ಚನ್ನಾಗಿ |
ಚಂಚಲ ಬುದ್ಧಿಯ ಬಿಡು ದೇಹದೊಳಗೆ ನಿತ್ಯ |
ಮಿಂಚುವ ದೇವನ್ನ ಸಕಲ ಠಾವಿಲಿನೋಡು |
ಕೊಂಚವಲ್ಲವು ಕಾಣೋ ಸುಮ್ಮನೆ ದೊರೆವದಲ್ಲ |
ಹಿಂಚಿನ ಪುಣ್ಯದಿಂದ ಸಿದ್ಧಿಸುವದು ಯಿಂದು |
ವಂಚಕ ರೊಡನಾಡಿ ವಾರ್ಥಿಕ ನಾಗದಿರು |
ಸಂಚಿತಾಗಾಮಿ ಬಿಡದು ಈ ಪರಿ ನೆಸಗದಿರೆ |
ಪಂಚವರ್ಣವಾಹನ್ನ ವಿಜಯ ವಿಠಲನ್ನ ವಿ |
ರಂಚಿ ಪದಸ್ಥನೊಳು ಧ್ಯಾನಿಸು ಮುನಿಯಾಗಿ ||೫||

ಜತೆ

ಅತೀಂದ್ರತಿ ಜ್ಞಾನದಲಿ ದೇಹ ದೊಳಗೆಯಿದ್ದ |
ಚತುರ ಮೂರುತಿ ಪ್ರಾಜ್ಞ ವಿಜಯ ವಿಠಲನನೋಡು ||೬||



## ೪೧) ಸುಳಾದಿ

ರಾಗ:- ಭೈರವಿ ಧ್ರುವತಾಳ

ಆತ್ಮಣು ಜೀವವಿದೆ ಅನಾದಿಯಿಂದ ಸಿದ್ಧ ।
ನಿತ್ಯವಾಗಿಪ್ಪದು ಶ್ರೀ ಹರಿಯಾ ।
ಭೃತ್ಯನೆಂದೆನಿಸದು ಬಹುಕಾಲದಲ್ಲಿ ತಪ್ಪದಲೆ ।
ಸತ್ಯವೊಯಿದೆ ನಿಜ ಶ್ರುತಿಯಲ್ಲಿ ಸಾರಿಸಾರಿಕೃತ ।
ಕೃತ್ಯವಾಗುತಿಪ್ಪರು ಬ್ರಹ್ಮಾದ್ಯರು ।
ಸತ್ಯಲೋಕಾಧೀಶ ಸರ್ವ ಜೀವ(ರೊಳು)ಗಳೊಳು ।
ಸ್ತುತ್ಯನು ಕಾಣೋ ಸರ್ವದ ನಿರ್ಮಲ ।
ಕೃತ್ತಿವಾಸದಿಂದಲಿಯಿತ್ತ ವುಳ್ಳವರಾರು ಪ್ರಾ ।
ಕೃತ ಬದ್ಧವಾದ ಕಲಿ ಆವಿಷ್ಟ ।
ತತ್ತ್ವಳ ಗೊಳಿಸದು ಅವರವರ ಯೋಗ್ಯತದ ।
ನಿತ್ತು ಕಾಲವನ್ನು ಪರಿಕ್ಷಿಸಿ ।
ಸತ್ವಾದಿ ಪರಿಚ್ಛೇದವುಳ್ಳ ಲಿಂಗದೇಹ ।
ಹತ್ತಿಕೊಂಡಿಪ್ಪದು ತ್ರಿವಿಧರಿಗೆ ।
ಉತ್ತಮ ಜ್ಞಾನಿಗಳಿಗೆ ಮೊದಲು ಪರಿಚ್ಛೇಧ ।
ಸತ್ವಗುಣದ ಆವರಕ ವೆನ್ನಿ ।
ನಿತ್ಯ ಸಂಸಾರಿಗಳಿಗೆ ರಾಜಸಗುಣವಹುದು ।
ಮತ್ತೆ ತಮೋಯೋಗ್ಯರಿಗೆ ತಮೊಪರಿಚ್ಛೇದ ।
ಪ್ರತ್ಯೇಕವಾಗಿಪ್ಪೊದು ಒಂದಕ್ಕೊಂದು ಬಿಡದೆ ।
ಜತ್ತಾಗಿ ಕಾರಣವೆನಿಸಿ ಕೊಳುತ ।
ಎತ್ತ ನೋಡಿದರತ್ತ ಜೀವನ ಪ್ರಕಾಶ ।
ಸುತ್ತುವಂತೆ ಮಾರ್ಗವ ಕೊಡುತ ।
ಉಪ್ತರೋತ್ತರದಿಂದ ತಮ ತಮ ಗುಣದಕಾರ್ಯ ।

ವಿತ್ತವದಲ್ಲದೆ ಬಿಡದು ತ್ರಿವಿಧರಿಗೆ ।
ಉತ್ತರ ಲಾಲಿಸೆ ಅಭಾವ ಜ್ಞಾ ಜ್ಞಾನಾ
ಹೊತ್ತು ಹೊತ್ತಿಗೆ ಬರುತಲಿಪ್ಪವು ।
ಕತ್ತರಿಸಿ ಲಿಂಗ ಪೋಗುವ ಪರಿಯಂತ ।
ನಿತ್ಯಭಾವ ಜ್ಞಾನ ಅವರಿಗಿಲ್ಲ ।
ಬಿತ್ತರಿಸಿ ಅಲ್ಲಿಯಿದ್ದ ಪರಿಚ್ಛೇದಕೆ ।
ಕರ್ತಳಾಗಿಪ್ಪಳು ಶ್ರೀ ಭೂ ದುರ್ಗಾನಾಮ ।
ತತ್ತಳಿಸುತಿಪ್ಪ ಸ್ಥಾನದಲ್ಲಿ ।
ನೆತ್ತಿದ್ವಾರವನ್ನು ಪಾದದಲ್ಲಿ ಮುಚ್ಚಿ ।
ವೃತ್ತಿರೂಪಜ್ಞಾನ ಕೊಡುತಿಪ್ಪಳು ।
ತತ್ವೇಶರು ಲಿಂಗದೇಹದಲ್ಲಿಯಿಲ್ಲ ।
ಎತ್ತ ನೋಡಿದರತ್ತ ಸಿರಿವ್ಯಾಪ್ತಳು ।
ಕರ್ತನು ಸರ್ವರಿಗೆ ವಿಜಯ ವಿಠಲರೇಯ ।
ಅತ್ಯಂತ ಮಹಿಮನು ಸಕಲರಿಗೆ ಪ್ರೇರಕ ॥೧॥

## ಮಟ್ಟತಾಳ

ಪ್ರಥಮ ಪರಿಚ್ಛೇದದಲಿ ಮನಸುವುಂಟು ।
ದ್ವಿತಿಯ ಪರಿಚ್ಛೆದದಲಿ ದಶೇಂದ್ರಿಗಳು ।
ತೃತಿಯ ಪರಿಚ್ಛೇದದಲಿ ಶಬ್ದಾದಿಗಳು ।
ಚ್ಯುತವಾಗದೆಯಿಪ್ಪವು ಕಾರಣ ರೂಪದಲ್ಲಿ ।
ಪ್ರತಿ ಪ್ರತಿ ಕಲ್ಪಕ್ಕೆ ಪೂವಿಗೆ ಪರಿಮಳ ವ್ಯಾ ।
ಪುತ ವಾಗಿದ್ದಂತೆ ಪೊಂದಿ ಕೊಂಡಿಪ್ಪವು ।
ಕೃತಿ ರಮಣ ನಮ್ಮ ವಿಜಯ ವಿಠಲ ತಾನೆ ।
ಸತತ ಜೀವರ ಕೈಯ್ಯ ಚೇಷ್ಟಿಯ ಮಾಡಿಸುವ ॥೨

### ತ್ರಿವಿಡಿ ತಾಳ

ಅಲ್ಲಿಂದ ಬಿಂದುಗಳು ವುದರಿಸಿದ ಸಿರಿ ।
ವಲ್ಲಭನು ಲಿಂಗದೇಹದೊಳಗೆಯಿದ್ದು ।
ಅಲ್ಲಾಡಿಸಲು ಆಗ ಅನಿರುದ್ಧ ಶರೀರ ।
ಎಲ್ಲ ಜೀವರಿಗೆ ಸಿದ್ಧವಾಯಿತು ।
ಸೊಲ್ಲ ಲಾಲಿಸಿ ಕೇಳಿ ಈ ವಿವರವಾಣಿ ।
ನಲ್ಲನಿಂದ ವಿಡಿದು ಕ್ರಮಾನುಸಾರ ।
ಸೊಲ್ಲುವೊಂದೊಂದು ಅಧಿಕಾರವಾಗಿ ದೇಹ ।
ನಿಲ್ಲದೇಯಿಪ್ಪದು ಪ್ರಥವಿ ತನಕ ।
ಬಲ್ಲದ್ದೆ ಸರಿ ಅನಿರುದ್ಧ ಶರೀರಕ್ಕೆ ।
ಎಲ್ಲ ತಾತ್ವಿಕರು ಅಭಿಮಾನ್ಯರೊ ।
ಬಲ್ಲಿದ ಬೊಮ್ಮಗೆ ರುದ್ರಾದಿಗಳಿಂದ ।
ಇಲ್ಲ ವೈಯ್ಯ ಮಾಳ್ಪ ಪ್ರಯೋಜನ।
ಖುಲ್ಲಮರ್ದನ ನಮ್ಮ ವಿಜಯ ವಿಠಲರೇಯ ।
ನಲ್ಲದೆ ಮತ್ತೊಬ್ಬನಿಲ್ಲ ಸ್ವಾತಂತ್ರನು ॥೩॥

### ಅಟ್ಟತಾಳ

ಶ್ರೀ ರಮಣನಾಗಿ ವಿಷ್ಣು ಎನಿಸಿಕೊಂಬ ।
ಭೂ ರಮಣನಾಗಿ ಬ್ರಹ್ಮನೆನಿಸಿಕೊಂಬ ।
ದುರ್ಗಾರಮಣನಾಗಿ ರುದ್ರನೆನಿಸಿಕೊಂಬ ।
ನಾರಾಯಣ ತಾನೆ ಈ ಪರಿಯಲ್ಲಿಪ್ಪ ।
ಕಾರಣ ಕಾರ್ಯ ಶರೀರ ತಪ್ಪದೆ ।
ಮೂರುಗುಣದ ವ್ಯಾಪಾರ ಮಾಡಿಸುವ ।
ಸಾಹೃದಯವಾಸಿ ಸಿರಿ ವಿಜಯ ವಿಠಲರೇಯ ।
ಸಾರಿದವರ ಸಂಸಾರ ವುತ್ತರಿಸುವ ॥೪॥

### ಆದಿತಾಳ

ಪ್ರತಿ ಪ್ರತಿ ದೇಹದಲ್ಲಿ ಈಬಗೆ ದೇವ ದೇ ।
ವತೆಗಳುಂಟು ಆ ತಮ್ಮ-ವ್ಯಾಪಾರ ಮಾಡಿಸುತ ।
ಪ್ರತಿ ಕೂಲವಾಗರು ನೀಚರುತ್ತಮರಿಗೆ ।
ಹಿತವಾಗಿಯಿಪ್ಪರು ಉತ್ತಮರು ನೀಚರಿಗೆ ।
ಚತುರವಿಧ ತಿಳಿ ಅಜ್ಞಾನ ಅಪೂರ್ಣ ।
ಸತು ಉಪಜೀವನ ಜೀವಿಗಳಿಗೆ ಉಂಟು ।
ಸತುವ ಮೂರುತಿ ನಮ್ಮ ವಿಜಯ ವಿಠಲರೇಯ ।
ಮತಿಯ ಕೊಡುವನು ಯಿದ ಗುಣಿಸಿದ ಜನರಿಗೆ ॥೫॥

### ಜತೆ

ಧ್ಯಾನವನ್ನೆ ಮಾಡು ದಾಸಭಾವವೆ ವಹಿಸಿ ।
ಜ್ಞಾನದಾಯಕ ವಿಜಯ ವಿಠಲನ್ನ ಪೂಜಿಸು ॥೬॥



# ಲಿಂಗ ಪ್ರಕೃತಿ ಮತ್ತು ಜೀವಾಚ್ಛಾದಿಕ ಪರಮಾಚ್ಛಾದಿಕ ಯಿರುವ ಸ್ಥಳ ವಿವರ

## ೪೨) ಸುಳಾದಿ

ರಾಗ:- ಗೌಳಿ ಧ್ರುವತಾಳ

ಜಡ ಕೇವಲ ತರ ಸೂಕ್ಷ್ಮ ಪ್ರಕೃತಿಯಿಂದ ।
ಬಿಡದೆ ಬದ್ಧವಾದ ಜೀವರ ಜೀವರಾಶಿ ।
ಕೆಡಲುಂಟೆ ಯೆಂದಿಗೆ ಅಚ್ಛೇದ್ಯ ಅಬೇದ್ಯವೆಂಬೊ
ನುಡಿ ಧೃಡವಾಗಿಪ್ಪದು ಸರ್ವಕಾಲ ।
ಪೊಡವಿಯೊಳಗೆ ಜೀವ ಪುಟ್ಟುವ ಬಗೆ ಕೇಳು ।
ಅಡಿಗಡಿಗೆ ಸಂಸಾರದಲ್ಲಿ ತಂದು ।
ಇಡುವದಕ್ಕೆ ಮುಖ್ಯ ಹರಿಯೊಬ್ಬ ಸ್ವಾತಂತ್ರ ।
ತಡಿಯದೆ ಸಿರಿದೇವಿ ಆತದುವಾಯ ।
ಜಡಜ ಸಂಭವ ವಾಯು ವಾಣಿ ಭಾರತಿ ಗಳಿಗೆ ।
ಎಡಿಗೆಡಿಸದು ಲಿಂಗ ಜ್ಞಾನಾಂಶಕ್ಕೆ ।
ಮೃಡ ವಿಕ್ವಾದವರಿಗೆ ಜ್ಞಾನಕ್ಕೆ ತಿರೋಭಾವ ।
ಕೊಡುವಳು ದೇವಿ ಮೂರು ರೂಪದಲ್ಲಿ ।
ಕಡೆ ಭಾಗ ದುರ್ಗಾನಾಮ ಭೂದೇವಿಯೆಂಬನಾಮ ।
ನಡುವೆ ಯೆಣಿಸು ಕೊನಿಗೆ ಶ್ರೀದೇವಿಯು ।
ಕಡುಸಮರ್ಥಳು ಸೃಷ್ಟ್ಯಾದ್ಯಷ್ಟ ಕರ್ತೃತ್ವವು ।
ಒಡಿಯಾನಿಂದಲೆ ತಾನೆ ಮಾಡುವಳು ।
ಬಿಡದೆ ಸುತ್ತಿದ ಲಿಂಗ ಮೂರು ಪರಿಚ್ಛೇದ ನಿ ।
ಬ್ಬಿಡಿಯಾಗಿಪ್ಪದು ಅವಕಾಶವು ।

ಕೊಡತಲಿ ಜೀವಿಗಳ ಅಂಶ ಪ್ರಕಾಶಕ್ಕೆ ।
ಒಡನೊಡನೆ ತನ್ನ ಕಾಂತಿ ಮಿಳಿತವಾಗಿ ।
ನಡೆವ ನುಡಿವದೆಲ್ಲ ಭವಕೆ ಕಾರಣವಾಗಿ ।
ಕಡಲ ಶಯನನಿಂದ ವಿಸ್ತಾರವೊ ।
ಸಡಲಿ ಪೋಗುವದಲ್ಲ ವಿರಜಾಸ್ನಾನದ ತನಕ ।
ಎಡಬಿಡದೆ ಯಿಪ್ಪದು ಯಿದರ ವರ್ನ ।
ನುಡಿವೆನು ನೀಲ ಪದ್ಮರಾಗ ವಜ್ರದ ತೆರದಿ ।
ಅಡಿ ಮೇಲಾಗಿ ವುಂಟು ಒಂದಕ್ಕೊಂದು ।
ಬಡವರಾಧಾರಿ ನಮ್ಮ ವಿಜಯ ವಿಠಲ ಅವ ।
ಘಡವನೆ ದಾಟಿಸುವ ಈ ಪರಿ ತಿಳಿದವಗೆ ॥೧॥

## ಮಟ್ಟತಾಳ

ತ್ರಿವಿಧಾತ್ಮಕವಾದ ಲಿಂಗ ದೇಹದಿಂದ ।
ದೀವಿಗೆ ಕುಡಿ ವೇಗ ವುದರಿದಂತೆ ಬಿದ್ದು ।
ಶ್ರೀವರ ನೀಕ್ಷಿಸಲು ಅತಿ ಪರಿಮಾಣಗಳು ।
ಆವಾವ ಗಣದಿಂದ ಶಂಕೆ ಯುಕ್ತವಾಗಿ ।
ಸಾವಿರ ಶತ ಹತ್ತುವುದರಿದ ವೊಂದಾಗಿ ।
ಕೋವಿದರು ಕೇಳಿ ಗುಣ ವೈಷಮ್ಯವಿದು ।
ಗೋವರ್ಧದೋದ್ಧರಣ ವಿಜಯ ವಿಠಲರೇಯ ।
ಪಾವನ ಮೂರುತಿ ಅಲ್ಲಲ್ಲೆಯಿರುತಿಪ್ಪ ॥೨॥

## ತ್ರಿವಿಡಿ ತಾಳ

ಬಿಂದು ಬಿಂದುಗಳಲ್ಪ ಪರಮಾಣು ಸಮೇತ ।
ಒಂದೊಂದು ಸೂಕ್ಷ್ಮ ತತ್ವಗಳಿಂದಲಿ ।
ಮುಂದೆ ಕಾರ್ಯಗಳಯ್ಯ ಅನಿರುದ್ಧ ಶರೀರ
ಪೊಂದಿ ಕೊಂಡಿಪ್ಪದು ಲಿಂಗದಂತೆ ।

ಹಿಂದಣಾಗವು ವುಂಟು ಪ್ರಾಂತ್ಯಭಾಗಕೆ ಸ |
ಮ್ಮಂಧವಾಗಿಪ್ಪವು ಪ್ರಕೃತಿ (ಎ) ಯೆರಡು |
ಕುಂದದೆ ಪೆಸರುಂಟು ಜೀವ ಪರಮಾಚ್ಛಾದಿಕಾ |
ಪೆಂದೆಂಬ ನಾಮುಗಳು ಜಡತಮ ವರ್ನ |
ಸಂದಿದೆ ಲಿಂಗ ಅನಿರುದ್ಧ ಮಧ್ಯ |
ಬಂಧಕಾ ದೃಷ್ಟಜನ ಅಲ್ಲಿಯಿಲ್ಲ |
ಇಂದಿರೆ ಅಜ ವಾಯು ಯಿವರ ಹೆಂಡರು ಆ |
ನಂದಾಭಿ ಮಾನಿಗಳು ಲಕುಮಿ ನಿತ್ಯ |
ಸಂದೇಹ ಗೊಳ ಸಲ್ಲ ಅನಿರುದ್ಧ ದೇಹದಲಿ |
ಬಂದು ಪ್ರವೇಶವಾದರು ತಾತ್ವರು |
ಒಂದೊಂದು ಪ್ರಕೃತಿಯು ಯಿದಕಾವರ್ಕವಾಗಿ |
ಛಂದದಿಂದಲಿ ಯಿರೆ ಯಿಲ್ಲಿ ದೃಷ್ಟ (ದುಷ್ಟ) |
ಮಂದಿಗಳಿಬ್ಬರು ಸ್ತ್ರಿ ವಾಚಕರಯ್ಯ |
ಅಂದಕೆ ಪಾರಭಿಮಾನರಾಗಿ |
ಸುಂದರ ಗುಣವುಳ್ಳ ವಾಣಿ ಭಾರತಿ ಗಿರಿಯ |
ನಂದನೆ ಶಚಿಯಿವರು ಪ್ರೇರಕರೊ |
ಹಿಂದಿನ ಪರಮೇಷ್ಠಿ ಕಲ್ಪದಲಿ ಆಗುಣ |
ದಿಂದ ಈರ್ವರು ಸಾಧನ ಮಾಡಿಬಂದು |
ದ್ವಂದ್ವಾಚ್ಛಾದಕದಲ್ಲಿ ಸ್ತ್ರೀಯೆರು |
ನಿಂದು ಜೀವರಿಗೆ ಪ್ರತಿ ಕೂಲರವರು |
ಇಂದ್ರಯೋನಿ ವಿಡಿದು ಕರ್ನಿಕೆ ಪರಿಯಂತದಲ್ಲಿ |
ಒಂದೊಂದು ಅಣುಮಾತ್ರ ಅಧಿಕವಾಗಿ |
ಸಂದೇಹ ಬಡಿಸುವರು ಉತ್ತಮರ ಪ್ರೇರಣೆ |
ಯಿಂದ ನೀಚರಿಗೆ ಕೇವಲ ಉಪಹತಿ |
ಕಂದರ್ಪ ಪಿತನಮ್ಮ ವಿಜಯ ವಿಠಲರೇಯ |
ವೃಂದಾವನ ಪ್ರಿಯ ವೈಕುಂಠರಮಣ ||೩||

### ಅಟ್ಟತಾಳ

ಇದು ಮೂಲಕಾರಣ ಅವಿದ್ಯಧರ್ಮವು |
ಇದು ಕಲಿಯಿರಲಿಕ್ಕೆ ಆವಾಸಸ್ಥಾನವಾಗಿದೆ |
ಇದು ಮಹ ಪ್ರಬಲವು ಸೂತಕ ಪ್ರಾರಬ್ಧ |
ಒದಗಿ ಬಂದಾಗಲು ಕಲಿಯ ವೊಡಗೂಡಿ |
ಅಧಿಕ ಅಧಿಕವಾಗಿ ವ್ಯಥೆ ಬಡಿಸುವದು |
ಮುದದಿಂದ ಬೊಮ್ಮಾಂಡ ಬಾಹಿರದಲಿಯಿದ್ದ |
ತ್ರಿದಶರಲ್ಲಿ ಯಿವರ ಕಾರ್ಯವೆ ಕೊಳ್ಳದು |
ಪದುಮ ಕಲ್ಪದಲ್ಲಿ ಪದುಮಜನಿಂದ ಪು |
ಟ್ಟಿದ ಜೀವರಾಶಿಗೆ ವ್ಯಥೆಕಾರಣವೆನ್ನಿ |
ಇದರೆಂತ ಮೇಲವತಾರ ಧರ್ಮದಲ್ಲಿ |
ತದುಪರಿ ಮನುಜರಿಗೆಂತು ಪೇಳುವದೇನು |
ವಿಧಿಪಿತ ವಿಜಯ ವಿಠಲರೇಯನ ಲೀಲೆ |
ಅದುಭೂತವಾಗಿದೆ ತುತಿಸ ಬಲ್ಲವರಾರು | ||೪||

### ಆದಿತಾಳ

ಪ್ರತಿ ಪ್ರತಿ ಕಲ್ಪವಾಗೆ ಪ್ರತಿ ಪ್ರತಿ ಯೋಗ್ಯರಲ್ಲಿ |
ಪ್ರತಿ ಪ್ರತಿ ಜೀವದ್ವಯ ಖತಿಗೊಳಿಪರು ಗತಿಗೆ |
ಸತತ ಈ ಪರಿಯುಂಟು ಹಿತ ವಿಶೇಷವುಳ್ಳರೆ |
ಮತಿ ವಂತರು ಪೇಳುವದುನುತಿಸುವೆ ತಲೆಬಾಗಿ |
ಕ್ಷಿತಿಯ ಮಾನವ ಬಹು ಶ್ರುತಿಯಿಂದ ಬಲುವೇಗ |
ಗತಿಗೆ ಸಾಧನ ಮಾಡುತ ಮುಕ್ತನಾಗುವೆ (ವ)
ಪತಿತ ಪಾವನ ಸ್ವಾಮಿ ವಿಜಯ ವಿಠಲರೇಯ |
ಚತುರ ಮೂರುತಿ ತನ್ನಯಿಚ್ಛಾವರ್ತ ಸುತ್ತಿಪ್ಪ ||೫||

### ಜತೆ

ಜೀವಕೆ ಪ್ರತಿ ಬಂಧಕವಾಗಿದ್ದ ಜನರಿವರು |
ದೇವೇಶ ವಿಜಯ ವಿಠಲನಿಂದ ತೊಲಗುವರು ||೬||

ಶ್ರೀ ಪ್ರಾಣೇಶ ವಿಠಲ ಕೃತ

## ಜೀವರಿಗೆ ೨೬ ಕಳೆವರೆ ವಿವರೆ ಮತ್ತು ಅಲ್ಲಿರುವ ಹರಿರೂಪಗಳು

### ೪೩) ಪದ

ರಾಗ:- **ಸಾವೇರಿ** ಝಂಪಿತಾಳ

ನರಜನ್ಮ ಬಂದುದಕೆ ಯಿಪ್ಪತ್ತು ಆರುಕಳೆ !
ವರ ದೊಳಿಹ ಹರಿರೂಪ ಚಿಂತಿಸುವದು । ||ಪ||

ಎರಡನಂತದವ್ಯಾಲಿ ವೊಂಭತಧಿಕನೂರು ।
ಸ್ವರೂಪ ದೊಳಹಿವು ಅವ್ಯಾಲೆಯಿಚ್ಛಾ ।
ವರಣದಲಿವೊಂದು ಲಿಂಗದಲ್ಲಿ ಆರೊಂದಧಿಕ ।
ಅರವತ್ತು ರೂಪಗಳುವುಂಟು ಕೇಳಿ ||೧||

ಎಪ್ಪತ್ತರೊಂಭತ್ತಧಿಕನೂರು ಅವ್ಯಕ್ತ ।
ಕಿಪ್ಪವು ಅವಿದ್ಯದೊಳುಯೇಳು ಅಧಿಕ ॥
ಇಪ್ಪತ್ತು ಕರ್ಮ ಕಾಮಾವರಣದಲಿ ಮೂರು ।
ಇಪ್ಪತ್ತು ಮೂರು ಅರವತ್ತುಯೆಂಟು ||೨||

ಮಾರಮಣ ಜೀವ ಪರಮಾಚ್ಛಾದಿಕೆರಡರೊಳು ।
ಬ್ಯಾರೆ ಬ್ಯಾರಿಪ್ಪ ವೊಂಬತ್ತುರೂಪ ॥
ನಾರಾಯಣಾದಿ ಐದರೊಳಗೊಂದೊಂದೇವೆ ।
ತೋರುತಿಹವ ಜಪಿತನ ವಿಮಲಮೂರ್ತಿ ||೩||

ಎರಡು ಲಕ್ಷೆರಡು ಸಾವಿರದ ನಾನೂರು ಈ ।
ರೆರಡಧಿಕ ತೊಂಬತ್ತು ಅನಿರುದ್ಧದಿ ॥
ಮೆರೆವ ಶ್ರೀವಾಸುದೇವ ನಾರಾಯಣ ಕವಚದಿ ।
ಇರುವ ವೊಂದೊಂದು ಆನಂದಮಯದಿ ||೪||

ಇನ್ನು ವಿಜ್ಞಾನ ಮನ ವಾಜ್ಞಶೋತ್ರ ಚಕ್ಷು ಪ್ರಾ ।
ಣನ್ನಮಯ ಹೀಗೆ ಯೇಳೊಂದರೊಳಗೆ ॥
ವನ್ನ ಜಾಕ್ಷನರೂಪ ವೊಂದೊಂದೆ ಯಿಹವೆಂದು ।
ಚನ್ನಾಗಿ ಭಕ್ತಿಪೂರ್ವಕ ತಿಳಿವುದು । ।೫॥

ಸ್ಥೂಲವಾದಂಗದಲಿ ಮೂವತ್ತೆರಡು ಕೋಟಿ ।
ಯೆಳುಲಕ್ಷದವ್ಯಾಲೆ ರಮ್ಯವಾಗಿ ॥
ಶ್ರೀಲೋಲ ತೊಂಭತ್ತು ಮೂರುಸಾವಿರದ ಹದಿ ।
ನೇಳಧಿಕ ಎಂಟು ಶತ ರೂಪದಲಿಹ ॥೬॥

ಈರನಂತ ಮೂತ್ತೆರಡು ಕೋಟಿ ನವಲಕ್ಷ ।
ಆರಧಿಕ ತೊಂಭತ್ತು ಸಾವಿರೆಂಟು ॥
ನೂರು ಐವತ್ತೆಂಟುರೂಪಗಳು ಸ್ತಂಬಾದಿ ।
ವಾರಿಜ ಭವಾಂಡ ದೇಹಗಳೊಳೀಹವು ॥೭॥

ಮೋದ ತೀರ್ಥರ ಮತವ ಪೊಂದಿದವರೀ ರೂಪ ।
ಸಾದರದಿ ಚಿಂತಿಸುವದೇ ಮೋಕ್ಷಕೆ ॥
ಸಾಧನವಿದು ಸಾತ್ವಿಕರಿಗಲ್ಲದಲೆ ಅನ್ಯ ।
ವಾದಿಗಳಿಗುಪದೇಶ ಮಾಡಸಲ್ಲ ॥೮॥

ಪ್ರಾಣೇಶವಿಠಲನ ಸುಮೂರ್ತಿ ಈಪರಿಯಿಂದ ।
ಧ್ಯಾನಕ್ಕೆ ತಂದು ಹಿಗ್ಗದಲೆ ಬರಿದೆ ॥
ಏನು ಪೋದಿದರು ಕೇಳಿದರು ತಪಮಾಡಿದರು ।
ಆನಿ ತಿಂದ ಕಪಿತ್ಥದಂತರಿವುದು ॥೯॥

— ○ —

## ೨೬ ದೇಹ ವಿವರ

| ಕ್ರಮಾಂಕ | ದೇಹ ವಿವರ | ಭಗವದ್ರೂಪಗಳು |
|---|---|---|
| ೧ | ಸ್ವರೂಪ ದೇಹ | ೨,೦೦೦೦೦೦೦೧೦೯ |
| ೨ | ಇಚ್ಛಾವರಣ ಶ್ರೀಹರಿರೂಪ ಹರಿಯ ಇಚ್ಛಾವರಣ ಪರಮಾಚ್ಛಾದಿಕವಲ್ಲ | ೧ |
| ೩ | ಲಿಂಗ ಶರೀರದಿ | ೯೭ |
| ೪ | ಅವ್ಯಕ್ತಶರೀರದಿ | ೧೭೯ |
| ೫ | ಅವಿದ್ಯಾದಲ್ಲಿ | ೨೭ |
| ೬ | ಕರ್ಮಾವರಣ | ೬೩ |
| ೭ | ಕಾಮಾವರಣ | ೬೮ |
| ೮ | ಜೀವಾಚ್ಛಾದಿಕ | ೯ |
| ೯ | ಪರಮಾಚ್ಛಾದಿಕ | ೯ |
| ೧೦ | ನಾರಾಯಣಾವರಣ | ೧ |
| ೧೧ | ವಾಸುದೇವಾವರಣ | ೧ |
| ೧೨ | ಸಂಕರುಷಣಾವರಣ | ೧ |
| ೧೩ | ಪ್ರದ್ಯುಮ್ನಾವರಣ | ೧ |
| ೧೪ | ಅನಿರುದ್ಧಾವರಣ | ೧ |
| ೧೫ | ಅನಿರುದ್ಧಶರೀರದಲ್ಲಿ | ೨೦೨೪೯೪ |
| ೧೬ | ವಾಸುದೇವಕವಚ | ೧ |
| ೧೭ | ನಾರಾಯಣ ಕವಚ | ೧ |
| ೧೮ | ಆನಂದಮಯ ಕವಚ | ೧ |

| | | |
|---|---|---|
| ೧೯ | ವಿಜ್ಞಾನಮಯ ಕವಚ | ೧ |
| ೨೦ | ಮನೋಮಯ ಕವಚ | ೧ |
| ೨೧ | ವಾಙ್ಮಯ ಕವಚ | ೧ |
| ೨೨ | ಶ್ರೋತ್ರಮಯ ಕವಚ | ೧ |
| ೨೩ | ಚಕ್ಷುರ್ಮಯ ಕವಚ | ೧ |
| ೨೪ | ಪ್ರಾಣಮಯ ಕವಚ | ೧ |
| ೨೫ | ಅನ್ನಮಯ ಕವಚ | ೧ |
| ೨೬ | ಸ್ಥೂಲಶರೀರ | ೩೨೦೭೯೩೮೧೭ |
| | | ೨,೩೨೦೯,೯೬,೮೫೮ |

ಒಟ್ಟು ಹರಿಯ ರೂಪಗಳು ಇದರ ವಿಸ್ತಾರ ಅರಿತವರಿಂದ ತಿಳಿದುಕೊಳ್ಳಬೇಕು



## ಬ್ರಹ್ಮದೇವರ ೫೦ ವರ್ಷ ವರಿಗೆ ಬಾಹ್ಯಾಂಡ ಸೃಷ್ಟಿ ಹಿಂದೆ ಹೇಳಿದ್ದು ಕೆಲ ಸಂಕ್ಷೇಪ ೨೦ ವರ್ಷದ ವಿಸ್ತಾರ ವರ್ಣಿಸಿ ಮುಂದಿನ ಸೃಷ್ಟಿ ವಿಷಯ ವಿಸ್ತಾರವಾಗಿ ರಚಿಸಿದ್ದು

### ೪೪) ಸುಳಾದಿ

ರಾಗ :– ಸಾವೇರಿ ಧ್ರುವತಾಳ

ಮೂಲ ಮೂರುತಿಯಾಗಿ ಯೇಕಾರ್ಣವದೊಳಗೆ ।
ಲೀಲೆಯಿಂದ ಸಣ್ಣ ಬಾಲನಾಗಿ ।
ಆಲದೆಲಿಯ ಮ್ಯಾಲೆ ಮಲಗಿದ್ದು ಉದರದೊಳು ।
ಮೂಲೋಕ ವಿಟ್ಟ ಮುದ್ದು ಮೋಹನರಾಯ ।
ಕಾಲಾದಿಗಳ ಗೆದ್ದ ಸುಪ್ರತಾಪನೆ ನಿತ್ಯ ।
ಶ್ರೀಲತಾಂಗಿಯ ಕೂಡ ಸರಸವಾಳ್ವ ।
ಪಾಲ ಸಾಗರ ಶಾಯಿ ಪರಮ ಕಾರುಣ್ಯ ನಿಧಿಯೆ ।
ಮೇಲು ಮೇಲು ನಿನ್ನ ಮಾಯಾಶಕ್ತಿ ಪೇಳೆ ।
ಕೇಳುವನಾರು ಅನಂತವೇದದಲ್ಲಿ ।
ನಾಲಿಗೆ ಸಾಲದೆ ಹಿಂದಾಹರೊ ।
ಜಾಲ ಕರ್ಮಗಳಲ್ಲಿ ಬಿದ್ದ ಜೀವಿಗಳನ್ನು ।
ಪಾಲಿಸಬೇಕೆಂದು ದುರ್ಗಾದೇವಿಯು ವೇಗ ।
ವಾಲಗ ಮಾಡಿದಳು ಸರ್ವದೇವಾದಿ ದೇವನ ।
ವಾಲಯ ಶ್ರುತಿಗಳಿಂದ ಕೊಂಡಾಡುತ್ತ ।
ಕಾಲವನ್ನೆ ತಿಳಿದು ಅಜನಬ್ದ ದ್ವಾದಶಾರ್ಧ ।
ಕೀಲಿಸಿ ಯಿರಲಾಗಿ ಆರಂಭಿಸಿ ।
ಲಾಲಿಸಿ ಹರಿ ತಾನು ಪತ್ನಿಯ ಮಾತಿಗೆ ಹೀ ।

ಯಾಳಿ ಯಿಂದಲಿ ನಕ್ಕು ಮಲಗಿದವನು |
ಯೆಳುವನಂತೆ ಕಣ್ಣು ತೆರೆದು ನೋಡಿದ ಅನು |
ಕೂಲವಾದನು ಸಿರಿಯ ಭಕ್ತಿಗೊಲಿದು |
ನಾಲ್ಕು ಬಗೆಯ ಸೃಷ್ಟಿ ರಚಿಸುವೆನೆಂದು ಗೋ |
ಪಾಲನೆನದ ನಂದು ಜ್ಞಾನಾನಂದ |
ಆಲೋಚನೆಯ ಮಾಡು ಯೆಲೊ ಮಾನವನೆ ನೀನು |
ತಾಳಿದ ಪ್ರಥಮದಲ್ಲಿ ಶುದ್ಧಸೃಷ್ಟಿ |
ಶೀಲಗುಣ ಸಂಪನ್ನ ನೀನೆ ನಿನಗೆ ನಿತ್ಯ
ಬಾಳುವೆನವತಾರಗಳನು ಮಾಡಿ |
ಶ್ರೀ ಲಕುಮಿ ಮುಕ್ತರಿಗೆ ಪರಾಧೀನ ವಾಪ್ತಸೃಷ್ಟಿ |
ಪೇಳುವದೇಯಿದೆ ದ್ವಿತಿಯಾ (ಸೃಷ್ಟಿ) ರ್ಥವೋ
ಸ್ಥೂಲದೇಹ ಸಂಯೋಗ ಸಲಿಂಗರಾದ ವಿವಿಧ |
ಆಳುಗಳಿಗೆ ಯಿದೆ ತೃತೀಯಸೃಷ್ಟಿ |
ಸ್ಥೂಲ ಸಂಸಾರದೊಳು ಯಿಪ್ಪದಕೆ ಮಿಶ್ರವೆನ್ನಿ |
ನಾಲ್ಕನೇ ಸೃಷ್ಟಿ ಕೇವಲ ನಾಮವೊ |
ಕಾಲಕರ್ಮಾದಿಯೆಲ್ಲ ನಿರ್ಮಾಣ ವಾಗುವದು |
ಏಳೇಳು ಭುವನದಲ್ಲಿ ಯಿನಿತು ಜನನ |
ಎಳಲ ಮಾಡದಿರು ಮಿಶ್ರ ಕೇವಲದೊಳಗೆ |
ಕೇಳು ಪ್ರಾಕೃತ ವೈಕೃತ ಸೃಷ್ಟಿಯು |
ಮೇಲೆ ದಿವಿಜಾದ್ಯರಿಂದ ಆಗುವದೊಂದು ಕೂಡಿದರೆ ;
ನಾಲ್ಕು ಮೆಲಾರು ಸೃಷ್ಟಿಯ ವಿವರ |
ನೀಲಮೆಘಶ್ಯಾಮ ವಿಜಯ ವಿಠಲರೇಯ |
ಬಾಲಕ್ರೀಡನಂತೆ ಬೊಮ್ಮಾಂಡ ಪುಟ್ಟಿಸುವ ||೧||

**ಮಟ್ಟತಾಳ**

ಬೊಮ್ಮಾಂಡ ಹೊರಗಿನ ಪಾಕೃತಗುಣವ್ಯೆ |
ಷಮ್ಯ ಮಹತತ್ವ ಅಹಂಕಾರ ವೈಕಾರಿಕ |

ಸುಮ್ಮನಸರ ಮನಸು ಜ್ಞಾನ ಕರ್ಮೇಂದ್ರಿಯಗಳು ।
ಅಮ್ಮಹ ಪಂಚಭೂತಗಳು ತನ್ಮಾತ್ರಗಳೈದು ।
ಬೊಮ್ಮಾಂಡಾಂತರದಿ ಸ್ಥಾವರ ಪಶ್ವಾದಿ ।
ಘಮ್ಮನೆ ತಿಳಿವುದು ಪ್ರಾಕೃತ ವೈಕೃತ ।
ರಮ್ಮೆಯರಸ ನಮ್ಮ ವಿಜಯ ವಿಠಲರೇಯನ ।
ಒಮ್ಮೆಗಾದರು ನೆನದು ಈ ಪರಿ ಕೊಂಡಾಡಿ ॥೨॥

## ರೂಪಕತಾಳ

ಮತ್ತೆ ದೇವತೆಗಳ ಸೃಷ್ಟೆಂಟುಬಗೆ ದೇ ।
ವತೆಗಳು ಸರ್ವ ಪುರುಷಾದ್ಯರವಿಡಿದು ।
ಪಿತೃಋಷಿಗಳು ದಾನವ ಗಂಧರ್ವಾಪ್ಸರ ಸ್ತ್ರೀಯರು ।
ಪ್ರತ್ಯೇಕಸಿದ್ಧರು ಯಕ್ಷ ರಕ್ಷ ಚಾರಣ ।
ಉತ್ತಮರಾಗಿಪ್ಪಯಿವರೊಳು ಯೆಣಿಸು ದೇ ।
ವತೆಗಳು ಯೆಲ್ಲ ನೂರು ಜನ ಋಷಿಗಳು ।
ಪಿತೃಜನ ನೂರುಮಂದಿ ದಾನವರೊಳು ಮೂ
ವತ್ತುಜನ ಗಂಧರ್ವ ರಿನ್ನೂರು ಯಿದರಷ್ಟೆ ।
ನೃತ್ಯವಾಡುವ ಅಪ್ಸರ ಸ್ತ್ರೀಯರು ಯಕ್ಷಯೆ ।
ಪ್ಪತ್ತು ಜನ ಯಿವರಂತೆ ರಕ್ಷ ಚಾರಣರು ಮೂ
ವತ್ತು ಜನ ಸಿದ್ಧರು ಇನ್ನೂರು ಜನ ಯೆ ।
ಪ್ಪತ್ತು ಯೆಪ್ಪತ್ತು ಜನ ಸರ್ವ ಜಾತಿಗಳೊಳಗೆ ।
ತತ್ವ ಈ ಪರಿ ತಿಳಿದು ನೀಚ ಕ್ರಮದಿಂದ ।
ಭಕ್ತಿಯ ಮಾಡು ನೀ ಮನಮುಟ್ಟಿ ಮನುಜಾ ।
ವಿಸ್ತರಿಸುವೆ ಯಿದರ ಸಂಗತಿಯು ಮುಂದೊಲಿಸಿ ।
ಇತ್ತಲಾದ ಸೃಷ್ಟಿ ಕ್ರಮಧಿಂದಲಿ ।
ಪತ್ರಶಾಯಿ ಶೂನ್ಯನಾಮಕ ನಾರಾಯಣ
ಮೂರ್ತಿ ತಾನೇವೆ ಪುರುಷನಾದ ನೈಯ್ಯ ।

ಮತ್ತೆ ರೂಪವ ಧರಿಸಿ ವಾಸುದೇವನೆಂಬೊ ।
ಕೀರ್ತಿಯಿಂದಲಿ ಮಾಯಾ ದೇವಿಯಿಲ್ಲಿ ।
ಪೆತ್ತನು ಪುರು ನಾಮಕ ವಿರಂಚಿಯು ತ ।
ತ್ಪತ್ನಿ ಪ್ರಧಾನ ತ್ರಿರೂಪಾತ್ಮಕಳ ।
ಸೂತ್ರನಾಮಕ ಪ್ರಾಣ ಜಯ ಮುಸಲ ಧರಗೆ ವು ।
ತ್ಪತ್ತಿಯಾದನು ಬ್ರಹ್ಮನ ಯೆರಡು ವರುಷಕ್ಕೆ ।
ಇತ್ತಲಾದರು ಪ್ರದ್ಯುಮ್ನ ಕೃತಿಗೆ ಸಾ ।
ವಿತ್ರಿ ಗಾಯತ್ರಿ ಸರಸ್ವತಿ ನಾಮವು ।
ಪುತ್ರ್ಯೇಕ ವಾಗಿದ್ದ ಪ್ರಕೃತಿ ಶಬ್ದ ಭಾ ।
ರತ್ತಿ ಶ್ರದ್ಧೆಯೆಂಬೊ ನಾಮವ ಧರಿಸಿ
ಉತ್ತುಮ ಗುಣದಲ್ಲಿ ಈರ್ವರು ಜನಿಸಿ ಸಂ ।
ಪತ್ತು ಪಡೆದ ಕಾಣೋ ಅಜ ಪ್ರಾಣರ ।
ಪತ್ನಿಯರು ತಾವಾಗಿ ಪ್ರಜಾವಂತರಾದರು ದೇ ।
ವತ್ತಿಗಳ ಚರಿಯ ಯೆಣಿಸಾ ಸಲ್ಲ ।
ಸೂತ್ರನಾಮಕ ವಾಯು ಜನಿಸಿದ ತರುವಾಯ ।
ಅರ್ಥಿಯಿಂದಲಿ ಮೂರು ಹಾಯನ ಕಿವರು ।
ಅತ್ಯಂತ ಜಗದ್ಭರಿತ ವಿಜಯ ವಿಠಲರೇಯ ।
ಪುತ್ರ ಪುತ್ರಿಗಳಿಗೆ ವೈವಾಹ ಮಾಡಿದ ।೩॥

### ಝಂಪಿತಾಳ

ಮೂರು ವಿಧವದ ಅಹಂಕಾರ ತತ್ವವು ವೈ ।
ಕಾರಿಕ ತೈಜಸ ತಾಮಸ ಸೂಕ್ಷ್ಮಗಳು ।
ಭಾರತಿ ಸರಸ್ವತಿ ಪುಟ್ಟಿದ ವರುಷಯೆರಡು ।
ಮಾರಿ ಹೋಗಲು ಪುರುಷ ಪ್ರಕೃತಿಯಲ್ಲಿ ।
ವಾರುಣಿ ಪತಿ ಶೇಷ ಜೀವನಾಮಕನಾಗಿ ।
ಈರ ಭಾರತಿಗೆ ಕಾಲನಾಮಕ ಗರುಡ ।

ಈರ ಜನ ಜನಿಸಿದರು ಪ್ರದ್ಯುಮ್ನ ಕೃತಿಯ ಕು।
ಮಾರಿಗಳನೋಡೆ ಯೆರಡು ವರುಷಕೆ।
ನೇರದ (ನೆರದ) ಕಾಲನಾಮಕ ಗರುಡ ಪರ್ಯಂಕ।
ವಾರುಣಿ ಪತಿಯರು ಹರಿಯಸೇವಿಸುತ್ತ ।
ವಾರಿಜ ಸಂಭವನ ವರುಷಗಳು ಯಿಲ್ಲಿಗೆ।
ಆರೊಂದು ಸವೆದವು ಈ ಮಧ್ಯದಲಿ ಈ।
ಮಾರುತನು ಭಾರತಿಯು ಈರ್ವರು ಪುಟ್ಟಿದರು।
ಈರೆರಡು ಶಿರದವನ ವುದರದಲ್ಲಿ।
ಶಾರೀರವನೆ ತೆತ್ತು ಬಲಾಖ್ಯ ನಾಮದಲಿ।
ನಾರಿ ಕೂಡಲಿ ಮೆರದ ಮುಖ್ಯಪ್ರಾಣ।
ಮಾರ ವೈರಿಯು ಸನು ಜೀವ ನಾಮಕನು ಈ।
ಮಾರುತನಿಂದಲಿ ಪುಟ್ಟಿ ಪುನಹ ತಾನೆ।
ಪೂರುವದ ಜಯಸುತನ ಗರ್ಭದಲ್ಲಿ ಬಂದ ವಿ।
ಹಾರದಲಿ ಕಾಲನೊಡನೆ ಉರಗೇಶ।
ಸಾರುವೆನು ಜೀವ ಕಾಲಾಖ್ಯರಾರೊಂದು ವರುಷಕ್ಕೆ ।
ವಿರಿಂಚಿ ಬೊಮ್ಮನು ಪ್ರದ್ಯುಮ್ನ ಕೃತಿಗೆ ಕು।
ಮಾರನಾದನು ವೊಂದು ವತ್ಸರಕ್ಕೆ।
ಈ ರೀತಿಯನು ತಿಳಿ ಬೊಮ್ಮರಾಯಗೆ ಯಿಲ್ಲಿಗೆ
ಆರೆರಡು ವರುಷ ಹೋದವು ಹಿಂದಾಗಿ।
ಸಾರ ಹೃದಯರ ವಾಸ ವಿಜಯ ವಿಠಲರೇಯ।
ತಾರತಮ್ಯವ ಮಾಡಿ ಸಕಲರನು ಸಾಕುವ ॥೪॥

### ರೂಪಕತಾಳ

ಇದೆ ಅಜನು ತನ್ನ ಪತ್ನಿಯಾದ ವಾಣಿಯ ತ್ರಿ
ವಿಧರೂಪದಲಿ ಅಮೋಘ ವಿರ್ಯವಿಟ್ಟು।
ಅದನೆಲ್ಲ ಯೇಕತ್ರಯವ (ಯೇಕತ್ರ) ಮಾಡಿಗಾಯತ್ರಿ।

ಉದರ ದೊಳಗೆ ಯಿಟ್ಟು ಅವಳಿಂದ ತಾನೆವೆ ।
ಉದುಭವಿಸಿದನು ಬ್ರಹ್ಮನೆಂಬೊ ನಾಮದಲಿ ।
ಮುದದಿಂದ ಸೂತ್ರನಾಮಕ ವಾಯು (೧) ರೈ ವಾಣಿ ।
ವಿಧಿಕೂಡ ಜನಿಸಿದರು ಪುನಹ ಮುಂದೆ ಈ ।
ಪದುಮಗರ್ಭನು ಪ್ರಥಮ ರೂಪಳಾದ ಸ
ತ್ವದ ಗಾಯತ್ರಿಯಲ್ಲಿ ವೀರ್ಯವಿಟ್ಟು ।
ತದುಪರಿ ಬಲನೆಂಬೊ ಪ್ರಾಣನಿಂದಲಿ ಜನಿ
ಸಿದ ಜೀವ ನಾಮಕ ಶೇಷದೇವ ।
ಮೊದಲು ಉದುಭವಿಸಿದ ವೈಕಾರಿಕ ರುದ್ರ ।
ತದನಂತರದಲ್ಲಿ ಈರ್ವರ ಹೆಂಡರು
ಸದಮಲನಾಗಿ ಪುಟ್ಟಿಸಿದನು ಯಿತ್ತಲು ಗಾಯಿ ।
ತ್ರಿದೆಶೆಯಿಂದ ಬಂದ ವಾಯು ಭಾರತಿ ಯಲ್ಲಿ ।
ಒದಗಿ ಪುತ್ರರಾದರು ಉತ್ಸಹದಲಿ ರಜ ಅಂ
ಶದಲಿ ಗರುಡ ರುದ್ರ ಕಾಲ ತೈಜಸರೆಂದು ।
ಸುದತಿಯರೊಡನೆ ಪುಟ್ಟಿದರು ಗಡ ಆಮೇಲೆ ।
ವಿಧಿಯಿಂದ ಜನಿಸಿದ ಜೀವ ನಾಮಕ ನಿಂದ ।
ಉದಿತರಾದರು ತಾಮಸ ರುದ್ರ ಪಾರ್ವತಿ
ಮದನ ಕೋಟಿ ಲಾವಣ್ಯ ವಿಜಯ ವಿಠಲರೇಯ ।
ಅದು ಭೂತ ಶಕ್ತನು ಯೋಗಿಯೋಗೇಶ್ವರ ||೫||

## ಧ್ರುವತಾಳ

ಚತುರಾಸ್ಯ ಸೂತ್ರ ಜೀವನಾಮಕ ಶೇಷರಿಗೆ
ಸತುವ ರಾಜಸ ತಮೊಗುಣಾಂಶ ಸೂಕ್ಷ್ಮದಿ ।
ಉತ್ಪತ್ತಿಯಾದ ರುದ್ರನ ಮೂರು ರೂಪಗಳು ।
ನ್ನತವಾಗಿ ಮೆರೆದವು ವಿಷ್ಣು ಬ್ರಹ್ಮೇಶಯೆಂದು ।

ತತು ತತು ಗುಣದಿಂದ ಕರೆಸಿದ ವಿದರೊಳು |
ಸತುವ ಪ್ರಾಚುರ್ಯವುಳ್ಳ ವಿಷ್ಣುನಾಮಕರುದ್ರ |
ಸುತರನ್ನು ಪಡೆದನು ಬುಧ್ಯಭಿಮಾನಿಯಲ್ಲಿ |
ಚತುರರು ತಿಳಿವುದು ಅವರವರ ಪೆಸರು |
ರತಿ ಪತಿ ಸಮನೀತ ಅಹಂಕಾರಿಕ ಬೃಹ |
ಸ್ಪತಿಯಿಂದ್ರಾಣಿ ಶುಕ್ರ ಅನಿರುದ್ಧ ರುದ್ರರು ಸು |
ಮತಿವಂತ ನಿಋರತಿ ಮೂಷಕವಾಹ ವಿತ್ತ |
ಪತಿ ಸ್ವಾಹಾ ಸ್ವಧಾ ಬುಧ ಉಷ ಶನಿ ಪುಷ್ಕರ |
ಪಿತರು ಗಂಧರ್ವ ಸಮಸ್ತ ಮುಕ್ತ (ಮುಕ್ತಿಯೋಗ್ಯ) ಜನರು |
ಪ್ರತ್ಯೇಕವಾಗಿ ಜನಿಸಿದರು ಆಗಮ ಕೇಳಿ |
ಪ್ರತಿಮಾತು ಯಿನಿತರೊಳು ಸೂತ್ರನಾಮಕ ಭಾ |
ರತಿ ಪತಿಯಲ್ಲಿ ಜನಿಸಿದರು ವಿ |
ಪತಿ ಕಾಲನಾಮಕ ಇಂದ್ರ ಮೊದಲಾದವರು |
ಕೃತು ಅಭಿಮಾನಿಗಳು ನಿಜವೆನಿಸಿ ಸೂಕ್ಷ್ಮಸೃಷ್ಟಿ |
ಶಿತಮೊಗ ಸೌಪರಣಿಗೆ ಜಯ ವಿಷ್ವಕ್‌ಸೇನಾದಿ |
ಸುತರಾದರು ಕಾಣೊ ಉಚ್ಚಕ್ರಮಾನುಸಾರ |
ಹಿತವೆನ್ನು ಪುನರಪಿ ಸಮಸ್ತ ಪುಟ್ಟಿದ ದೇ |
ವತೆಗಳು ಸ್ಥೂಲದೇಹಯಿಚ್ಛೈಸುವರಾಗಿ |
ಅತಿಶಯದಿಂದಲ್ಲಿ ತಮ್ಮ ತಮ್ಮ ಅಂಶ ಮಿ |
ಳಿತವಾಗಿ ಶ್ರೀಹರಿಯಾಜ್ಞಾನುಸಾರದಿ |
ಕೃತಿ ಪತಿಯಾದ ಪ್ರದ್ಯುಮ್ನಸ್ವಾಮಿಯ ಉದರ |
ಗತಿ ತಪ್ಪದಂತೆ ಪ್ರವೇಶವಾದರು ಮುಂದೆ |
ಕೃತು ಭುಜ ಸಾವಿರ ವರುಷ ತನ್ನ ಗರ್ಭದಿ ಅ |
ಚ್ಯುತನು ಯಿಟ್ಟುಕೊಂಡು ಆಮೇಲೆ ಶಾಂತಿಯ |
ಪತಿಯು ಕೈಗೆ ಕೊಡಲು ಸರ್ವ ಜೀವರ ನೋಡಿ |
ಚತುರ ಮೂರುತಿ ಸ್ಥೂಲ ಗಾತ್ರವನ್ನೆನಿ |

ರ್ಮಿತ ಮಾಡಲಾಗಿ ಪ್ರದ್ಯುಮ್ನ ತನ್ನಗರ್ಭದಿ ನ ।
ಗುತ ಪೊಂದಲಿಟ್ಟುಕೊಂಡ ಯಿಲ್ಲಿಗೆ ಅಜನಬ್ದ ।
ಮಿತವಾದವು ಕೇಳಿ ಜೀವಕಾಲರ ವು ।
ತ್ಪತಿಯಾರಂಭಿಸಿ ದ್ವಯ ಸಂದಿದವು ಯೆಲ್ಲ ।
ಚತುರವಿಧ ಸೃಷ್ಟಿ ಮೊದಲು ಮಾಡಿ ಯಿಲ್ಲಿಗೆ ।
ಚತುರಾನನನ ವರುಷ ಹತ್ತು ಸಂದಿ ಪೋದವು ।
ಪ್ರತಿಯಿಲ್ಲದ ದೈವ ವಿಜಯ ವಿಠಲರೇಯ ।
ಸುತ್ತಿಸಿದವರಿಗೆ ಈ ಪರಿಯಿಂದ ಪ್ರೇರಿಸುವ ॥ ।೬॥

## ಝಂಪಿತಾಳ

ಸರಸಿಜ ಸಂಭವನ ಹನ್ನೊಂದನೆಯ ವರುಷ ।
ಬರಲಾಗಿ ಪ್ರದ್ಯುಮ್ನ ಅರ್ಧನಾರಿಯ ರೂಪ ।
ಧರಿಸಿದನು ವರ್ಣ ಭೇದದಿಂದಲಿ ।
ಸರುವ ಜೀವರನು ಸೃಜಿಸಿದನು ಹೆಂಗಳ ಪೂಂಸ ।
ಇರುತಿಪ್ಪದು ವಿಸ್ತಾರವಾಗಿ ।
ಅರಿಯಬೇಕು ಸವ್ಯಾಪಸವ್ಯದಿಂದ ಚ ।
ತುರ ಸ್ಥಾನವ ತಿಳಿದು ಮುಖಬಾಹು ವೂರಂಘ್ರಿ ।
ಪರಮೇಷ್ಠಿ ಅನಲ ಮರೀಚಾದ್ಯರು ।
ಧರುಣೀ ಸುರರೆನ್ನಿ ಮುಖದಿಂದ ಜನನ ।
ಮರುತ ಖಗಶೇಷ ಶಿವ ಇಂದ್ರಸ್ಮರ ರವಿ ಚಂದ್ರಾ ।
ದ್ಯರು ಕ್ಷತ್ರಿಯರು ಬಾಹುಜರು ಕಾಣೊ ।
ಎರಡೊಂದನೆ ಜಾತಿ ಉಳಿದ ಸೂರ್ಯರು ।
ರುದ್ರರು ವಸುಗಳು ಮಿಗಿಲಾದ ಜನರು ।
ಸರಿ ವೂರು ದೇಶಿಯಿಂದ ಪುಟ್ಟಿದ ವೈಶ್ಯರುಯೆನ್ನು ।
ಚರಣದಿಂದಲಿ ಜನಿತವಾದ ಶೂದ್ರಜಾತಿ ।

ನಿಋರತಿ ಭೂ ಮೃತ್ಯು ಕಾಲಾದ್ಯರು |
ಎರಡೆರಡು ಜಾತಿಗಳು ಪುಟ್ಟಿದರು ಯಿವರ ಹಿಂ
ಡರು ವಾಮ ಭಾಗದಿಂದ ಜನಿಸಿದರು |
ತರತಮ್ಯದಿಂದ ಸಾಧನ ಮಾಡುವ ಮುಕ್ತರು ಕಾಣೊ |
ಹರಿಗೆ ಪ್ರೀತಿವಂತರು ಹಿರಿದಾಗಿ ಗ್ರಹಿಸುವದು ಬ್ರಹ್ಮದೇ |
ವರ ಹತ್ತುವರುಷ ಪರಿಯಂತ ಪ್ರದ್ಯುಮ್ನದೇವ |
ಮಿರಗುವ ಅರ್ಧನಾರಿ ವೇಷವಧರಿಸಿ |
ವಿರಚಿಸಿದ ಸೃಷ್ಟಿಯನೆ ಜಾತಿ ಭೇದ |
ಪರಿತೋಷದಿಂದಲಿ ಇಲ್ಲಿಗಬ್ಜ ಭವನ |
ವರುಷ ವಿಂವಶತಿ ತುಂಬಿದವು ನೋಡಾ |
ತರುವಾಯ ಪ್ರದ್ಯುಮ್ನ ದೇವನು ಸರ್ವ ಜೀ |
ವರನು ಅಂಕುರಗೈಸಿ ಅನಿರುದ್ಧನ |
ಕರಕೆ ಕೊಡಲಾಗಿ ಕೈಕೊಂಡು ಶಾಲ್ಯಾದಿ ಅಂ |
ಕುರ ಪ್ರಕಾರದಲಿದ್ದ ಲಿಂಗಗಳನ |
ನಿರುತ ಪ್ರಕೃತಿಯಿಂದ ಬಂದುದೆ ಯಿದು ಸತ್ಯ |
ಪರಮ ಜ್ಞಾನಿಗಳು ಯಿನಿತು ಸಂಗ್ರಹಿಸ ಬೇಕು |
ವರ ಪ್ರಳಯ ಜಲದಲ್ಲಿ ಯಿಂತು ಸೃಜಿಸಿತು ಸೂಕ್ಷ್ಮ |
ತರವಾದ ದೇಹಗಳು ಪ್ರಾಪ್ತವಾಗಿ |
ಸುರ ದಾನವರೊಡೆಯ ವಿಜಯ ವಿಠಲರೇಯ |
ಕರುಣಾಕರ ಕೇಳೊ ಕಾರುಣ್ಯವಾಳ್ಪ ||೭||

### ಮಟ್ಟತಾಳ

ಸರಸಿಜ ಸಂಭವನ ಯಿಪ್ಪತ್ತೊಂದನೆಯ |
ವರುಷ ಪ್ರಾಪ್ತವಾದ ಮೊದಲುದಿವಸದಲಿ |
ಚರಿಯ ಮಾಡಿದ ದೇವ ಅನಿರುದ್ಧನಾಮಕನು |
ಸರುವ ಜೀವರಾಶಿಗಳನು ತೆಗೆದು ಕೊಂಡು |

ಧರಿಸಿದನು ತನ್ನ ಉದರದೊಳಗೆ ಅಂದು ।
ಎರಡೊಂದು ಗುಣದೊಡನೆ ಶಾಂತಿ ದೇವಿಯಲ್ಲಿ ।
ಇರತಕ್ಕವರನು ಮಾಡಿಯಿಟ್ಟನು ಗಡ ।
ಸಂಸವಾಗಿದೆ ನೋಡಿ ಗುಣದ ವಿಚಾರ ವಿ ।
ವರವ ತಿಳಕೊಂಬುವದು ಚನ್ನಾಗಿ ಜನರು ।
ಎರಡೊಂದು ಗುಣವು ವರ್ಣಿಸಬೇಕಾದಡೆ ।
ಪರಿ ಪರಿ ವಿಧಿಯುಂಟು ವೊಂದರೊಳಗೆ ವೊಂದು ।
ಸರಿ ಬೆರಸಿ ಬೆರಸಿ ಅಚ್ಚ ಅಚ್ಚನಾಗಿ ।
ಇರುತಿಪ್ಪರು ಕೇಳೊ ಮಹದಾದಿಗಳೆಲ್ಲ ।
ಸರಸಿಜ ಜಾಂಡಕ್ಕೆ ಉಪಾದಾನವಾದ ।
ಪರಮಾಣುಗಳಿಂದ ಮೂಲಪ್ರಕೃತಿ ಗಣಣೆ ।
ಕುರುಹು ಕಾಣಲಿಬೇಕು ಗುಣಸಾಮ್ಯ ವೈಷಮ್ಯ ।
ಹರಿಯೆ ಸ್ವತಂತ್ರನೆ ನೀನಲ್ಲದೆ ಮತ್ತೆ ಪರ ದೇವತೆಯುಂಟೆ ।
ತರಣಿ ಮಂಡಲದೊಳಗೆ ಕತ್ತಲೆಯನು ಪೊಗಿಸಿ ।
ಧರೆಯೆಲ್ಲಾ ತನೆ ಪೇಳಿಕೊಂಬೆನು ಯೆಂದೂ ।
ಭರದಿಂದಲಿ ಕುಳಿತು ಜನಿಸಿದ ನರನ ತೆರದಿ ।
ಹರಿಗೆ ಮಾಯವ ತಂದು ಪೊಂದಿಸುವದರಂತೆ ।
ವರಲುವೆ ವದನದಲಿ ಕರದಿಂದಲಿ ಮಿಥ್ಯ ।
ಬರದು ನೋಡಿದರೆ ಯೇನಾಗುವದೊ ಪಾಪಿ ।
ವರಣಗಳಿಗೆ ಭೇದ 'ಮಿ' ಎಂಬುದು ವೊಂದು ।
ಎರಡನೆ ಅಕ್ಷರ 'ಥ್ಯಾ' ಯೆಂದು ನುಡಿಯಿತಲ್ಲೊ ।
ಚಿರಕಾಲ ನೀನೆಯೆಲ್ಲಾ ವಂದೆಯೆಂಬಾತುರ ವು ।
ತ್ತರ ವ್ಯಾಕೆ ಬರದು ಓದಿನೋಡಿ ಪೂರ್ವೋ ।
ತ್ತರ ಸಂಗತಿ ಅರಿತು ಗುಣಿಸಲಾಗಿ ಭೇದವೆ ।
ತೋರುವದು ಪರ ಇಹ ಲೋಕದಲಿ ।
ಎರಡೊಂದು ಗುಣ ನಿಯಾಮಕ ವಿಜಯ ವಿಠಲರೇಯ ।
ತರುಳನಂದದಿ ಬಾಲಕ್ರೀಡೆಯಾಡುತಿಪ್ಪ ॥೮॥

### ರೂಪಕತಾಳ

ತತು ಪೂರ್ವದಿಂದ ಲಿಂಗ ಕಾರ್ಯವಿಡಿದು ।
ಉತ್ಪತ್ತಿಯಾದ ಕ್ರಮದಂತೆ ಬ್ರಹ್ಮವಾಯು ಸರ
ಸ್ವತಿ ಭಾರತಿಯಿಂದ ಪುಟ್ಟಿದರು ಪಾರ್ವತಿ ।
ಪತಿತನಕ ಆದರಂತೆ ಗುಣಿಸದು ಪ್ರ ।
ಕೃತಿಕಾರ್ಯವಿದು ಸಿದ್ಧ ಬಾಹ್ಯಾಂಡದಲಿ ಸತ್ಯ ।
ಚತುರ ವಿಶಂತಿ ತತ್ವ ಕಾರಣ ಕಾರ್ಯಭಾವ ।
ಪತಿತರು ಈ ಪರಿಯಿರಲಿಕ್ಕೆ ಭುವನಕ್ಕೆ ।
ಪತಿತ ವೇನಹುದೆಂದು ಕೂಗ್ಯಾಡುವರು ಗಡ
ಮೃತಜೀವಿ ಹತಭಾಗ್ಯ ಜೀವೇಶ ವೊಂದೆಂಬ ।
ಕಥೆಯು ಪೇಳುವದೆತ್ತ ಭುವನದಲ್ಲಿ ।
ಚತುರವಿಧ ದೋಷರಹಿತಗೆ ಜೀವನ ಕೂಡ ।
ಪ್ರತಿ ಪ್ರತಿ ಕಲ್ಪದಲಿ ಐಕ್ಯವೆಂತೊ ।
ಮತಿಹೀನ ಕೇಳೊ ಪರಬ್ರಹ್ಮ ಜೀವ ಭಾವ ।
ಕ್ಷಿತಿಯೊಳಗೈದಿದೆ ವೆಂಬೊದಲ್ಲದೆ ಸಿರಿ ।
ಪತಿಜೀವವೆ ಆದಯೆಂಬದು ಪುಶಿಕಾಣೊ ।
ಸತುವ ಪ್ರವೃತ್ತಿಗಳು ಆತನಾಧೀನದಲಿ ।
ಮಿತವಾಗಿ ಯಿರಲಿಕ್ಕೆ ಆಹರಿಗೆ ಸಂತತ ।
ತತು ತತು ತತು ಜೀವರ ಪೆಸರುಗಳುಂಟು ।
ತತ್ತ್ವ ತತ್ವದನಾಮ ಸ್ಥಿರವಾಗಿ ಯಿಪ್ಪದು ।
ಮತಿಗೆ ಗೋಚರಿಸುವ ಬಗೆ ಮನುಜ ಮಾ ।
ರುತ ಬಂಧಕಾಷ್ಟದಿ ದ್ರವ್ಯದಿಂದಲಿ ಕರ ।
ವುತ ಲಿಪ್ಪರು ನೋಡೊ ಆನರಗೆ ಅದೆ ಪೆಸರೆ ।
ಶ್ರುತಿ ವಿರುದ್ಧವು ಕಾಣೊ ಯಿನಿತೆಂದು ಸ್ಥಾಪಿಸಲು ।
ಹತವಾಗುವದು ಪೂರ್ವ ಪುಣ್ಯದಿಂದ ।

ರತಿ ಪತಿ ಪಿತ ನಮ್ಮ ವಿಜಯ ವಿಠಲರೇಯನ |
ಸ್ತುತಿಸಬೇಕು ನಿತ್ಯ ಈ ಪರಿಯಲಿ ಗುಣಿಸಿ ||೯||

ತ್ರಿವಿಡಿ ತಾಳ

ಕಮಲಪೀಠನಿಂದ ಪುಟ್ಟಿದ ಜೀವನೇ ಶೇಷ |
ತಮೊಗುಣದ ರುದ್ರನ್ನ ಸತಿ ಸಮೇತದಿ ಪಡೆದ |
ಉಮೆಯರಸನಿಂದ ಸುತ್ರಾಮ ಮನುಮಥನ |
ಜನನವಾದರು ಕಾಣೊ ಯೋಗದಿಂದ |
ಕ್ರಮವನ್ನೆಕೇಳಿ ಅಹಂಕಾರದಲಿ ತ್ರಿರೂಪ |
ಸಮನಾಗಿ ಯಿಪ್ಪಮಹರುದ್ರ ತನ್ನ |
ಯಮನೇಮ ಅಷ್ಟಾಂಗ ಯೋಗದಿಂದಲಿ ಪರಾ |
ಕ್ರಮಶಾಲಿ ಶಿವವೊಂದೆ ದೇಹನಾದ |
ಉಮಿಗೆ ಅರ್ಧಾಂಗವನೆ ಕೊಟ್ಟು ಎಡಬಲದಿಂದ |
ಸುಮನಸರ ಪಡೆದನು ಲೀಲೆಯಿಂದ
ಅಮರೇಶ ವಿಷ್ಣು ರವಿಧಾತ ಪೂಷ ತ್ವಷ್ಟಾ |
ರ್ಯಮ ಭಗ ಮಿತ್ರ(೧) ಯಾದಸಾ ಪರ್ಜನ್ಯ |
ಸಮ ವಿಷಮ ವುಂಟು ಸವಿತಾದೊಡನೆ ಮುಂದಣಾ |
ಗಮ ಕೇಳಿ ದಶ ವಿಶ್ವರುದ್ರ ಹನ್ನೊಂದು ಉ |
ತ್ತಮರುಂಟು ಮರುತಗಳು ವೊಂದು ಕಡಿಮೆ ಸಂಖ್ಯ |
ವಿಮಲರು ಭೂಗಂಧರ್ವ ಋಷಿಯಕ್ಷಸಿದ್ಧ |
ತಮ ತಮಗೆ ಜನಿಸಿದರು ರಮಣೀಯ ಮನದಿ |
ಸಮಸ್ತಜನ ಸರ್ವಸ್ಥಾವರ ಜಂಗಮ ವೆಲ್ಲಾ |
ತುಮದಿಂದ ಪುಟ್ಟಿಸಿದ ಕರಣಗಳಿಂದ |
ಉಮೆಯ ಎಡಭಾಗದಿಂ ಸ್ತ್ರೀಯರನ ಪಡೆದು ಅನು |
ಸಮಳೆನಿಸಿ ಕೊಂಬಳ್ಳೈ ಲೋಕಾಂಬಿಕೆ |
ಹಿಮಕರ ಭೂಷಣನು ಹದಿನಾಲ್ಕು ವತ್ಸರ ಮಾನ |

ಕಮಲ ಭವನಿಗೆ ಸಲ್ಲುವದು ಗಣಿತ |
ಅಮಮ ಈತನ ಶಕ್ತಿ ಪೊಗಳಲೊಶವೆ ತಿರುಗಿ |
ಸಮನಾಗಿ ನಿಂತವು ರೂಪತ್ರಯ |
ಉಮೆಯರಸ ಬ್ರಹ್ಮದೇವರ ವೊಂದು ವತ್ಸರ |
ರಮೆಯರಸ ನಂಘ್ರಿಯನು ವೈರಾಗ್ಯದಿ ·
ಸಮಬುದ್ಧಿಯಲಿ ಭಜಿಸಿ ವರವ ಪಡೆದೊಂದೊಂದು |
ಕ್ರಮದಿಂದ ತಾಳಿದ ಮೂರು ರೂಪ |
ಅಮಿತ ಪ್ರತಾಪ ಸಿರಿ ವಿಜಯ ವಿಠಲನಿಗೆ |
ಸಮರ್ಪಿಸಿ ಸರ್ಗವನು ಮಾಡಿದನು ಮಹೇಶ ||೧೦||

## ಧ್ರುವ ತಾಳ

ವೈಕಾರಿಕ ಗುಣದಿಂದ ಮನಸ್ತತ್ವ ದಿಗ್ದೇವತೆ |
ಪಾಕ ಶಾಶನ ಪ್ರಾಣ ವರುಣಾಶ್ವನೇಯ ವನ್ಹಿ |
ಲೋಕ ಲೋಚನ ಯಜ್ಞ ಮಿತ್ರದಕ್ಷ ಪ್ರಜೇಶ |
ವಾಕು ವಿಕ್ಕಾದದಕೆ ಅಭಿಮಾನಿಗಳಿವರು |
ನೀಕೇಳು ತೈಜಸ ಗುಣ ರುದ್ರನಿಂದಲಿ |
ಏಕೇಕ ಯೆಂಟು ಯಿಂದ್ರಿಯಂಗಳುದ್ಭವ |
ಬೇಕಾದ ಮಾತು ತಾಮಸ ಗುಣ ರುದ್ರನಿಂದ |
ಆಕಾಶ ಶಬ್ದ ಮಾತ್ರ ಭೂತಂಗಳು ಪಂಚ |
ಈ ಕ್ರಮಕ್ಕಾಗುವ ದಿವಸದೊಳಗ ದಿ |
ವಾಕರ ಖಗ ಶೇಷ ರುಂದ್ರೇಂದ್ರರು ತ್ಯಕ್ತ ವೈ |
ದೀಕ ಮಾರುತ ಭಾರತಿಯಲ್ಲಿ ಜನಿಸಿದರೀ |
ಪಾಕ ಶಾಶನ ಶೇಷ ಗರುಡಾದ್ಯರಿಗೆ ನೀಚ |
ನಾಕ ವಾಸಿಗಳು ಯೋಗಾಭಿಮಾನಿಗಳೆಲ್ಲ |
ತಾ ಕುಮಾರರಾಗಿ ಜನಿಸಿದರು ತಾವೆ |

ಸಾಕುವ ಜನರೊಡನೆ ಆನಂದದಿಂದಲಿ ।
ಲೋಕೈಕನಾಥ ರುದ್ರನೊಂದು ವತ್ಸರವು ಅ ।
ನೇಕ ಬಗೆಯಿಂದ ತಪ ಮಾಡಿದಾರಭ್ಯ ।
ಈ ಕಥೆಗೆ ಕೇಳಿ ಅಜನಬ್ದ ಮೊದಲಿಂದ ।
ಏಕ ವಾಕ್ಯ ಮಾಡಲು ಮೂವತ್ತೈದು ಸಂದಿದವು ।
ಶ್ರೀಕಂಠ ಮಾಡಿದನು ಹದಿನೈದು ವರುಷ ಸೃಷ್ಟಿ ।
ಗೋಕುಲಧರ ಪಾವನ ವಿಜಯ ವಿಠಲರೇಯ ।
ಶ್ರೀ ಕಾಂತೆಯ ಕೂಡ ನಲಿ ನಲಿದಾಡುವ ॥೧೧॥

## ತ್ರಿವಿಡಿ ತಾಳ

ಭೂತನಾಥನು ಮೂರು ರೂಪವನ್ನೆ ಧರಿಸಿ ।
ಮಾತೃವೊದಲಾದ ಜಡಜೀವಿಗಳ ।
ಪ್ರೀತಿಯಿಂದಲಿ ಪಡೆದು ಸುಮ್ಮನಾದನು ಮುಂದೆ ।
ಯಾತಕ್ಕೆ ಸೂಚಿಸದೆನಿಂದ ನಾಗ ।
ಸ್ವತಂತ್ರವಿಲ್ಲದೆ ತತ್ವ ತತ್ವೇಶ್ವರರು ।
ಭೀತಸ್ಥರಾಗಿ ಈ ಬೊಮ್ಮಾಂಡವ ।
ನೀತಿಯಿಂದಲಿ ತತ್ವ ತತ್ವಕ್ಕೆ ಸಂಯೋಗ ।
ಚಾತುರ್ಯ ತೋರದೆ ಹರಿಯ ತುತಿಸೆ ।
ಧಾತು ಪ್ರತೀಕಾದಂತೆ ಯಿದ್ಧಾಭಿಮಾನಿಗಳು ।
ಆತುಮ ದೊಳಗೆ ಪ್ರವಿಷ್ಟನಾಗಿ ।
ಗಾತುರ ನಿಲಿಸಿದ ತತ್ವದೊಳಗೆ ಪೊಗಿಸಿ ।
ತಾತ್ವಿಕ ಜನರಿಂದ ಸಂಯೋಗದಿ ।
ಈ ತೆರದಲಿ ಸಮಸ್ತಾವರಣಾಂಬುಜ ।
ಜಾತಾಂಡ ಮಾಡಿದ ಶಕ್ತಿ ಪ್ರದನು ।
ಓತಪ್ರೋತನಂತೆ ಸರ್ವಾಧಾರನಾಗಿ ।
ಚೇತನರ ಪಾಲಿಸುವ ಅನುಕಂಪದಿ ।

ಶಾತ ಕುಂಬೋದರನ ಹತ್ತು ವತ್ಸರವಿಲ್ಲಿಗೆ |
ಮಾತು ನಿಶ್ಚಯ ನಾಲ್ವೈತ್ತೈದು ವರುಷ |
ದ್ವೈತ ಜನರ ಪ್ರೀಯ ವಿಜಯ ವಿಠಲರೇಯ |
ತಾತನಾಗಿ ಎಲ್ಲರನ ಸಾಕುತಲಿಪ್ಪ ||೧೨||

## ಧ್ರುವತಾಳ

ಇತ್ತಲಿತ್ತಲು ಕೇಳಿ ಸಲಿಲಾವೃತ ಭೂಭಾಗದಲಿ |
ಚಿತ್ತಜ ಜನಕ ಸಿರಿ ವಾಸುದೇವ |
ಮೂರ್ತಿ ಮಾಯಾದೇವಿಯರ ಸಮೇತವಾಗಿ ಸ |
ಮಸ್ತ ಚೇತನರಾಶಿ ಸರ್ವಾಂಶದಲ್ಲಿ ಕೂಡಿ |
ಅತ್ಯಂತವಾಗಿ ಕ್ರೀಡಿಸಿದ ಎರಡು ವರುಷ |
ಸತ್ಯವಾಯಿತು ಯಿಲ್ಲಿಗಜನಬ್ದ ನಾಲ್ವತ್ತೇಳು |
ಮತ್ತೆ ಮಹಲಕುಮಿ ದೇವನ ವೊಂದು ವತ್ಸರ |
ತುತ್ತಿಸಿ ಆರಾಧನೆ ಮಾಡಿದಳು |
ಸತ್ವಗುಣಕೆ ಶ್ರೀ ಭೂ ದುರ್ಗ ರಜೋ ತಮಕೆ |
ಪ್ರತ್ತ್ಯೇಕ ರೂಪಂಗಳು ಧರಿಸಿದಳು |
ಅತಿಶಯವೇನೆಂಬೆ ಶ್ರೀ ಭೂ ದುರ್ಗಾದೇವಿ |
ಪೆತ್ತಳು ವಿಷ್ಣು ಬ್ರಹ್ಮರುದ್ರರೆಂದು |
ಉತ್ತುಮ ಶ್ಲೋಕ ತಾನೆ ವಿಷ್ಣುವಾಗಿ ಜನಿಸಿದ |
ಸತ್ಯ ಲೋಕೇಶ ಬ್ರಹ್ಮರುದ್ರರು ಭಿನ್ನಾಂಶರು |
ಉತ್ಪತ್ತಿ ಮಾಳ್ಪನೊಬ್ಬ ಸ್ಥಿತಿಗೊಬ್ಬ ಸಂಹಾರ |
ಕರ್ತನಾಗಿಪ್ಪನೊಬ್ಬ ಮೂರು ಮೂರ್ತಿಗಳಿದಕೊ |
ಆತ್ಮಾಂತರಾತ್ಮ ವಿಜಯ ವಿಠಲರೇಯ |
ನೇತ್ರದೊಳಗೆ ಯಿದ್ದು ಸರ್ವ ವಸ್ತು ಕಾಣಿಸುವ |೧೩||

## ಅಟ್ಟತಾಳ

ಸತ್ವಾಭಿಮಾನಿ ಶ್ರೀ ದೇವಿಯಲ್ಲಿ ಯಿ |
ಪ್ಪತ್ತು ನಾಲ್ಕು ತತ್ವಾಂಶ ಮಿಳಿತ ಮಾಡಿ |
ಉತ್ತಮ ಶ್ಲೋಕ ವಿಷ್ಣುನು ವೀರ್ಯವನಿಟ್ಟು |
ಎತ್ತ ನೋಡಿದರತ್ತ ಐವತ್ತು ಕೋಟಿಯು |
ವಿಸ್ತಾರ ಖರ್ಪರ ಬ್ರಹ್ಮಾಂಡ ಸುವ |
ರ್ಣಾತ್ಮಕವಾದ ತೇಜೊ ರಾಶಿಯಿಂದ ಉ |
ತ್ಪತ್ತಿ ಮಾಡಿದನು ವಾರಿ ರಾಶಿಯ ಮಧ್ಯ |
ಮತ್ತೆ ಬ್ರಹ್ಮನಾಮಕ ಪರಮಾತ್ಮ ಸ |
ಮಸ್ತ ದೇವಾಂಶರ ನುಂಗಿದನು ಮಹ |
ತತ್ವದೊಡೆಯನಲ್ಲಿ ಪ್ರವಿಷ್ಟನಾದನು |
ಪ್ರತ್ಯೇಕ ರುದ್ರನಾಮಕ ಭಗವಂತನು |
ತತ್ತಳಿಸುವ ಅಹಂಕಾರಾಭಿಮಾನಿಯ |
ಗಾತ್ರದೊಳಗೆ ಪೊಕ್ಕಸೀರುದ್ರನು ಸ |
ರ್ವೋತ್ತಮ ನಾರಾಯಣನ ಆಜ್ಞೆಯಿಂದ |
ಅರ್ಥಿಯಿಂದಲಿ ಬೊಮ್ಮರಾಯನೊಳಗೆ ಪೊಕ್ಕಾ |
ಚಿತ್ತಾಭಿಮಾನಿಯಾಗಿದ್ದ ಬ್ರಹ್ಮಸರ್ವ |
ಆತ್ಮಗಣಂಗಳ ಸಹಿತನಾಗಿ ಪುರು |
ಷೋತ್ತಮ ವಿಷ್ಣುನಾಮಕನಲ್ಲಿ ಪೊಕ್ಕನು |
ಪ್ರತ್ಯಕ್ಷಯಿದು ಸಿದ್ಧ ಪ್ರಕೃತಿನಾಮಕ ಶ್ರೀ |
ಪೊತ್ತಳು ತನ್ನ ವುದರದಲ್ಲಿ ಹರಿಯಿಂದ |
ಪತ್ನಿ ಸಹಿತವಾಗಿ ವ್ಯಾಪ್ತ ವಿಷ್ಣು ಲೀಲಾ |
ಮಾತ್ರದಿ ಬ್ರಹ್ಮಾಂಡವ ಪ್ರವೇಶಿಸಿದನು |
ನಿತ್ಯವಾದ ವೈಕುಂಠದಲ್ಲಿ ವಿ |
ಚಿತ್ರ ಸೇವೆಯಗೊಂಬ ಸ್ವಮೂರ್ತಿಗಳ ನೋಡಿ |

ೂಡನೆ ತಾನೆ ಅಲ್ಲಿ ವಾಸವಾಗಿ ।
ರ್ಯವನು ಮಾಡಿದನು ಬ್ರಹ್ಮಾಂಡದೊ ।
ಬಿದ ಜಲಪೂರ್ಣವಾದದರಲ್ಲಿ ।
, ಮುಸುಕಿದ ಅಂಡಖರ್ಪರ ಬುಡ ।
ರೆಣಿಸಲಾಗಿ ಮೇಲು ಭಾಗಕೆ ತಿಳಿ ।
ು ಕೋಟಿಗಾವುದ ಪ್ರದೇಶದಿ ।
ುಗ ಪರಿಯಂತ ದೇವ ನ ।
ಮಲಗಿದ ಗರ್ಭೋದಕದೊಳು ।
ತ್ಸಲ ನಮ್ಮ ವಿಜಯ ವಿಠಲರೇಯ ।
ಪುರುಷಯಿಂತು ಸರ್ಗಮಾಡಿದನು ।।೧೪।।

### ಆದಿತಾಳ

ಕಾಲವೆ ವಿಡಿದು ಯೆರಡು ವರ್ಷ ಪರಿಯಂತ ।
ವಾಸುದೇವನ ಸರ್ಗ ಪುರುಷ ಜನನ ।
ರದಲ್ಲಿ ಸಂಕರುಷಣ ಸೃಷ್ಟಿ ।
ಂದ ತ್ರಯ ವತ್ಸರ ಮುಖ್ಯ ಪ್ರಾಣನ ಜನನ ।
ಶರುವಾಯ ಪ್ರದ್ಯುಮ್ನ ದೇವನ ।
ೂತಸೃಷ್ಟಿ ಎರಡು ವರುಷ ವಾಣಿ ಭಾರತಿ ।
ರ ಕಾಲವೆನ್ನಿ ಆಮೇಲೆ ಪುರುಷ ನಾಮಕ ।
ಜ ಪ್ರಾಣನಿಂದ ಸರ್ಗವೊಂದು ವತ್ಸರ ।
ನಿಗೆ ತಿಳಿ ಬೊಮ್ಮವಾಯುಜೀವ ನಾ ।
್ರ ಶೇಷಾದಿಗಳ ಸರ್ಗವೆರಡು ವರುಷ ।
ರ್ರೋಯಿತು ಪ್ರದ್ಯುಮ್ನ ಅರ್ಧನಾರಿ ವೇ ।
ಸೃಷ್ಟಿಮಾಡಿದ ಬೊಮ್ಮನ ಹತ್ತು ವರುಷ ।
ುಕ್ಕ ಸಂವತ್ಸರ ರುದ್ರನು ಅರ್ಧನಾರಿ ರೂ ।
ನೂಡಿದ ಸೃಷ್ಟಿ ಸಮಾಧಿ ವೊಂದು ವರುಷ ।

ಇದನೆ ಗುಣಿಸುವದು ಆವರ್ಣ ಹತ್ತು ಕಲ್ಪ ।
ಉದಕಾವೃತ್ತದ ಕ್ರೀಡೆ ದ್ವಯ ವತ್ಸರ ।
ಪದುಮೆ ಸ್ತೋತ್ರ ವೊಂದು ವರುಷ ಯಿಲ್ಲಿಗೆ ಸಂ ।
ದಿದವು ನಾಲ್ವತ್ತೆಂಟು ಹಯನ ವುಳಿದ ಲೆಕ್ಕ ।
ಪದುಮ ಜಾಂಡ ಉತ್ಪತ್ತಿ ಬ್ರಹ್ಮೇಶ ರೂಪಗಳು ।
ವಿಧಿಭವರೊಳಗೆ ಪ್ರವೇಶವಾದ ಮರ್ಯಾದಿ ।
ಇದು ಮೊದಲಾಗಿ ಮಿಕ್ಕಾದ ಕಥೆಗಳೆಲ್ಲ ।
ತುದಿಯಿಂದ ಯೆಣಿಸಲು ಯಿಲ್ಲಿ ಗೈವತ್ತು ವರುಷ ।
ಪದುಮ ಗರ್ಭಗೆ ಸಂದಿದವು ಈ ತರುವಾಯಾ ।
ದದು ತಿಳಿಯಬೇಕು ಸೋತ್ತುಮರಿಂದ ಕೇಳಿ ।
ಪದುಮ ವಿರಾಟ ವರಹಕಲ್ಪ ವೆನಿಸಿ ಅಂ ।
ದದಲಿ ಶೋಭಿಸುತಿವೆ ವಿಸರ್ಗನಾಮದಿಂದ ।
ಮಧುಹಾ ವಿಜಯ ವಿಠಲ ಸ್ವತಂತ್ರತಾನಾಗಿ ।
ಪದುಮೆ ಕೂಡ ರಮಿಸಿ ತ್ರಿಭುವನ ಪುಟ್ಟಿಸುವ ॥೧೫॥

**ಜತೆ**

ಇಲ್ಲಿಗೆ ಬಾಹ್ಯಾಂಡಾ ಸಿದ್ಧವಾಯಿತು ಸಿರಿ ।
ವಲ್ಲಭ ವಿಜಯ ವಿಠಲ ನಿಂದ ಕ್ರಮದಿಂದ ॥೧೬॥



## ಚಿಪ್ಪಗಿರಿ ಪುಸ್ತಕದಲ್ಲಿ ಬರೆದುದು ಸೃಷ್ಟಿಕ್ರಮ

೬ ಪ್ರಾಕೃತಸೃಷ್ಟಿ

೩ ವೈಕೃತಸೃಷ್ಟಿ
೧ ದೇವತೆಗಳ ಸರ್ಗ

---

೧೦ ವಿಧವು

---

ಪ್ರಾಕೃತಸೃಷ್ಟಿ
(೬) ವಿಧ ವಿವರ
೧ ಗುಣವೈಷಮ್ಯ
೧ ಮಹತತ್ವ
೧ ಅಹಂಕಾರಿಕ
೧ ವೈಕಾರಿಕ ಮನಸ್ಸು
೧ ತೈಜಸ
ಜ್ಞಾನಕರ್ಮೇಂದ್ರಿಯಗಳು
೧ ತಾಮಸ
ಪಂಚತನ್ಮಾತ್ರಾ
ಪಂಚಭೂತಗಳು

---

೬ ವಿಧ ಪ್ರಾಕೃತ

---

೮ ವಿಧ ದೇವತೆಗಳ ಸೃಷ್ಟಿ

---

೧ ದೇವತೆಗಳು
೧ ಪಿತೃಗಳು
೧ಋಷಿಗಳ
೧ ಗಂಧರ್ವರು
೧ ಅಪ್ಸರರು
೧ ಯಕ್ಷರು
೧ ಸಿದ್ಧರು
೧ ಚಾರಣರು

---

೮ವಿಧವು

---

ವೈಕೃತಸೃಷ್ಟಿ ಬ್ರಹ್ಮಾಂಡ
ದೊಳಗೆ
೧ ಸ್ಥಾವರಗಳು
೧ ಪಶುಗಳು
೧ ನಿತ್ಯಸಂಸಾರಿಗಳು
೧ ತಮೋಯೋಗ್ಯ
ಮಿಕ್ಕಾದವರು

---

೪ ವಿಧವಾಗಿರುವವು

---

## ೪೫) ಸುಳಾದಿ

ರಾಗ: ಭೈರವಿ ಧ್ರುವ ತಾಳ

## ಬಹಿ ಬ್ರಹ್ಮಾಂಡ, ಬ್ರಹ್ಮಾಂಡ ಸೃಷ್ಟಿ ಸಂಕ್ಷೇಪದಿಂದ, ವರ್ಣಿಸುತ್ತಾ ವಿರಾಟಕಲ್ಪ, ಪದ್ಮಕಲ್ಪ, ಆದಿವರಾಹಕಲ್ಪ, ಮಿಥುನಸೃಷ್ಟಿ, ವಿಸ್ತಾರ ವಿಚಾರ

ಗುಣ ಕಾಲ ದೇಶ ವೇದ ಜೀವ ಲಕುಮಿ ನಾರಾ ।
ಯಃಣ ನಿತ್ಯ ವಸ್ತುವೆನ್ನಿ ಮಹ ಪ್ರಳಯದಲ್ಲಿ ।
ಯಿನಿತರೊಳು ಚಿತ್ರವುಂಟು ಪ್ರಮೇಯಗಳೊಂದೊಂದು ।
ತಿಳಿಕೊಂಬ ವಿಷಯಾದಲ್ಲಿ ಪರಿಪರಿಯಿಂದ ।
ಗಣನೆ ಮಾಡುವದು ಶ್ರೀ ಶೂನ್ಯನಾಮಕ ಬ್ರಹ್ಮ ।
ಗುಣ ಪರಿಪೂರ್ಣ ನಿತ್ಯ ಸ್ವತಂತ್ರ ಪುರುಷ ।
ಗಣನೆ ಅಸಂಖ್ಯ ಜೀವರಿಗೆ ಪ್ರೇರಕ ಮಹ ಪರಮ ।
ಮಣಿ ಸ್ಥಾನಿಯಾಗಿಪ್ಪ ಪರಬೊಮ್ಮನೊ ।
ಅಣೋರಣಿ ಅಪರಿಚ್ಛಿನ್ನ ಜಡಜೀವ ಭಿನ್ನಬೊಮ್ಮ ।
ತೃಣ ಜೀವಾದಿಸ್ಥಿತಿ ತತ್ತದ್ರೂಪ ।
ಪ್ರಣವ ಪ್ರತಿಪಾದ್ಯ ಮುಕ್ತಾಮುಕ್ತ ವಿವಿಧ ।
ಗಣರಾಶಿಗಳ ತನ್ನ ಗರ್ಭದಲ್ಲಿ ।
ಕ್ಷಣಕಾಲವಾದರು ಆಯಾಸ ವಿಲ್ಲದಲೆ ।
ಎಣೆಗಾಣೆ ಧರಿಸಿಹ ಲೀಲಾಮಾತ್ರ ।
ಭಣಗು ದೈವಂಗಳಿಗೆ ಯಿನಿತು ಪ್ರತಾಪವುಂಟೆ ।
ಗುಣಪೂರ್ಣ ಯೇಕೋಮೇವ ನಾರಾಯಣ ।
ಎಣಿಸಿ ಪೇಳುವದೇನು ಅನಾದಿಸಿದ್ಧ ಯಿಾ ।

ಕ್ಷಣದಿಂದ ತ್ರಿಲೋಕವ ಸುತ್ತಿಸುವ |
ಅಣುದ್ವ್ಯಣುಕ ತೃಣಕ ಕಾಲಾ ಮಿಗಿಲಾದ ಜೀವರಿಗೆ |
ಹೊಣೆಯಾಗಿ ಜನ್ಮಂಗಳು ಮಾಳ್ಪದು ಕಾಣೆ |
ಪ್ರಣುತಾರ್ತಿದೂರ ಹರಿ ಪ್ರಳಯಾಬ್ಧಿಯಲ್ಲಿ ಸ್ವ |
ಗಣಮೂರ್ತಿ ಯೇಕನಾಗಿ ಜೀವರ ಸಹಿತ |
ಎಣಿಕೆ ಬಾಲಕನಾಗಿ ವಟದಲ್ಲಿ ಮಲಗಿ ದ್ರು |
ಹಿಣ ದ್ವಾದಶಾರ್ಧ ವುಳದಿರಲಾಗ |
ಗುಣಕಾಲ ದೇಶ ವೇದ ಸರ್ವಾಭಿಮಾನಿ ಅಂ |
ಭ್ರಣಿ ಸ್ತುತಿಯನ್ನೆ ಮಾಡೆ ಉತ್ಸಾಹದಲ್ಲಿ |
ಮಣಿ ಭೂಷಣಾಂಗ ಸೃಷ್ಟಿನೆನದ ಆಕಾಲದಲ್ಲಿ |
ಮಣಿದು ನಮೊ ಯೆನ್ನೆ ತಾತ್ವಿಕರಾಗಿ |
ಫಣಿಶಯನ ಆದಿಮೂರ್ತಿ ವಿಜಯ ವಿಠಲ ಲ |
ಕ್ಷಣ ಪುರುಷ ನಾನಾರೂಪ ದ್ವಿವಿಧ ಏಕಮೇವನೊ ||೧||

## ಮಟ್ಟತಾಳ

ಇರಳು ಯಂಟನೆಭಾಗ ಸೃಷ್ಟಿ ಕಾಲವೆಂದು |
ಪರಮ ಜ್ಞಾನಿಗಳಿಂದ ಪೇಳುವದೆ ಸಿದ್ಧ |
ಹರಿ ತನ್ನರೂಪಗಳು ಮತ್ತೆ ಲಕುಮಿ ರೂಪ |
ತರುವಾಯ ಸಕಲ ಮುಕ್ತರ ರೂಪಗಳು |
ಹೊರಗೆ ತೆಗೆದು ಸರ್ವ ಬಗೆಯಿಂದ ಕ್ರೀಡೆ |
ಹರುಷದಿಂದಲಿ ಆಡೆಯಿದಕೆ ಸಾಧನ ನಿಜ |
ಪರಿಶುದ್ಧವಾದ ಸತ್ವಗುಣದಿಂದ |
ಶರಧಿ ಪರ್ವತ ನದಿ ಸರೊವರ ಗಜ ಅಂದಣ |
ತುರಗ ಪದಾತಿ ನಾನಾ ಭೋಗದ್ರವ್ಯ |
ಪುರ ಪಟ್ಟಣದಲ್ಲಿ ಸತ್ಯ ನಿರ್ಮಾಣದಲಿ |

ಚರಿತೆಯಾಡಿದನಯ್ಯಾ ಸಿರಿ ಮುಕ್ತರ ಕೂಡ ।
ಪರಿಪರಿ ರೂಪಗಳ ಧರಿಸಿ ದಾನವಾರಿ ।
ಯಿರುತಿಪ್ಪದು ಯಿಲ್ಲಿಗೆ ರಾತ್ರಿ ಯಷ್ಟಮ ಭಾಗ ।
ಸರಿಯಾಯಿತು ಮುಂದೆ ಹರಿ ತನ್ನವತಾರ ಯೇಕೀಭೂತವಾಗಿ ।
ಸಿರಿ ಮುಕ್ತರ ಅಂಶ ವೊಂದೆ ಮಾಡ ಪೇಳಿ ।
ಬರಲು ಉದಯಕಾಲ ಆತ್ಮಸೃಷ್ಟಿಯ ನೆನೆದ ।
ವರ ಮೂರ್ತಿ ವಾಸುದೇವಾದಿ ಚತುರಯ್ಯೂಹ ।
ಸಿರಿ ಧರಿಸಿದಳು ಮಾಯಾ ಜಯಾ ಕೃತಿ ಶಾಂತಿಯೆಂದು ।
ಕರೆಸಿ ಕೊಂಡಳೆಂದು ಕಮಲೆ ಕೋಮಲಗಾತ್ರೆ ।
ಪುರುಷ ನಾಮಕ ಅಜನ ವಾಸುದೇವ ಪೆತ್ತ ।
ಮರುತ ಸೂತ್ರನ ಸಂಕರುಷಣ ಸೃಜಿಸಿದನು ।
ಸರಸ್ವತಿ ಭಾರತಿಯ ಪ್ರದ್ಯುಮ್ನದೇವನು ಪೆತ್ತ ।
ಪುರುಷ ನಾಯಕ ಬ್ರಹ್ಮಸೂತ್ರನಾಮಕ ವಾಯು ।
ಭರದಿಂದಲಿ ಜೀವಾಭಿದಾನ ಶೇಷ ಕಾಲಾಖ್ಯ ।
ಗರುಡರ ಪೆತ್ತರಯ್ಯಾ ತಮ್ಮ ಸತಿಯರಲ್ಲಿ ।
ಮರಳೆ ವಿರಂಚಿಯಿಂದ ಪ್ರಕೃತಿಯ ಗರ್ಭದಲಿ ।
ಮರುತ ಜನಿಸಿದ ತತ್ಪತ್ನಿಯ ಸಂಗಡದಲಿ ।
ಮರತ ಸೂತ್ರನಿಗೆ ಶದ್ಧಾದೇವಿಯಿಂದ ।
ಗರುಡ ಶೇಷರೀರ್ವ ಜನರು ಪುಟ್ಟಿದರಂದು ।
ಪರಮ ರಹಸ್ಯವಿದು ಅಜನು ತನ್ನ ಪತ್ನಿ ।
ಸರಸ್ವತಿಯಿಂದ ಪುಟ್ಟಿದ ಪವನ ಸಹ ।
ಹರಿಯಿಚ್ಛೆಯಿಂಥಾದೆ ಪುನಹ ಪುರುಷ ಬ್ರಹ್ಮ ।
ಸರಸ್ವತಿಯಭಿಮುಖದಿ ವೈಕಾರಿಕ ಗುಣದಿ ।
ಉರಗ ರುದ್ರೇಂದ್ರರೆಂಬ ಕುವರರ ಪೆತ್ತನಯ್ಯ ।
ಪರಣ ಭಾರತಿಯಲ್ಲಿ ತೈಜಸಗುಣದಿಂದ ।

ಗರುಡ ರುದ್ರರೆಂಬ ಮಕ್ಕಳ ಹೆರದನಯ್ಯ ।
ಉರಗ ನಾಮಕ ಜೀವ ತಾಮಸ ಗುಣದಿಂದ ।
ಹರನ ಪುಟ್ಟಿಸಿದನು ವಾರುಣಿ ಪತಿ ಕರಿಸಿ ।
ತರುವಾಯ ಯಿವರಿವರ ಸತಿಯರು ಜನನ ವಾ ।
ದರು ತನು ತಮ್ಮ ಗತಿಗಳು ಪುಟ್ಟಿದಲ್ಲಿ ।
ಎರಡೊಂದಾಹಂಕಾರ ಪ್ರಭೇದ ಉತ್ಪತ್ತಿ ।
ಪುರುಷನಾಮಕ ಸೂತ್ರ ಜೀವ ನಾಮಕ ಫಣಿಯಿಂದ ।
ಮಿರುಗುತಿಪ್ಪದು ನೋಡೆ ಸೂಕ್ಷ್ಮ ಸೃಷ್ಟಿಸರ್ಗ ।
ಸರುವ ನಾಮಕ ನಮ್ಮ ವಿಜಯ ವಿಠಲರೇಯ ।
ಮೆರೆವ ಪುತ್ರ ಪೌತ್ರರಿಂದ ನಿಜೈಶ್ವರ್ಯ ।೨॥

**ರೂಪಕತಾಳ**

ಸಾವಿತ್ರಿಯಾದ ಪುರುಷನಿಂದಲಿ ಅಂದು ।
ಆ ವೈಕಾರಿಕ ರುದ್ರ ಸತ್ವಗುಣ ಪ್ರಾಚುರ್ಯ ।
ಭಾವದಿಂದಲಿ ತನ್ನ ನಾರಿಯ ವೊಡಗೂಡಿ ।
ದೇವೇಂದ್ರ ಕಾಮಾಹಂಕಾರ ಪ್ರಾಣಾನಿರುದ್ಧ ।
ದೇವಾಚಾರ್ಯ ಶುಕ್ರಶಶಿ ಭಾನು ಮೊದಲಾದ ।
ದೇವಾಂಶರ ಪೆತ್ತ ತೈಜಸ ತಾಮಸ ರುದ್ರ ।
ದೇವನು ಪ್ರಜ ಸರ್ಗ ನೆಸಗಲಿಲ್ಲವು ಕಾಣೊ ।
ಈ ವಿಚಾರದೊಳು ಗರುಡೇಂದ್ರಾಹಿ ರುದ್ರಯಜ್ಞ ।
ದೇವಾಭಿಮಾನಿಗಳು ಪ್ರಾಣನಿಂದುದ್ಭವ ।
ಶ್ರೀ ವಿಷ್ಣು ರಥನಿಂದ ಜಯಾ ವಿಜಯಾದ್ಯರ ಜನನ ।
ಕೋವಿದ ಪ್ರಾಣನಿಂದ ವಿಷ್ವಕ್ಸೇನೋದ್ಭವ ।
ದೇವಾನಿರುದ್ಧನು ತನ್ನಾಮಕ ದೇಹ ।
ಯಾವತ್ತು ಸಾಂಶ ಜೀವರಿಗೆ ಮಿಗಿಲಾದ ಜೀವರಿಗೆ ಕರುಣಿಸಿದ ।

ಆವಾವ ಬಗೆಯಿಂದ ಯೇಕಚತುರ್ವಿಂಶತಿ |
ಈ ವಿಧ ತಿಳಿವುದು ಪ್ರದ್ಯುಮ್ನ ದೇವನು |
ಸಾವಿರ ವರುಷ ತನ್ನುದರದಲ್ಲಿ ತಾಳಿ |
ಜೀವ ಸಮುದಾಯಕ್ಕೆ ಈಪರಿ ಮಾಡಿಸಿದ |
ಕಾಮು ಸೋದರನ ವತ್ಸರ ಹತ್ತು ಗ್ರಾಹ್ಯವೊ |
ದೇವಿರೆನಂದನ ವಿಜಯ ವಿಠಲರೇಯ |
ಪಾವನ ಮೂರ್ತಿಯ ವೈಭವ ನೋಡಿರೋ ||೩||

### ಝಂಪಿತಾಳ

ಅನಿರುದ್ಧನಿಂದ ತೆಗೆದುಕೊಂಡ ಪ್ರ |
ದ್ಯುಮ್ನ ನೆನದು ಅರ್ಧಾನಾರಿ ವೇಷವನ್ನು |
ಘನವಾಗಿ ವಾಮ ಭಾಗದಿಂದಲಿ ಸರ್ವ |
ಜನರ ಪುಟ್ಟಿಸಿದನು ವರ್ಣಭೇದ |
ವನಿತೆ ಪುರಷರನ್ನ ವೊಂದೊಂದು ಪೆಸರಿನಲಿ |
ವನಜ ಭವಾದಿ ಮುಕ್ತಿಯೋಗ್ಯರ |
ಅನಿತರೊಳು ಅಜನಬ್ದ ಹತ್ತು ಸವೆದವು ನೋಡ |
ಗುಣಿಸು ವಿಂಶತಿ ವರ್ಷ ಪೂರ್ಣವಾಗಿ |
ಅನಿರುದ್ಧ ಶಾಂತಿ ಪತಿ ಈ ಮೇಲೆ ಪ್ರಕೃತಿಯಾ |
ಗುಣಸಾಮ್ಯ ವೈಷಮ್ಯ ಮಾಡಿ ಮುಂದೆ |
ಗುಣ ತ್ರಯಾಂತರದಿಂದ ಸತ್ವರಜ ತಮ ಅಂಶ |
ವನೆ ರಚಿನೆ ಮಹದಾದಿತತ್ವ ವೆನ್ನಿ |
ಅನುಕ್ರಮ ಗಣನೆವುಂಟು ನೂರುಭಾಗದಿಂದ |
ವನಜ ಸಂಭವ ವಾಯು ವಾಣಿಶ್ರದ್ಧ |
ತನುವು ನಿರ್ಮಾಣವೊ ಈ ಪರಿಯ ಲಾಲಿಪುದು |
ಜನನವಾಯಿತು ಜಗಕೆ ಕಾರಣವಾದ |
ಗುಣತ್ರಯೋಪಾದಾನದಿಂದಲಿ ಸಕಲರಿಗೆ |

ತೆವು ಪ್ರಾರಬ್ಧವಾಯಿತು ಕರ್ಮಕ್ಕೆ ।
ಜ ಸಂಭವ ತಾನೆ ಮುನ್ನಿನಂತೆತನ್ನ ।
ತೆಯಲಿ ಪುಟ್ಟಿದನು ಪವನ ಸಹಿತ ।
ತರೊಳು ಪೂರ್ವ ಮಾರುತ ಮರುತ ಜೀವಾಖ್ಯ ।
ಪನಿಂದಲಿ ರುದ್ರ ತಾರ್ಕ್ಷ್ಯ ಉರಗ ।
ಸಿದರು ವೈಕಾರಿಕ ತೈಜಸ ತಮೋ ।
ಣದಹಂಕಾರದಲಿ ಪ್ರತ್ಯೇಕ ಪ್ರತ್ಯೇಕ ।
ತೆಯರ ಸಮಿತ ಯಿದರಲ್ಲಿ ರುದ್ರಗೆ ।
ಣಿರೂಪ ತಿಳಿವುದು ನಾಮ ಭೇದ ।
ನಿಮಿಷೇಶ್ವರಕಾಮು ಯಿವರ ಭಾರ್ಯರ ಜನನ ।
ಣಭೇದದೊಳಗೆ ಎಣಿಕೆಯ ಮಾಳ್ಪದೊ ।
ಣಗಾಣೆ ಗುಣಭೇದ ರುದ್ರನ್ನ ಸೃಷ್ಟಿಯು ।
ನುವಾಗಿ ನೋಡಿರೊ ಪ್ರಥಕು ಪ್ರಥಕು ।
ನೆಯದಲೆ ತ್ರಿರೂಪ ವೊಂದು ಮಾಡಿದನು ಮಾ ।
ನಿ ಸಹಿತ ಅರ್ಧನಾರಿಯ ರೂಪದಿ ।
ನಲಾಕ್ಷ ಬಲವಂತ ಸವ್ಯಬಲಭಾಗದಿ ।
ನ ದ್ವಾದಶರು ಮರುದ್ಗಣ ಹತ್ತು ರುದ್ರ ।
ನ ವಿಶ್ವೆದೇವತೆ ಅಶ್ವಿನಿಯರು ಋಭು ।
ಣವೆಂಟು ವಸುಗಳು ಗಂಧರ್ವ ಉರಗ ।
ನಿ ಮೊದಲಾದ ಸಮಸ್ತಜನ ಗಜ ತುರಗ ।
ನರುಹ ನಾನಾ ವಿಚಿತ್ರ ಜೀವ ।
ಣದವರ ಪಡೆದನು ಹರಿಕೃಪೆಯಿಂದ ।
ನಜ ಲೋಚನ ನಮ್ಮ ವಿಜಯ ವಿಠಲರೇಯ ।
ನ ಕುಟುಂಭಸ್ತನೊ ಕಲ್ಪಕಲ್ಪದಲಿ ॥೪॥

## ತ್ರಿವಿಡಿ ತಾಳ

ಮೂರು ರೂಪಗಳೊಂದೆ ಮಾಡಿ ಮಹರುದ್ರ ।
ಬೇರೆ ಬೇರೆ ಸೃಷ್ಟಿನೆಸಗಿದನು ವೈ
ಕಾರಿಕದಿಂದಲಿ ಮನಸು ದೇವತ ದೇಹ ।
ಚಾರು ತೈಜಸದಿಂದ ಜ್ಞಾನೇಂದ್ರಿಯು ।
ಮೂರೆರಡು ಕರ್ಮೇಂದ್ರಿಯು ಯಿಷ್ಟೆ ರಚಿಸಿ ವಿ ।
ಹಾರ ಮತ್ತೆ ಮತ್ತೆ ತಾಮಸದಿಂದಲಿ ।
ಮೂರೊಂದೊಂದು ಭೂತ ಪಂಚತನ್ಮಾತ್ರಗಳು ।
ವೈರಾಗ್ಯ ನಿಧಿ ತಾನೆ ಸೃಜಿಸಿದನು ।
ಈ ರೀತಿಯನು ತಿಳಿದು ಮುಂದೆ ಪ್ರಥಮಾಂಗ ।
ಮಾರುತನಿಂದಲಿ ಗರುಡಶೇಷ ।
ಶೌರಿ ಪಾದೋದಕಧರ ಯಿಂದ್ರದು ಕು ।
ಮಾರ ರಾದರು ಕಾಣೊ ಈ ತರುವಾಯ ।
ವಾರುಣಿ ಪತಿ ಶೇಷ ಗರಾಡಾರ್ಕ ಸಶಿ ಅಹಂ ।
ಕಾರ ಪ್ರಾಣ ಮಿಗಿಲಾದುತ್ತಮ ।
ಧೀರರಿಂದಲಿ ಸರ್ವ ನೀಚ ದೇವತೆಗಳು ।
ದಾರ ಸೃಷ್ಟಿಯ ಪೇಳಿ ಈ ಮಧ್ಯದಿ ।
ವಾರುಣಿ ನಾಥನ್ನೆ ಪ್ರಜಾ ಸರ್ಗ ಮಾಡಿದ ।
ಕಾರಣವನೆ ನೋಡು ನೀಚ ಸುರರು ।
ಭಾರಣೆಯಾಗಿದ್ದ ಯಜ್ಞಾಭಿಮಾನಿಗಳು ।
ಸಾರಿರೈ ಈ ಪರಿ ಉದ್ಭವವೊ ।
ಮೀರ ಬಹುದೆ ದೇವತೆಗಳ ಸೃಷ್ಟಿ ವಿ ।
ಚಾರ ಮಾಡಿದರಾಗೆ ಬಲುಯಿಪ್ಪದು ।
ಸಾರಿ ಪೇಳುವನಾರು ಯಿವರಿವರ ವುತ್ಪತ್ತಿ ।

ನಾರಾಯಣನು ಬಲ್ಲ ನವೋ ನವೋ |
ನೀರೆರುಹ ನಯನ ವಿಜಯ ವಿಠಲರೇಯ |
ತಾರತಮ್ಯದಿಂದ ತಾನೆ ಸೃಷ್ಟಿ ಮಾಡಿದ ||೫||

**ಧ್ರುವತಾಳ**

ಇಲ್ಲಿಗೆ ಮೂವತ್ತೈದು ವರ್ಷಾದವು ವಾಣಿ !
ವಲ್ಲಭ ಬ್ರಹ್ಮಮಾನದಿಂದ ಎಣಿಸಲಾಗಿ ।
ಅಲ್ಲಿಂದಿತ್ತಲು ಕೇಳಿಕ್ರಮದಿಂದ ಸೃಷ್ಟಿಶಾಂತಿ ।
ನಲ್ಲ ಮಾಡಿದ ನೈಯ್ಯ ಆವರಣ ಬೆಳಿಸಿಯಿದ್ದು |
ಮೆಲ್ಲ ಮೆಲ್ಲನೆ ವೊಂದರೊಳಗೆ ವೊಂದು ಪೊಗಿಸಿ |
ನಿಲ್ಲದೆ ಸಂಯೋಗ ಮಾಡಿದನು ದೇವ |
ಅಲ್ಲಿ ಗಲ್ಲಿಗೆ ತತ್ವನಿಯಾಮಕರ ನಿಟ್ಟು |
ಬಲ್ಲಿದ ತಾನೆ ವೊಳಗೆ ವ್ಯಾಪಿಸಿದ |
ಇಲ್ಲವೆಂದೆನದಿರು ಈತನ ತೊರದು ತೃಣ
ಅಲ್ಲಾಡಿಸುವ ಶಕ್ತಿಯೊಬ್ಬಗಿಲ್ಲ !
ಸಲ್ಲಲಿತ ವ್ಯಕ್ತ ಮಹ ಅಹಂ ಗಗನ ।
ಚೆಲ್ಲಿಸುವ (ಚೆಲಿಸುವ) ವಾತಾಗ್ನಿ ಉದಕ ಧರಣಿ ।
ಎಲ್ಲ ತತ್ವಾವರಣ ಎಣಿಕೆ ಮಾಡಲು ಯಿದಕೆ ।
ಸಲ್ಲುವರು ಚತುರ ವಿಂಶತಿ ಜನರ ।
ಅಲ್ಲಿಂದ ಲೆಖ್ಖಮಾಡೆ ದಶ ಸಂವತ್ಸರವೆನ್ನಿ ।
ಎಲ್ಲ ನಾಲ್ವತ್ತೈದು ವರ್ಷ ವೆನ್ನಿ ।
ಮಲ್ಲ ಮರ್ದನ ನಮ್ಮ ವಿಜಯ ವಿಠಲರೇಯ ।
ಇಲ್ಲಿಗೆ ಬಾಹ್ಯಾಂಡ ಮುಗಿಸಿ ಸ್ವೇಚ್ಛಯಿಂದ ||೬||

**ಝಂಪಿತಾಳ**

ಉದಕ ಭೂಭಾಗದಲಿ ಮಲಗಿ ತುತಿಸಿಕೊಂಡು |
ಸುದತಿ ಶ್ರೀಭೂದುರ್ಗಾ ದೇವಿಯಿಂದ ।
ಉದುಭವನಾದನು ಬ್ರಹ್ಮ ವಿಷ್ಣು ಮಹೇಶ |

ಪದುಮನಾಭನೆ ತನ್ನ ಅಂಶದಿಂದ ।
ಪದುಮ ಜಾಂಡದ ಖರ್ಪರ ನಿರ್ಮಾಣ ಮಾಹದಕೆ ।
ಮುದದಿಂದ ತತ್ವಗಳ ಮಿಶ್ರ ಭಾವಗಣಿತ ।
ತದನಂತರದಲ್ಲಿ ಸಂಕಲಿತ ಭೂತ ।
ಇದೆ ಮನುಜ ಜಲಚರ ಪಕ್ಷಿ ಪತಂಗ ಕ್ರಿ ।
ಮಿ ದೇಹಕಾರಣ ಪಿಶಾಚಾದ್ಯಕ್ಕೆ ।
ವಿದಿತವಾಯಿತು ನಾಲ್ವತ್ತು ನವವರ್ಷಕ್ಕೆ ।
ಪೋದಗಿತು ಸ್ವಲ್ಪ ದಿವಸಗಳು ಕಡಿಮೆ ।
ಪದುಮ ಜಾಂಡೋದ್ಭವ ಹರಿ ಸಿರಿ ದೇವಿಯಿಂದ ।
ಉದಕದೊಳಗೆ ಕೋಟಿ ದಶಪಂಚಕ ।
ತದುಪರಿ ಬ್ರಹ್ಮಾಂಡ ಪರಿಮಿತ ವಿರಾಜ ರೂ ।
ಪದ ರೂಪ ಪ್ರವೇಶ ಅಭಿವೃದ್ಧಿಯು ।
ಮೊದಲು ವಿರಾಡ್ರೂಪ ಮಹತತ್ವ ತನಕದಲಿ ।
ಆದರಂತೆ ಎರಡನೆಯದು ಅಂಡಸಂಸ್ಥ ।
ಇದೆ ಸಿದ್ಧವಿರಾಟ ಮುಖದಿಂದ ವಾಯು ಮ ।
ತ್ತಿದಕೊ ಪ್ರಕೃತಿ ಸರ್ವ ತತ್ವ ಜನನ ।
ಚದುರರು ನೋಡುವದು ಲಿಂಗ ಗುಣ ವೈಷಮ್ಯ ।
ಪದೋ ಪದಿಗೆ ಪ್ರಜಸರ್ಗ ಅಂಕುರಾದಿ ರಚನೆ ।
ವ್ಯದ ಮೂಲ ಪ್ರಕೃತಿಯು ಉಪಾದಾನದಿಂ ।
ದುದುಭವಿಸಿದ ತತ್ವ ಸುತ್ತ ಬಿಡದೆ ।
ಇದನೆ ಹಿಂಗಳದು ಬ್ರಹ್ಮಾಂಡ ಖರ್ಪರ ನಿಂ ।
ದಿರದೆ ವಿರಾಟರೂಪ ಪ್ರಕೃತಿ ರಚನೆ ।
ತುದಿಗೆ ಗಣ್ಯಾವ ಮಾಡೆ ಐವತ್ತು ವರುಷ ಸಂ
ದಿದವು ವಾಗೀಶನ ಮಾನದಿಂದ ।
ಸದಮಲಾನಂದ ಸಿರಿ ವಿಜಯ ವಿಠಲರೇಯ ।
ಪದುಮ ನಾಭನಾಗಿ ಉದಕದೊಳು ಪವಳಿಸಿದ ॥೭॥

### ರೂಪಕತಾಳ

ಸರಸಿಜ ಸಂಭವನ ಐವತ್ತೊಂದನೆ ವರುಷ ।
ಬರಲುದಯ ಕಾಲದಲಿ ಪದ್ಮಕಲ್ಪವೆಂದು ।
ಕರಸಿ ಕೊಂಬದು ಕೇಳಿಯಿದರ ಉತ್ಪತ್ತಿಯನ್ನು ವಿ ।
ವರಿಪೆ ವಿಸ್ತಾರ ಹರಿತಾನೆ ಬೊಮ್ಮಾಂಡ ಬುಡಭಾಗದಿಂದ ನಿಂ ।
ದಿರ ದೂರ್ಧ್ವ ಪ್ರದೇಶ ಜಲಮಧ್ಯದಲಿ ಕೋಟಿ ।
ಯರಡೈದು ಯೋಜನ ಪರಿಮಿತ ಬಿಟ್ಟು ।
ಸಿರಿದೇವಿ ಸಂಗಡ ಸುಖಿಸುತ್ತ ಮಲಗೆ ಸ್ತೋ ।
ತ್ತರ ಮಾಡೆ ಮೆಚ್ಚಿ ತನ್ನ ನಾಭಿಯಿಂದಲಿ ।
ಸರಸಿಜ ಪಡೆದನು ಚತುರ್ದಶ ಲೋಕಾತ್ಮಕ ।
ಪರಮೇಷ್ಟಿ ಅದರಲ್ಲಿ ಕುಳಿತು ಶೋಭಿಸುತಿರೆ ।
ನಿರುತ ವಿಜ್ಞಾನ ಪ್ರಭಾವಮಯ ಸುರಜೇಷ್ಠ ।
ಬೆರಗಾಗಿ ಯೋಚಿಸಿ ತನ್ನ ಕಾರಣ ಭೂತನ ।
ಅರಸುವೆನೆಂದು ನಾಳವ ಪೊಕ್ಕು ಕಾಣದಲೆ ।
ಇರುತಿರಲು ಗಗನದಿ ತಪೊ ತಪೊವೆಂದು ಸುಂ ।
ದರ ಉಪದೇಶದಲಿ ಧ್ಯಾನ ಸಮಾಧಿಯಲ್ಲಿ ।
ಪರಮಾತ್ಮ ಮೆಚ್ಚಿಸಿ ಸ್ವರಮಣ ಭಕ್ತನಿಗೆ ಸಂ ।
ದರುಶನವಿತ್ತು ಕರುಣದಿಂದಲಿ ವಿದ್ಯ ಉಪದೇಶಮಾಡೆ ಸಾ ।
ವಿರ ವರುಷ ಧೃಡದಿಂದ ವೊಲಿಸಿದನು ಬ್ರಹ್ಮ ।
ಮರಳೆ ಸೃಷ್ಟಿ ಮಾಡುವ ಗೋಸುಗ ತನಗೆ ।
ಪರಮ ಸಾಮರ್ಥಿಕೆ ನೋಡಿ ತಿಳಿದನಾಗ ।
ಸರಸಿಜ ಬೆಳಸಿದ ತ್ರಿಲೋಕ ಪರಿಯಂತ ।
ತಿರುಗಿ ಈ ಲೋಕಕ್ಕೆ ಆಧಾರ ರೂಪವಾದ ।
ಶರೀರವ ಧರಿಸಿದ ಹರಿವೊಳಗೆ ಪ್ರವೇಶ ।
ತರುವಾಯ ವೈರಾಟದಿಂದಲಿ ಉಪಸರ್ಗ ।
ಮರುತ ಪ್ರಧಾನ ಭಾರತಿ ರುದ್ರ ಯಿಂದ್ರ ಕಾ ।

ಮರು ಸರ್ವ ತಾತ್ವಿಕರು ವರ್ಣಗಳು ।
ಕರಣಾದಿತತ್ವ ಯಜ್ಞ ಸಾಧನ ದ್ರವ್ಯ ।
ಪರಿ ಪರಿ ಛಂದಸ್ಸು ವೇದ ವೇದಾಂಗಳು
ಗಿರಿ ಶರಧಿ ನದಿ ದ್ವೀಪ ನಖ (ಗ) ಶೃಂಗ ಶಫರದಂತ ।
ಯಿರುತಿಪ್ಪ ಮೃಗ ಪಕ್ಷಿ ಜಲಚರಾದಿ ಗುಲ್ಮ ।
ತರು ಭೂತ ಪ್ರೇತ ನಾನಾಲಕ್ಷಣದಿ ।
ಶರೀರದಿಂದ ಅಜಸರ್ಗ ಮಾಡಿದನು ।
ಸರಸಿಜ ಕಲ್ಪದ ಛಂದ ಸುವಾಸನದಲ್ಲಿ ।
ಹರಿ ಪ್ರೇರಣೆಯಿಂದ ಈ ಕಲ್ಪವನ್ನು ಸಂ ।
ಹರ ಮಾಡುವೆನೆಂದು ಯಿಚ್ಛೇಮಾಡಿ ।
ಸರುವ ಪ್ರಾಣಿಗಳನ್ನು ನುಂಗೀ ಸತ್ಯಲೋಕದಲ್ಲಿ ।
ಹರುಷದಿಂದಲಿ ದ್ವಿತಿಯ ಪ್ರಕೃತಿ ಯಿಂದೀ ।
ಪರಿ ಪರಿ ಯಂಕದಲಿ ಪವಳಿಸಿದನು ಬ್ರಹ್ಮ ।
ಸರಿಯೆನ್ನಿ ಇಲ್ಲಿಗೆ ಪದ್ಮಕಲ್ಪ ।
ವರ ಮನೋಹರ ನಮ್ಮ ವಿಜಯ ವಿಠಲ ಸಾ ।
ಸಿರ ಶಿರ್ಷನಯನ ಬಾಹು ಹಸ್ತದಿ ಪೂರ್ಣ ॥೮॥

ಝಂಪಿ ತಾ ಳ

ಪುಟ್ಟಿಸಿದ ಅಂಗ ಪ್ರತ್ಯಂಗದಲ್ಲಿ ಸರಸಿಜಾಸನ ಯಿ ।
ನಿತು ಧ್ರುವ ಶ್ವೇತಾದಿ ವರಾಹ ಕಲ್ಪ ।
ದ್ವಿತೀಯ ದಿವಸಾದಿಯಲಿ ।
ಖ್ಯಾತಿ ಯಾಗಿದೆ ನೋಡಿ ಗ್ರಂಥದಿಂದ ।
ಧಾತಕಾ ಚತುರವದನ ಯೆದ್ದು ನೆನೆದು ತನ್ನ ।
ತಾತನ್ನ ಚರಣವ ಹೃದಯದಲ್ಲಿ ।
ಪ್ರೀತಿ ಯಿಂದಲಿ ಜಗವ ಪುಟ್ಟಿಸುವದಕ್ಕೆ ಈ ।
ಭೂತಳ ವಿಲ್ಲ ವೆಂದು ಚಿಂತಿಸಲು ।

ಜಾತ ರಹಿತ ಹರಿ ಅಜನ ನಾಶಿಕದಿಂದ |
ಶ್ವೇತ ಕೋಲನಾಗಿ ಜನಿಸಿದನು |
ದೈತೇಯ ಪುಟ್ಟಿದ ಆದಿ ಹಿರಣ್ಯಾಕ್ಷ |
ಭೀತ ರಹಿತನಾಗಿ ಯಿದ್ದನದಕೋ |
ಶಾತ ಕುಂಭೋದರನ ಸ್ತುತಿಯಿಂದ ಮೆಚ್ಚಿ ದೇವ |
ಚಾತುರ್ಯದಿಂದಲಿ ಉದಕ ಪ್ರವೇಶಿಸಿ
ಭೂತ ಹಂಸಾ ಮಧ್ಯದಲಿ ದಾನವ ಅಡುಗೈಸೆ |
ಘಾತಿಸಿದನು ತನ್ನ ಹಲ್ಲಿನಿಂದ |
ಸಿತ (ಶ್ವೇತ) ಗಾತುರ ವೇಗ ಬರುತಿಕೆ ಮಧ್ಯದಲ್ಲಿ |
ವಾತ ವಿಷ್ಟ (ವಾತವಿಷ್ಟ) ವುಳ್ಳ ಅಸುರರು ತಡೆಯೆ |
ಪೋತ ಲೀಲೆಯಿಂದ ಮರ್ಧಿಸಿ ಶೌರ್ಯ ಶೌರಿ |
ಭೂತವ ಘಟ್ಟಿಮಾಡಿ ಆತನಿಗೆ ಯಿತ್ತ |
ಪ್ರಾತರೂರ್ಧ್ವಾಕಾಲದಲಿ ಸ್ವಶಕ್ತಿಯಿಂದ ಬ್ರಹ್ಮ |
ನೀತಿ ಯಿಂದಲಿ ಪಂಚಪರ್ವ ವೆಂಬೊ |
ಪಾತಕ ಪುಟ್ಟಿಸಿದ ಅವಿದ್ಯ ಪೆಸರುಂಟು |
ಯಾತಕೆ ಬಾರದೆಂದು ಮರಳೆನೆನದ |
ಲಾತವ್ಯ ದ್ವಯ ಕಲ್ಪದ ಮಹರಾಯ ಸನಕಾದಿಗಳ |
ಕಾತುರ ದಿಂದಲಿ ಪುಟ್ಟಿಸಿದ |
ಮಾತು ಕೇಳಿದ ಯಿವರ ಮೇಲಿನ ಕೋಪದಿಂದ |
ನೇತುರ ಕೆಂಪು ಮಾಡಿದ ಭ್ರುಕುಟಿಯಿಂದ
ಪೂತುರೆ ಏನೆಂಬೆನೊ ತತ್ಕಾಲಕ್ಕೆ ಸದ್ಯೋ |
ಜಾತಭಿದಾನವೆಂಬ ಶಿವನಪೆತ್ತ |
ಈತ ಗಪ್ಪಣೆಯಿತ್ತ ಸೃಷ್ಟಿಗೋಸುಗ ಮಹ |
ಭೀತಿ ವಂತರ ಪುಟ್ಟಿಸಿ ನಿಲಿಸಿ ತಾನೆ !
ಗಾತುರ ಕರ್ನ ನಾಸಾ ಮುಖ ಜಿಂಹ ದಂತ ಹಸ್ತ |
ನೇತುರ ಗುಹ್ಯ ಮೇಢ್ರ ಸರ್ವರೋಮ |

ಈ ತೆರದಿಂದ ರೋಮ ಕೂಪದ ದೆಶೆಯಿಂದ |
ಜಾತರಾದರು ಯಿಂದ್ರ ಸ್ಮರ ಅನಿರುದ್ಧ |
ಜಾತವೇದಸ ಮಂತ್ರಿ ಕವಿ ಚಂದ್ರ ದಕ್ಷ ಖ |
ದ್ಯೋತ ವರುಣ ಮನು ಪ್ರಾಣ ಸರ್ವ |
ಜಾತಿ ಮಿಕ್ಕಾದವರು ಪರಮೇಷ್ಟಿಗೆ
ವಾತ ವಾಹನ ನಮ್ಮ ವಿಜಯ ವಿಠಲರೇಯ |
ಧಾತನ ದ್ವಾರದಂದ ಸೃಷ್ಟಿಯ ನೆಸಗಿದ ||೯||

## ತ್ರಿವಿಡಿ ತಾಳ

ಇವರಿಂದ ಪ್ರಜಾಸರ್ಗ ಪೂರ್ಣವಾಗದಿರಲು |
ತವಕ ದಿಂದಲಿ ಬ್ರಹ್ಮ ದಶ ಪುತ್ರರ |
ಪ್ರವರ ಮತಿಗಳಿಂದ ಪೊಪ್ಪುವ ಜನರು ಸಂ |
ಭವಿಸಿದರು ಅತ್ರಿ ವಶಿಷ್ಟಾದ್ಯರು
ವಿವರಿಸುವೆನು ಮುಂದೆ ಇವರ ತರುವಾಯ ಉ |
ದ್ಭವವಾದ ಜೀವಿಗಳು ಹೆಸರು ಕೇಳಿ |
ಹವಣ ವಾಗಿದೆ ಸ್ಥಾನ (ಸ್ತನ) ಹೃದಯ ಹುಬ್ಬು ಜ್ಞಾ | (ಯಿನ್ನೆವೆ)
ನೆವೆ ಓಷ್ಠ ಮುಖ ಪ್ರಷ್ಟ ಮೇಢ್ರ ಛಾಯಾ |
ಅವಯವಂಗಳು ರೋಮ ಸರ್ವಾಂಗದಲಿಯಿಪ್ಪ |
ವಿವರದಿಂದಲಿ ಕಾಮ ಲೋಭಾದ್ಯರು |
ಅವನಿಯೊಳಗೆ ಮನುಜ ವಾಕಾಭಿಮಾನಿ ಪೊ |
ಳವ ವೇದ ತದಂಗಾಶ್ರಮ ಧರ್ಮಾದಿ |
ಪವಿತುರವಾದ ದ್ರವ್ಯಗಳು ಪುಟ್ಟಿಸಿ ಬ್ರಹ್ಮ |
ಪ್ರವರ್ತಕನಾದನು ಪೂರ್ತಿಯಿಲ್ಲಿ (ಪೂರ್ತಿಯಿಳಿ)
ಭವದೂರ ಭಕ್ತವತ್ಸಲ ವಿಜಯ ವಿಠಲ |
ಅವಿಕಾರನಾಗಿ ತಾ ಸರ್ವರೊಳಗಿಪ್ಪ ||೧೦||

## ಮಟ್ಟತಾಳ

ಇನಿತು ಯೋಚಿಸಿ ಬ್ರಹ್ಮ ಆದಿಸ್ವಯಂಭುವ |
ಮನು ಶತರೂಪಗಳ ವೊಂದೆ ಕಾಲದಲ್ಲಿ |
ಅನುನಯ ದಿಂದ ಪುಟ್ಟಿಸಿ ಮನಸು ತಿದ್ದಿ |
ವಿನಯ ದಿಂದಲಿ ವೈವಾಹ ಮಾಡಲು ಮೈ |
ಘನ ಭಾವದಿಂದಲಿ ಮಕ್ಕಳಾದವು ಕೇಳಿ |
ಗುಣವಂತ ಉತ್ತಾನಪಾದ ಪ್ರಿಯ ವೃತ |
ಅನುಜಯು ಯಿವರಿಗೆ ಆಕುತಿ ಪ್ರಸೂತಿ |
ಮನೋಹರ ದೇವಿ ದೇವಹೂತಿ ಮೂವರು |
ಘನ ಪುಣ್ಯವಂತರು ಯಿವರನ್ನೆ ಋಚಿಯೆಂಬ |
ಮುನಿ ದಕ್ಷ ಕರ್ದಮ ಮಹತ್ಮರಿಗೆ ಆದಿ |
ಮನು ಮದುವೆ ಮಾಡಿ ಕೊಡಲಾಗಿ ಯಿಲ್ಲಿಗೆ |
ಗಣಿತ ನೆಸಗುವದು ಮುಖ್ಯ ಮುಖ್ಯವೆಂದು |
ಪುನಃ ಸೃಷ್ಟಿಯಾ ಕೇಳಿ ಮೂರೊಂದು ಬಗೆಯುಂಟು |
ಎಣಿಸು ಶ್ವೇದಜ ಉದ್ಭಿಜ ಜರಾಯು ಜಾಂಡಜ |
ಯೆನಿಪದು ಯೆಂಭತ್ತು ನಾಲ್ಕುಲಕ್ಷ ಯೋನಿ |
ಮನುಜ ಮೃಗ ಪಕ್ಷಿ ಕ್ರಿಮಿ ತರು ಜಲಜಾಯಿಂತಿ |
ನಿತು ಭೇದನಾಮ ಜನಿಸಿದವು ತಿಳಿಯೆ ಮನದಿಂದಲಿ ಅಂದು |
ಮುನಿ ಕಸ್ಯಪಗೆ ದಕ್ಷ ಪ್ರಜೇಶ್ವರ ತನ್ನ |
ತನಯರಾಗಿದ್ದ ಹದಿಮೂರು ಮಂದಿಯ |
ಅನುಮತಿ ಯಿಂದ ಲಗ್ನವ ಮಾಡಿ ಕೊಡಲಾಗ |
ದನುಜ ದೈತ್ಯರು ದೇವತೆ ಉರಗಾದ್ಯರು |
ಮನುಜ ಮೊದಲಾದ ಯಾವತ್ತು ಪುಜಾಸರ್ಗ |
ದಿನ ದಿವಸಕ್ಕೆ ಪುಟ್ಟಿಸಿದ ಬಹುಪರಿ |
ಪ್ರಣುತಾರ್ತಿ ಹರ ನಮ್ಮ ವಿಜಯ ವಿಠಲರೇಯ |
ಮನದಿಚ್ಛೆಯಿಂದಲಿ ಕ್ರೀಡೆಯ ಮಾಡುವ ||೧||

### ಅಟ್ಟತಾಳ

ಮಿಗಿಯಾಗಿ ತುಂಬಿತು ಕಶ್ಯಪ ಮನು ಸೃಷ್ಟಿ ।
ಜಗವೆಲ್ಲ ನಿಬಿಡ ವಾಯಿತು ನೋಡಿಯೊಂದು ಹೆ ।
ಜ್ಜಗೆ ಭೂಮಿಯಿಲ್ಲದಂತಾಗಲು ಅಜರಾಯ ।
ಮೊಗ ವೊಮ್ಮಗನ ವಂಶ ಕಂಡು ಯೋಚಿಸಿ ತನ್ನ
ನಗೆಯಿಂದ ಮೃತ್ಯು ದೇವತೆಯ ಪುಟ್ಟಿಸಲಾಗಿ ।
ಮಗಳಾಗಿ ನಿಂದು ರೋದನ ಮಾಡಲಾಗಿ ಪ್ರಾ ।
ಣಿಗಳ ನಾಶಕೆ ಜ್ವರ ವುಳಿದ ರೋಗಗಳುದ್ಭವವಯ್ಯ ।
ಅಗಣಿತ ಗುಣನಿಧಿ ವಿಜಯ ವಿಠಲ ದೇವ ।
ಜಗವ ನಿರ್ಮಾಣವ ಮಾಡಿದ ಮಹಧೀಯ ॥೧೨॥

### ಆದಿತಾಳ

ಸತತನ್ನೋದಕ ನೆವದಿ ಸ್ವೀಕಾರ ಮಾಡಿ ವು ।
ತ್ಪತ್ತಿ ಸ್ಥಿತಿ ಸಂಹಾರ ಮಾಡುವ ಕರ್ತೃತ್ವ ।
ಮಿತಿಯ ಗೈಸಿದ ಬ್ರಹ್ಮಸ್ತ್ರಿ ಪುರುಷ ನಿಕರ ।
ಮತಿ ದುರ್ಮತಿ ಯಿಂದ ನಡದು ತಮ್ಮ ತಮ್ಮ ।
ಗತಿಗೆ ಪೋಗುವಂತೆ ಕರ್ಮವ ಕಲ್ಪಿಸಿ ।
ಕ್ಷಿತಿಯ ಸಾಕುತಲಿಪ್ಪ ತತ್ವ ತಾತ್ವಿಕ ರೊಡನೆ ।
ರತಿ ಪತಿ ಪಿತ ನಮ್ಮ ವಿಜಯ ವಿಠಲರೇಯನ ।
ಪ್ರತಿ ಬಿಂಬ ಕಾಣೊ ಬ್ರಹ್ಮ ಜಗಕೆ ಕಾರಣ ಕರ್ತ ॥೧೩॥

### ಜತೆ

ಸೃಷ್ಟಿ ಕ್ರಮವು ಕೇಳಿ ತಿಳಿದಷ್ಟು ಪೇಳಿಪ್ಪೆ ।
ಸೃಷ್ಟೇಷ್ಟಾ ಜನಕ ನಮ್ಮ ವಿಜಯ ವಿಠಲನ ದಯದಿಂದ ॥೧೪॥

— ● —

# ಬ್ರಹ್ಮದೇವರ ೫೧ ನೇ ವರ್ಷ ಪ್ರಥಮ ದಿನ
## ಪದ್ಮಕಲ್ಪ ಸೃಷ್ಟಿ ಸುಳಾದಿ

### ೪೬) ಸುಳಾದಿ

ರಾಗ: ಪಂತುವರಾಳಿ ಧ್ರುವ ತಾಳ

ಹರಿ ವಿಷ್ಣು ರೂಪಾತ್ಮಕ ಚತುರ ವಿಂಶತಿ ತತ್ವ ।
ಬೆರಸಿ ಸ್ಪಷ್ಟದಿಂದ ಬೊಮ್ಮಾಂಡವ ।
ವಿರಚಿಸಿದನು ವೃದಯ ಕಾಲದೊಳೈವತ್ತು ಕೋಟಿ ।
ಪರಿಮಿತ ಯೋಜನ ವಲಯಾ ಕಾರ ।
ನಿರಿಕ್ಷಿಸು ಈ ಪ್ರಕಾರ ದಳವನ್ನು ತಿಳಿದು ಮುಂ ।
ದರಿದು ನೋಳ್ಪದು ಯಿದಕೆ ನೂರುಕೋಟಿ ।
ಧರಣಿ ಆವರಣವು ಆಲ್ಲಿಂದ ಮೇಲುಭಾಗ ।
ಇರುತಿಪ್ಪವು ಕೇಳಿ ಉದಕಾಗ್ನಿ ಮರುತಾಕಾಶ ।
ತರುವಾಯ ಮಹನಹಂಕಾರವಿದರೊಳು ಕಾರಣವುಂಟು ।
ಮರಳೆ ಮಹತತ್ವ ಅವ್ಯಕ್ತದಸಮೇತ ।
ಸ್ಥಿರವಾಗಿಯಿಪ್ಪದು ಬೊಮ್ಮಾಂಡಕೆ ಸುತ್ತಲು ।
ಎರಡೈದಾವರಣಾ ವೊಂಭತ್ತು ಹತ್ತುಯೆನಿಸುವದು ।
ಸಿರಿ ಬೊಮ್ಮಾದಿಗಳು ತಾತ್ವಿಕರಾಗಿ ಯಿರುವರು ।
ಹಿರಿದಾಗಿ ವೊಂದೊಂದಕ್ಕೆ ದಶಮಡಿ ಗುಣಿತದಿಂದ ।
ಧರಣಿಯ ಬಿಟ್ಟು ಮೇಲಿಂದತ್ತ ಯೆಣಿಸುವದು ।
ಪರಮ ಭಕುತಿಯಿಂದ ಹರಿ ವ್ಯಾಪಾರವ ।
ಇರಳು ಹಗಲು ತುತಿಸಿ ಧನ್ಯನಾಗೊ ।
ಸುರರು ಆಂಶಗಳಿಂದ ತುಂಬಿಹ್ಯರು ಕಾರ್ಯ ಥಾ ।

ರರಾಗಿ ತನು ತಮ್ಮ ವುದ್ಯೋಗದಿ ।
ಹರಿಯೆ ಬಾಹಿರ ಸರ್ಗಮಾಡಿ ಆವ್ಯಾಲೆ ವಿ ।
ಸ್ತರಿಸಿದ ವೊಳಗಿನ ಬೊಮ್ಮಾಂಡವ ।
ವಿರಂಚಿಯ ಗರ್ಭದಲಿ ಯಿಟ್ಟು ವಿನೋದದಿಂದ ।
ಸಿರಿ ಕೂಡ ಬೊಮ್ಮಾಂಡವ ಪ್ರವೇಶಿಸೆ ।
ಸುರರ ಸಾವಿರ ವರುಷ ಮಲಗಿದ್ದ ಪರಮಾತ್ಮ ।
ಹರಿ ಪ್ರೀತನಾಗಿ ನಾಭಿ ಕಮಲದಿಂದ ।
ಸರಸಿಜ ಸಂಭವನ ಪೆತ್ತ ಪ್ರೇಮದಿಂದ ।
ಹಿರಣ್ಯ ಗರ್ಭಾಖ್ಯ ನಾಮದಲ್ಲಿ ।
ಎರಡೇಳು ಭುವನಾತ್ಮಕ ವಾರಿಜ ಸತ್ಯಲೋಕದ ।
ಪರಿಯಂತ ಬೆಳಿಯಿತು ಪಾತಾಳ ವಿಡಿದು ।
ಮೆರೆವ ವೈಭವ ಮೂರ್ತಿ ವಿಜಯ ವಿಠಲರೇಯ ।
ವರಪದ್ಮನಾಭ ರೂಪಾತ್ಮಕನಾದ ವುರಗಶಾಯಿ । ॥೧॥

## ಮಟ್ಟತಾಳ

ಜನನ ವಾದಾಕ್ಷಣಕೆ ನಾಲ್ಕುದಿಕ್ಕನು ನೋಡಾ ।
ಆನನ ನಾಲ್ಕಾದವು ಬ್ರಹ್ಮದೇವರಿಗೆನ್ನಿ ।
ಮಣಿ ಭೂಷಣ ಅಕ್ಷಮಾಲೆ ಜ್ಞಾನಮುದ್ರೆ ।
ಘನದಂಡ ಕಮಂಡುಲ ಚತುರ ಹಸ್ತ ।
ಮಿನಗುವ ಉಪವೀತ ಶುಭ್ರವಸನ ದ್ವಯವು ।
ವನಜಾ ಮಧ್ಯದಲ್ಲಿ ತನುಜಾನಾಗಿ ಕುಳಿತು ।
ವನಜಾಗರ್ಭನು ತನ್ನ ನೋಡಿಕೊಂಡ ಮೇ ।
ಲನಿತು ನೋಡಲಾಗಿ ಐದನೆ ಮೊಗವಾಯಿತು ।
ಚಿನುಮಯ ಮೂರುತಿ ವಿಜಯ ವಿಠಲರೇಯನ ।
ಮನದಿಚ್ಛೆ ಲೀಲೆ ಆವಾವ ನೆನೆಸುವನೊ ॥೨॥

## ತ್ರಿವಿಡಿ ತಾಳ

ಅದೆ ಸಮಯದಲ್ಲಿ ಪದುಮಾತ್ಮ ದು ।
ರ್ಗದೇವಿಯು ಮಹಚಂಡ ಮಾರುತ ಪುಟ್ಟಿಸಿ ।
ಉದಕ ಬಿಂದುಗಳಿಂದ ಬ್ರಹ್ಮರಾಯನ ಗಾ ।
ತ್ರದ ಮೇಲೆ ಸೂಸಿ ತೋಯಿಸಿದಳಂದು ।
ವಿಧಿ ತಾನೆ ಬೆರಗಾಗಿ ಮಹ ಅಂಧಕಾರದೊಳು ।
ಗದಗದನೆ ನಡುಗುತ ಮಹ ಘಾಳಿಯಿಂದ ।
ಉದಕದ ಥೆರೆಯಿಂದ ಪೀಡಿತನಾಗಿ ಅಂ ।
ಜಿದ ಕ್ಷಣ ಮಾತುರ ತನ್ನ ಪಿತನ ।
ಪದಪದುಮ ಸ್ಮರಿಸಿದನು ಯೇನೆಂಬೆ ಬೊಮ್ಮನಿಗೆ ।
ಮುದದಿ ಅಜ್ಞಾನ ಭಯ ನಾಲ್ಕುಯೆರಡು ಸಾರಿ ।
ಒದಗಿದವು ನೋಡಾ ನಾನಾ ಪರಿಯಿಂದಲಿ ।
ಪದುಮ ಸಂಭವಗೆ ಈಕಾಲದಲ್ಲಿ ।
ಇದೆ ಸತ್ಯವೆನದಿರಿ ಅನಾದಿ ನಿರ್ದೋಷ ।
ನಿಧಿಗೆ ಯೆತ್ತಣ ದೋಷ ಈವಾರತಿ ।
ಪದುಮ ಬಾಂಧವ ಮಧ್ಯಾಹ್ನದಲ್ಲಿಗೆ ಬಂದ ।
ರದರಂತೆ ಕಾಣೊ ಚಂಚಲ ತೋರುವ ।
ಮುದಡ ಮಾನ್ನವರಿಗೆ ಅಜ್ಞಾನಿಯಂತೆ ತೋ ।
ರಿದ ತನ್ನ ವಿಚಿತ್ರ ಮಹಿಮೆಯನ್ನು ।
ಉದಸಿದ ಜನರಿಗೆ ಈ ಪರಿಯಾಗಲೆಂದು ।
ಪದುಮನಾಭನ ಮಗನು ನಡುಗಿದನು ।
ಇದನೆಯೆಣಿಸದಿರಿ ಇನ್ನೊಂದುರಹಸ್ಯ ।
ಸದಮಲವಾಗಿದೆ ಬಲು ಸೋಜಿಗ ।
ತ್ರಿದಶಗಣಕೆ ದುಃಖಲೇಶ ಮಾತುರವಿಲ್ಲ ।
ಮುದ ಪುಟ್ಟುವದು ದಿವಸ ದಿವಸದೆಡಿಗೆ ।

ಚದುರರಿವರು ಕಾಣೊಕಿಂಚಿದ ಸುರಾವೇಶ ।
ಒದಗಿದಾಗಲು ದುಃಖ ಪ್ರಾಪ್ತಾಹದೊ ।
ಇದರಂತೆ ತಿಳಿ ದೈತ್ಯ ಜಾಲಕೆ ಸುಖವಿಲ್ಲ ।
ತ್ರಿದಶ ರಾವೇಶದಿಂದಲಿ ಬಪ್ಪದೊ ।
ಮಧುವೈರಿ ವಿಜಯ ವಿಠಲರೇಯ ವೈಕುಂಠ ।
ಸದನನ ಕ್ರೀಡಿಗೆ ನಮೊ ನಮೊ ಕರಮುಗಿದು ॥೩॥

## ಅಟ್ಟತಾಳ

ಚಿರಗಾಗಿ ಪರಮೇಷ್ಠಿ ಮಹ ಜಲಧಿಯಲ್ಲಿ ।
ಇರುತಿದ್ದು ನೋಡಿದ ನೀಕಮಲಕೆ ವೊಂದೊಂದು ।
ಗುರುತು ಕಾಣಲಿ ಬೇಕೆಂದಾಲೋಚಿಸಿ ।
ಸರನೆ ನಾಳ ಮಧ್ಯ ವಿಳ ವಿಳಿದು ಪೋಗಲು ಮಹ ।
ಬಿರಸು ವುನ್ನತವಾಗಿ ಯಿರಲಾಗಿ ಕಂಡು ಅ ।
ಚ್ಚರಿಯ ದೇವರ ಮೋಹವರ್ಜನೆ ಬ್ರಹ್ಮ ।
ಥರೆ ಚಂಡವಾತ ಮಹಾಧ್ವನಿ ಸುಳಿದೆಶೆ ।
ಹಿರಿದಾಗಿ ಹೊಡಸಿಕೊಂಡು ವುದಕದೊಳಗೆ ತಾ ।
ನರಿಯಲಾರದೆ ಭಯದವನಂತೆ ತೋರಿದ ।
ತಿರಿಗಿ ವೂರ್ಧ್ವ ದೇಶವ ಯ್ಯೆದಿದ ತಾನಾಗೆ ಕು ।
ಕ್ಷಿರಲಾಶ್ರಯವಾದ ಕಮಲ ಪೀಠದಲ್ಲಿ ।
ಹರಿಯಾ ಭಜನೆಯಲ್ಲಿ ಅತ್ಯಂತ ಉದ್ಯೋಗ ।
ತರನಾಗಿ ರೇಚಕ ಕುಂಭಕ ಪೂರಕ (ಪೂರ್ವಕ) ।
ಎರಡೊಂದರಲಿ ವಾಯುಧಾರಣೆ ಮಾಡಿ ವಿ ।
ಸ್ತರ ಸಮಾಧಿಯೋಗ ಧ್ಯಾನಂಗತ ನಾಗೆ ।
ಹರಿ ತಾನೆ ತಪ ತಪ ವೆಂದಾಮಾತಿಗೆ ಯಿಂಥ ।
ಸುರರ ಸಾವಿರ ವರುಷ ತಪವ ಮಾಡಿದನು ।
ಕರುಣದಿಂದಲಿ ಸ್ವಾಮಿ ಪ್ರಸನ್ನನಾದ ಮು ।

ಕ್ತ್ರರ ಸಹಿತ ನಾನಾ ದಿವ್ಯ ಭೂಷಣದಿಂದ ।
ಮೆರವ ತನ್ನ ಸ್ವಮೂರ್ತಿಯು ಹದಿನಾರು ।
ಕರೆಸಿಕೊಂಡವು ವಾಸುದೇವಾದಿ ವಿಮ ಲೋ ।
ತ್ಕರಷಣೆ ಮೊದಲಾದ ಅಣಿಮಾದ್ಯ ಪೆಸರಿಲಿ ।
ಪರಿವಾರದಿಂದಲಿ ಸೇವೆ ಕೊಳುತಲಿದ್ದು
ಪರಮೇಷ್ಠಿಯಿಂದಲಿ ದಿವ್ಯ ಸಾವಿರ ವರುಷ ।
ಪರಮ ಮುಖ್ಯ ಸ್ತೋತ್ತ್ರರ ಮಾಡಿಸಿಕೊಂಡು ।
ಕರಣದಿಂದಲಿ ಸರ್ವ ವೇದ ಬ್ರಹ್ಮ ತರ್ಕ ।
ಇ-ದೆ ಪಂಚರಾತ್ರಾಗಮ ವುಪದೇಶಿಸಿ ।
ಹರಿ ಅದೃಶ್ಯನಾದ ತರುವಾಯ ಅಜದೇವ ।
ವರುಷ ಸಾಸಿರವನ್ನು ವೋದಿದ ವೇದ ವು ।
ಚ್ಚರಿಸಿ ಕೊಳುತಲಿದ್ದು ಸರ್ವ ಜಗವನು ।
ತ್ವರದಿ ಪುಟ್ಟಿಸುವ ಮನಸುಮಾಡಿ ।
ನಿರುಪಮ ನಿರ್ಗುಣ ನಿಧಿ ವಿಜಯ ವಿಠಲನ್ನ ।
ಪರಿ ಪರಿ ರೂಪಗಳ ಧ್ಯಾನವ ಮಾಡುತ ||೪||

### ಆದಿತಾಳ

ನಳಿನ ಚತುರದಶ ಭುವನಾತ್ಮಕವಾಗಿ ।
ಬೆಳೆಯಿತು ಯಿದಕೆ ಆಧಾರಭೂತವಾಗಿ ।
ನಳಿನ ಸಂಭವ ತನ್ನ ವೈರಾಜ ರೂಪ ಧರಿಸಿ ।
ಸಲೆ ಮೆರದಾ ಮಹದಹಂಕಾರ ತತ್ವದಿ ನಿರ್ಮಾಣ ।
ಜಲಜನಾಭ ತಾನೆ ಸರ್ವ ಜೀವರಾಶಿ ।
ಗಳ ಸಹಿತ ಪುರುಷರೂಪದಿಂ ಪ್ರವೇಶಿಸಿದ ।
ತಲೆ ಮೊದಲು ಮಾಡಿ ಪಾದ ಮೂಲ ಪರಿಯಂತ ।
ಬೆಳಗಿದವು ಹದಿನಾಲ್ಕು ಲೋಕಂಗಳು ।
ಬಲುಜನ ಪುಟ್ಟಿದರು ತತ್ವಾಭಿಮಾನಿಗಳು ।

ಬಲವಂತ ರುದ್ರನಿಂದ ಪೂರ್ವದಂತೆ ಉತ್ಪತ್ತಿ ।
ತಿಳಿವದು ಆವ್ಯಾಲೆ ವಿರಾಟ ಕಲ್ಪದಲಿ ।
ನೆಲೆಗೊಳಿಸಿತು "ಅಹಂ ತ್ವಾಹಂ" ಯೆಂದು ಪ್ರಾಣಾ ।
ಕಲಹ ಪುಟ್ಟಿತು ತತ್ವರೊಂದಾಗಿ ನಿ ।
ಶ್ಚಲ ಮಾಡಬೇಕೆಂದು ವೊಂದು ಶರೀರದಲಿ ।
ಬಲು ಪರಿಕ್ಷೆಯ ಮಾಡಿ ಪ್ರಾಣದೇವರಿಗೆ ಪ್ರ ।
ಬಲತನದಿಂದಲಿ ಜೀವ ದೇವಾಧಿಪತಿ ।
ನಿಲಕರವಾಯಿತು ಸೂತ್ರನಾಮಕ ಪ್ರಾಣಗೆ
ಬಲಿಯ ತಂದಿತ್ತ ನಮಗೆ ಸ್ವಾಮಿ ನೀನೆಂದು ।
ತಲೆಬಾಗಿಸ್ತುತಿಸಿ ಕಾವುಥಾನೆಂದು ಕರೆದರು ।
ಜಲಜ ಸಂಭವಗೆ ಐದನೆ ಶೀರ್ಷವುಂಟಾದ್ದು ।
ವಲಿಮೆಯಿಂದಲಿ ಕೇಳಿ ರುದ್ರನಿಗೆ ಮೋಚಕವು ।
ಪೊಳೆವ ಸಮಸ್ತ ಜಗತ್ತನ್ನು ಪುಟ್ಟಿಸಿ ಅವರ ।
ಬಳಗದೊಡನೆ ಮೊದಲು ಯಾಗಗೋಸುಗ ಸಂಭಾರಾದಿ ।
ಗಳನು ಸೃಜಿಸಿ ಹರಿಯ ಪ್ರೀತಿ ಬಡಿಸಲಾಗಿ ।
ಒಲಿದು ಪ್ರಸನ್ನನಾದ ಪರಮಾತ್ಮ ಲಕ್ಷ್ಮೀಪತಿ ।
ಅಲೌಕಿಕ ಸ್ತೋತ್ರದಿಂದ ಸುರರಿಂದ ತೃಪ್ತನಾಗಿ ।
ಸುಲಭ ಮೂರುತಿ ಅಂತರ್ಧಾನ ಯೈದಿದನು ।
ಇಳಿಯೊಳಗಿವರು ಪೂರ್ವಸಾಧ್ಯರು ಯೆಂದು ।
ಕಲಕಾಲ ಪ್ರಸಿದ್ಧರಾದರು ದೇವತೆಗಳು ।
ಸಲಹಿದ ಬೊಮ್ಮನಿವರ ಅನುಲೋಮ ಪ್ರತಿಲೋಮ ।
ಕುಲದಿಂದ ಸಮಸ್ತರಿಗೆ ಬುದ್ಧಿಯನಿತ್ತು ।
ಜಲಜ ಕಲ್ಪಾಂತದಲಿ ಈ ಪ್ರಕಾರವಾಗೆ ।
ಪ್ರಳಯ ಮಾಡುವದಕ್ಕೆ ಅಂತ್ಯದಿನದಲ್ಲಿ ।
ಜಲಜ ಪೀಠನು ಯಿಚ್ಛೆವುಳ್ಳವನಾದ ಭೂಮಿಯ ।

ಮಳೆ ಮಿಕ್ಕಾದದರಿಂದ ಮುಳಗಿಸಿದ ನೀರೊಳಗೆ ।
ಲಲನೆ ಗಾಯಿತ್ರಿ ಸಹಿತ ಸತ್ಯಲೋಕದಲ್ಲಿ ।
ಮಲಗಿದ್ದು ಸರ್ವ ಜೀವರನ ಪಾವನಮಾಡಿ ।
ನಲುವಿಂದ ಯಿದ್ದನು ಪ್ರಕೃತಿ ಸಂಗಡ ಪುರುಷ ।
ಕಳೆಗುಂದದಲೆ ಯಿಲ್ಲಿಗೆ ಪದ್ಮ ಕಲ್ಪ ಕಡೆಭಾಗ ।
ತಿಳಿಯಬೇಕು ಜ್ಞಾನಿಗಳು ಮುಂದಿನ ವರಹಕಲ್ಪ ।
ಭಳಿರೆ ಭಳಿರೆ ಯಿದೆ ತತ್ವಕ್ಕೆ ಸಾನುಕೂಲ ।
ಜಲಧಿ ಶಯನ ನಮ್ಮ ವಿಜಯ ವಿಠಲರೇಯ ।
ಸುಳಿದಾಡುವ ಮುಂದೆ ಈ ಪರಿ ಧೇನಿಸಲು ||೫||

ಜತೆ

ಪದ್ಮ ಕಲ್ಪದ ಕಥೆ ಕೇಳಿದ ಮನುಜಂಗೆ ।
ಪದ್ಮೆ (ಪದ್ಮಿ) ವಲ್ಲಭ ನಮ್ಮ ವಿಜಯ ವಿಠಲ ಕಾವ ||೬||



## ವಿರಾಟ ಕಲ್ಪ ವಿರಾಟ ಮೂರ್ತಿಧ್ಯಾನ

೪೭) ಸುಳಾದಿ

ರಾಗ:- ಧ್ರುವತಾಳ

೧ ವಿರಾಟ ಮೂರ್ತಿ ಧ್ಯಾನಾ ಮಾಡುಯಿದೆ ಸ್ಥೌಲ್ಯ |
೨ ತೋರಾಟವಲ್ಲ ಕಾಣೊ ಕೇವಲಯೋಗ |
೩ ಮಾರಾಟ ಮಿಗಿಲಾದಿ ವಿಷಯಕ್ಕೆ ಶಿಲ್ಕಿಮಹ |
೪ ಘೋರಾಟದಲ್ಲಿ ಬಿದ್ದು ಹಗಲಿರಳು
೫ ಆರಾಟದೊಳು ಹೊರಳಿ ಬಳಲಿದ ರಾಗೆಯಿದು |
೬ ಹೇರಾಟದಂತೆ ಕಾಣೊ ಇಹದ ಸೌಖ್ಯ |
೭ ನೂರಾಟ ಕತ್ತೆಕೂಡ ಓಡಾಡಿದರೆ ಮೂರ್ಖ |
೮ ಪೋರಾಟ ವ್ಯನರೆ ನೋಡಿದವರು |
೯ ಮಾರಾಟ ನಿಲ್ಲಿಸೆಂದು ಹರಿಯ ಸ್ತುತಿಸಿ ನುತಿಸಿ |
೧೦ ಧೀರಾಟವನ್ನೆ ಬಯಸು ಮರಳೆ ಮರಳೆ |
೧೧ ಸ್ವಾರಾಟಗಾದರು ಹರಿಭಕುತಿ ರಹಿತಕರ್ಮ |
೧೨ ತೀರಾಟವಾಗದು ಲಿಂಗದೆಡಿಗೆ |
೧೩ ಹಾರಾಟದಿಂದಲಿ ದುಃಖನಾಶನ ಕಾಣೊ |
೧೪ ಜೋರಾಟ ಬಿಡು ಬಿಡು ನಾನೆಂಬೊದು |
೧೫ ಬೀರಾಟ ಸಿದ್ಧವೆನ್ನು ಜ್ಞಾನಿ ನಿರ್ಭಯನೆಂದು |
೧೬ ಭೀರಾಟ ಭೂಮಿಯೊಳಗೆ ಪಾಡುತಲಿ |
೧೭ ಕೋರಾಟ ಮುಕ್ತರೊಡನೆ ವಿಲಿಂಗನಾಗಿಯಿದೆ |
೧೮ ಸಾರಾಟ ಸಂತತ ಸುಜನಾ ಮೆಚ್ಚು
೧೯ ಭೂರಾಟ ಮೊದಲಾದ ವೈಭವ ಪ್ರಾಪ್ತಿಯಿಂದ
೨೦ ಆರಾಟದೊಳು ಮುಳುಗಿ ತೇಲಬೇಕು |
೨೧ ದೂರಾಟ ವಿಚಾರಿಸು ಅನಂತ ಕಾಲಕ್ಕೆಬ |

೨೨ ಹೇರಾಟ ವೆಗ್ಗಳಿಸೆ ಬಲು ಜನ್ಮವು|
೨೩ ಆರಾಟ ಬಲ್ಲರೆಂಬಿಯಾ ಮುನ್ನಿನ ಪಿರಿಯರು |
೨೪ ಸ್ತ್ರೀರಾಟ ಉದಾಸಿ ಗತಿಯೈದಿದರು
೨೫ ವೀರಾಟ ಗಮನ ನಮ್ಮ ವಿಜಯ ವಿಠಲರೇಯ |
೨೬ ನೀರಾಟ ಆಡಿದ ಸತಿಯರಿಗೆ ಮುಕುತಿಯಿತ್ತ |

## ವಿರಾಟ ಮೂರ್ತಿಯ ವ್ಯಾಪಾರ ೪೭ ನೇ ಸುಳಾದಿ ಧ್ರುವತಾಳದ ೨೬ ಕ್ಕೆ ಅರ್ಥ

೧. ಬ್ರಹ್ಮಾಂಡ ವಿಸ್ತಾರ ರೂಪ
೨. ತೋರಿಕೆ ಬಹಿರಂಗ ಆಟವಲ್ಲದೆ ಕೇವಲ ಯೋಗ್ಯ ಮಾರ್ಗವಲ್ಲ
೩. ಕಾಮನ ಆಟ, ವಿಷಯಾಸಕ್ತಿ
೪. ಮಹಾದುಃಖವೀವ ನರಕಗಳಲ್ಲಿ
೫. ದುಃಖದಲ್ಲಿ
೬. ದೊಡ್ಡಭಾರ, ನಾನಾ ಜನ್ಮ ಹೊಂದುವದು
೭. ಮನೋಸ್ವೇಚ್ಛೆಯಿಂದ ವರ್ತಿಸುವದು
೮. ಹುಡುಗಾಟಿಕೆ
೯. ಕಾಮನ ಉಪಟಳ, ವಿಷಯಾಸಕ್ತಿ
೧೦. ಬುದ್ಧಿ ಜ್ಞಾನಗಳಲ್ಲಿ ಆಟವಾಡುವ ಜ್ಞಾನಿಗಳ ಸಂಗ
೧೧. ಏಕಚಕ್ರವರ್ತಿ
೧೨. ಎಂದಿಗೂ ತೀರದೇ ಕಡಿಗೆ ಹಾಕದು
೧೩. ಪ್ರಾಣಾಯಾಮಾದಿ ಶ್ವಾಸವು ಹಾರಾಡುವದು, ನಿರ್ಬಂಧಿಸಲು ಮನಸ್ಸು ಪ್ರಸನ್ನತೆ ಯಾಗುವದು
೧೪. ನಾನೆಂಬ ಅಹಂಕಾರ
೧೫. ಜ್ಞಾನಿಗೆ ಬಹಿರಂಗ ಉಪದೇಶಾದಿಗಳಿಗೆ ಶುದ್ಧವಾದ ನಿರ್ಭಯವಿದ್ದರೂ
೧೬. ತನಗೆ ಉತ್ತಮರಾದ ಜ್ಞಾನಿಗಳಲ್ಲಿ ಭಯ, ಭೀತಿ ವಿನಯದಿಂದ

ಸ್ತೋತ್ರ ಮಾಡುತ್ತಾ
೧೭. ಮುಕ್ತರೊಡನೆ ಆಟ ಬಯಸುವದು ಕೋರು
೧೮. ಶ್ರೇಷ್ಠ ಸಾರಭೂತ
೧೯. ರಾಜ್ಯಾದಿ ವೈಭವ
೨೦. ದುಃಖ ಕ್ಲೇಶ ಚಿಂತಾ ಸಂತಾಪ
೨೧. ದೂರದಲ್ಲಿರುವ ಮೋಕ್ಷ ಪುರುಷಾರ್ಥ
೨೨. ಬಹಿರಂಗ ಸ್ಥೂಲ ಕರ್ಮಗಳ ಮಾಡಿ
೨೩. ದುಃಖವಲ್ಲದೆ ಸುಖವಿಲ್ಲ
೨೪. ಸ್ತ್ರೀಯರ ಉತ್ತಮ ಭೋಗಗಳು
೨೫. ಗರುಡ ಗಮನ
೨೬. ಜಲಕ್ರೀಡೆ

## ಮಟ್ಟತಾಳ

ಶ್ರೀ ಕಾಂತನರೂಪ ಪಾತಾಳ ಸತ್ಯ ।
ಲೋಕವಿಡಿದು ವುಂಟು ಒಂದೊಂದುವಯವದಿ ।
ಲೋಕೇಶ ನೊಳಗೆ ಚತುರ್ದಶ ಭುವನಗಳು ।
ನಾಕ ಜನರು ಮಿಕ್ಕ ಜೀವರು ತುಂಬಿಹ್ಯರು ।
ಯೇಕೈಕಧ್ಯಾನ ಮಾಡು ಮುಖ್ಯವಾಗಿ ।
ಲೋಕಂಗಳು ಅಲ್ಲಿಯಿದ್ದ ವ್ಯಾಪಾರಂಗಳು ।
ವಾಕು ಗಾತುರ ಮನಸು ಪೂರ್ವಕದಿಂದ ವಿ
ವೇಕ ಭಕುತಿಯಲ್ಲಿ ಭವ ದೂರನಾಗಿ ।
ಏಕಾಂತದಿ ಕುಳಿತು ಹರಿಪಾದಾನೆರೆನಂಬಿ ।
ವಾಕು ಸಾರಥಿ ನಮ್ಮ ವಿಜಯ ವಿಠಲರೇಯ ।
ಶೋಕ ಪೋಗಾಡುವನು ಈ ಪರಿ ಧ್ಯಾನಿಸಲು ॥೨॥

ರೂಪಕ ತಾಳ

ಪಾತಾಳೋತ್ಪಾದಕ ತದಾಶ್ರಯ ತದ್ಭಿನ್ನ
ನೀತಿಯಿಂದಲಿ ತಿಳಿ ಪಾದ ಮೂಲವೆನ್ನು
ಖ್ಯಾತಿಯಾದ ವಾಸುಕಿ ಶಂಖ ಕಾಳಿಕೆ ಪ್ರಬಲ
ಶ್ವೇತ ಧೃತರಾಷ್ಟ್ರ ಮಹಶಂಖ ಧನಂಜಯ ।
ಧಾತ ಶಂಖಚೂಡ ಮಿಗಿಲಾದ ಸರ್ಪಗಳು ।
ಜಾತಿ ಸಮೇತದಲಿ ತುಂಬಿ ಕೊಂಡಿಪ್ಪರು ।
ಭೂತಿಗಳಿಂದೊಪ್ಪುತಲಿ ಮಹ ಮಣಿ ವಜ್ರ ।
ಭಾತಿಯ ತೋರುತ್ತ ಬಲು ಕೋಪವುಳ್ಳವರಾಗೆ ।
ಜ್ಯೋತಿರ್ಮಯ ಕಾಯ ವಿಜಯ ವಿಠಲರೇಯ ।
ಪಾತಾಳ ಲೋಕ ಧರಿಸಿಹ್ಯನು ಧ್ಯಾನ ಮಾಡಿ ॥೩॥

ಝಂಪಿತಾಳ

ಪೃಥ್ವಿ ಉತ್ಪಾದಕ ತದಾಶ್ರಯ ವಾಗಿದೆ ।
ಚತುರ ನೊಗ ಮುಖ್ಯ ಸುರ ವಂದಿತ ।
ಸತತ ಧ್ವಜ ವಜ್ರಾಂಕುಶ ಶಂಖ ಚಕ್ರ ಶೋ ।
ಭಿತ ಗದ ಪದುಮ ಲಾಂಛನ ಸ್ವರ್ನದಿಯ ಜನಕ ।
ಚತುರ್ಜಾತಿ ವುದ್ಭವ ತರುಣಾದಿತ್ಯ ವರ್ಣ ।
ಅತಿಶಯ ಆಶ್ವತಯುಗ್ಮಷ್ಟ ಗಜ ಜನಕ ರ ।
ತುನ ಕಾಂತಿಗೆ ಮಿಗೆ ನಖ ಭಕ್ತಜನಕ ಆ ।
ಶ್ರಿತವಾಗಿಯಿಪ್ಪ ಪದ ರಸಾತಳೋತ್ಪಾದಕ ।
ದಿತಿಸುತರು ಯಿಲ್ಲ್ಯಂಟು ನಾಮ ಭೇದದಲ್ಲಿ ವು ।
ತ್ಪತ್ತಿ ಮೊದಲಾದ ಮಹ ಸಾಹಸದಲ್ಲಿ ।
ತತಿ ಸಹಿತ ವೊಂದು ಬಿಲದಲ್ಲಿ ವೊಳಗಿ ಅಡಗಿಹರು ಅ ।
ಚ್ಯುತನ ವಾಗ್ರೂಪ ಮಂತ್ರದ ಭೀತಿಗೆ ।

ಕಥೆಯುಂಟು ಯಿಲ್ಲೊಬ್ಬೆಂದು ಶ್ವಾನ ರೂಪವುಳ್ಳ ।
ಶತ ಮೇಧದಲಿ ಯಿದ್ದ ತನ್ನಾಮಕ ಹರಿ ।
ತತುವೇಶರೊಡನೆ ಪೂಜೆಯಗೊಳುತಿಪ್ಪ ।
ಪತಿತ ಪಾವನ ನಮ್ಮ ವಿಜಯ ವಿಠಲರೇಯನ ।
ಸತತ ಧ್ಯಾನವ ಮಾಡಿರೊ ಪಾದ ಪೃಷ್ಟವನು ॥೪॥

## ತ್ರಿವಿಡಿ ತಾಳ

ಪರಡು ಎರಡರಲ್ಲಿ ತಜ್ಜನ್ಯ ತದಾಶ್ರಯ ।
ಮೆರೆವ ಮಹಾತಳ ಲೋಕವಿಪ್ಪದು ಅಲ್ಲಿ ।
ಉರಗ ನಾಯಕರು ಬಹು ಶಿರಸಾ ವುಳ್ಳವರು ವಿ ।
ಸ್ತರವಾಗಿ ತಮ್ಮ ಬಳಗ ಸಹಿತದಲ್ಲಿ ।
ಮರಳೆ ಕುಲಹಕ ತಕ್ಷಕ ಕಾಲಿಯ ಸುಶೇಣ ।
ವರ ಕ್ರೋದವಶವಾದ ಸರ್ಪಗಳು ವಾಸ ।
ಗರುಡನ ಭಯದಿಂದ ಸತಿ ಸುತರೊಡನೆ ಸಂ ।
ಚರಿಸುತ್ತಲಿಪ್ಪರು ಸ್ವಲ್ಪ ಪ್ರಮತ್ತರಾಗಿ ।
ಶರಧಿಶಯನ ನಮ್ಮ ವಿಜಯ ವಿಠಲ ಮೂರುತಿಯ ।
ಸ್ಮರಿಸಿ ಧ್ಯಾನವ ಮಾಡೊ ಗುಲ್ಫದ ಧ್ವನಿಯಲ್ಲಿ ।೫॥

## ಧ್ರುವತಾಳ

ಗುಣಿಸು ತಳಾ ತಳೋದ್ಭವ ಕ್ರಮಾಲ ವೃತ್ತ ಪಾ ।
ವನ ವರ ಜಂಘೆ ದ್ವಯದ ತದಾಶ್ರಯವೆನ್ನು ।
ದನುಜ ಕುಲದ ಬಡಿಗ ಮಯನೆಂಬುವನು ನಿ ।
ಪುಣದಿಂದ ತಾನೆ ಮಾಡಿದ ತ್ರಿಪುರವ ।
ಅನಲಾಕ್ಷನಿಂದ ಚಕ್ರದಿಂದಲಿ ಅಂದು ನಾ ।
ಶನವಾಗಿ ಪೋದಮೇಲೆ ಹರಿಪ್ರಸಾದ ।

ಘನವಾಗಿ ಸಂಪಾದಿಸಿ ಮಹದೇವನಿಂದ ರ |
ಕ್ಷಣಿಯಾಗಿ ಸುಖಿಸುತಿಪ್ಪ ಪ್ರಬಲನಾಗಿ |
ಗುಣವಂತ ಮಹದೈವ ವಿಜಯ ವಿಠಲರೇಯನ |
ನೆನಿಸು ತಳಾತಳ ಜಂಘೆ ದ್ವಯದಲ್ಲಿ ||೬||

### ರೂಪಕತಾಳ

ಚನ್ನಾಗಿ ನೋಳ್ಪದು ಸುತಳ ಲೋಕದ ಸ್ಥಿತಿ |
ಕನ್ನಡಿಯಂತಿಪ್ಪುದು ಜಾನು ಮಂಡಲದ್ವಯದಿ |
ಬಿನ್ನಣದಿಂದಲಿ ಪುಟ್ಟಿತು ನೋಡಾ ಸಂ |
ಪನ್ನ ಸತ್ಕೀರ್ತಿ ಪ್ರತಾಪ ಸಜ್ಜನಮಣಿ |
ಪುಣ್ಯಶ್ಲೋಕ ಬಲಿಚಕ್ರವರ್ತಿ ಮಹ |
ಧನ್ಯನು ಕಾಣೊ ವಾಮನರೂಪ ಕೃಷ್ಣಗೆ |
ತನ್ನ ಮಸ್ತಕವಿತ್ತು ದಾನವಾಂತಕನ ಕಾ |
ರುಣ್ಯ ಸಂಪಾದಿಸಿ ಇಂದ್ರ ಪದವಿ ಪಡೆದ |
ಇನ್ನಿತು ಧ್ಯಾನಿಸಿರೊ ವಿಜಯ ವಿಠಲನು ಪ್ರ |
ಸನ್ನನಾಗುವ ಬಿಡದೆ ಭಕುತಿಗೆ ವೊಲಿದು ||೭||

### ಝಂಪಿತಾಳ

ಇಂದ್ರಿರಾಶ್ರಯ ವೈಶ್ಯಕುಲಜನ್ಯ ತದಾಶ್ರಯ |
ನಂದ ಪ್ರಭಾಶೋಭನ ಪರಮೋರುದ್ವಯವು |
ಅಂದು ಪುಟ್ಟಿದಲೋಕ ವಿತಳವೆನಿಸುವದು ಮಯ |
ನಿಂದ ಜನಿಸಿದ ಬಲನೆಂಬೊ ದನುಜಾ |
ನಿಂದ ಪುಟ್ಟಿದ ತೊಂಭತ್ತಾರು ಮಾಯುಗಳು ಬಲು |
ಸಾಂದ್ರವಾಗಿವೆ ಯಿವೆ ಓದುವ ಜನರ |
ಸಂದೋಹರುಂಟು ಬಲ ಆಕಳಿಸಿದರೆ ಮುಖ |

ದಿಂದ ಪ್ರೋಂಕ್ಷ್ಟಲಿ ನಾರಿಯರುದ್ಭವ ।
ಮಂದಹಾಸದಲ್ಲಿ ಪುರುಷರೊಡನೆ ಮನ ।
ಬಂದಂತೆ ಕ್ರೀಡಿಪರು ಅನುರಾಗದಿ ।
ಇಂದು ಮೌಳಿ ಅಲ್ಲಿ ಹಾಟಕಾಖ್ಯನದಿ ।
ಪೊಂದಿ ಪರಿವಾರದಿಂದಲ್ಲಿ ವೊಪ್ಪುತ ।
ಒಂದೊಂದು ವಾಲಗವ ಕೈಕೊಳುತ ಪರ್ವತ ।
ನಂದನಿಯ ಕೂಡ ಕ್ರೀಡೆಯನಾಡುತ ।
ಚಂದವಾಗಿದೆ ನೋಡಿ ಈ ಜನರು ಅಯುತ ।
ಶಿಂಧೂರ ಬಲಸಮರು ಸಕಲ ಕಾಲ ।
ವೃಂದಾರಕ ವಂದ್ಯ ಹಾಟಕ ನದಿಯಲ್ಲಿ ।
ಬಂದು ಪಾವನ ಮಾಡಿ ಹಾಟಕ ಸ್ವರ್ನ ।
ಒಂದೊಂದು ವಿಚಿತ್ರ ಭೂಷಣವು ಧರಿಸಿ ಗುಣ ।
ದಿಂದ ಚರಿಸುವರು ಹರಿ ಸೇವೆಯಲ್ಲಿ ।
ಒಂದಾನಂತರೂಪ ವಿಜಯ ವಿಠಲರೇಯಗೆ ।
ವಂದಿಸಿ ವಿತಳ ಲೋಕದ ಮಹಿಮೆ ತಿಳಿಯೊ ।೭॥

## ತ್ರಿವಿಡಿ ತಾಳ

ಅತಳ ಲೋಕ ಸರ್ವಮೃಗ ಪಶುಜಾತಿ ವು ।
ತೃತಿ ಕಾಣೊ ಶ್ರೋಣಿ ದೇಶದಿಂದ ಅಲ್ಲೀಗ ।
ಅತಿ ಮೋದದಿಂದ ನಾನಾಪರಿ ವನವು ।
ನ್ನತ ಕ್ರೀಡೆಯಾಡೆ ಆಡುವ ದೈತ್ಯ ದಾನವ ಕದ್ರುವೆ ।
ಸುತರು ಮಿಗಿಲಾದವರು ತಮ ತಮ್ಮ ನಿಜನಾರಿ ।
ಸುತ ಬಂಧುಗಳು ಬಳಗ ಕೂಡ ಯಿಹರಯ್ಯ ಲೇಸಾಗಿ ।
ಪ್ರತಿಯಿಲ್ಲದೆ ಮಯನ ಮಾಯದಿಂದಲಿ ಮಹ ।
ರತುನ ಕೆತ್ತಿಸಿದ ಮುನಿಗೋಪುರ ವುಪ್ಪರಿಗೆ ಬೀದಿ ।
ಚತುರಂಗ ಮೊದಲಾದ ಶ್ರಿಂಗಾರ ಸ್ಥಳಗಳು ।

ಮಿಥುನ ಭಾವವುಳ್ಳ ಮೃಗ ಪಕ್ಷಿ ಜಾತಿಗಳು ।
ಶತಪತ್ರ ಮೊದಲಾದ ಪುಷ್ಪ ಫಲ ತರುಜಾತಿ ।
ಕೃತ ಕೃತ್ಯರಾಗಿ ಯೆಲ್ಲರಿಗೆ ವಾಸವಕ್ಕು ।
ಚ್ಯುತದೂರ ವಿಜಯ ವಿಠಲ ಆತ್ಮನಹುದೆಂದು ।
ಅತಳ ಲೋಕವನು ಧ್ಯಾನವ ಮಾಡು ಮನುಜಾ ||೯||

## ರೂಪಕತಾಳ

ಅವನಿ ಉತ್ಪಾದಕ ತಿದಾಶ್ರಯನಾಗಿ ಮಿಂ ।
ಚುವ ಜಾಂಬೂನದ ವಸನ ಸ್ವರ್ಣ ಮಂಜೀರ ಜಘನ್ನ ।
ರವಿಯಂತೊಪ್ಪುವ ನಾನಾ ಪ್ರಕಾರದಲ್ಲಿ ।
ನವ ಖಂಡವುಳ್ಳ ಜಂಬು ದ್ವೀಪ ವುಳಿದಾದ ।
ಭುವನ ರಾಶಿಯೊಳು ಅಲ್ಲಿಗಲ್ಲಿಗೆ ದ್ವೀಪ ।
ವಿವರ ಪರ್ವತ ನದಿಗಳು ಕರ್ಮಸಾಧನ ಮಾ ।
ಡುವ ಮೃಗ ಪಶು ಪಕ್ಷಿ ಮಾನವರುಂಟು ।
ದಿವಿಜ ದಾನವರ ಅವತಾರಗಳಾಗೋವು ।
ತವಕದಿಂದಲಿ ಹರಿಯ ಅವತಾರಗಳುಂಟು ।
ದಿವಾರಾತ್ರಿಯೆಂಬೋದು ಈ ಲೋಕದಲಿ ಸಿದ್ಧ ।
ಕವಿಗಳು ಪೇಳ್ವರು ಮಹ ಪುಣ್ಯವಾಳ್ವರು ।
ಅವಿಕಾರ ಮೂರ್ತಿ ನಮ್ಮ ವಿಜಯ ವಿಠಲ ರೇಯನ ।
ಪವನನ ಮಧ್ಯದಲಿ ಯಿನಿತು ಚಿಂತಿಸಬೇಕು ||೧೦||

## ಝಂಪೆತಾಳ

ಪೊಕ್ಕಳ ಬಾಗದಿಂದಂತರಕ್ಷದ ಲೋಕ ।
ವ್ಯಕ್ತವಾಯಿತ ನೋಡಿ ಯಿದರ ವರ್ಣ ।
ಉಕ್ತಿಯಿಂದಲಿ ಕೇಳಿ ಮೇಘಾದಿ ಮಂಡಲವು ।
ಉಕ್ತಕ್ರಮದಿಂದ ಯೋಜನ ಭೇದ ।

ದಿಕ್ಕುಪಾಲಕರುಂಟು ಅಲ್ಲಿಗಲ್ಲಿಗೆ ದೇವ ।
ಲಕ್ಕುಮಿ ರಮಣನು ವಾಲಗವ ಕೊಂಬುವನು ।
ಇಕ್ಕೆಲದಲಿ ವುಳಿದ ದೇವತೆಗಳುಂಟು ।
ರುಕ್ಕುಮಾ ಪರ್ವತಕ್ಕಾಧಾರನಾಗಿ ।
ಭಕ್ತವತ್ಸಲ ಹರಿ ಶಿಂಶುಮಾರ ।
ಶಕ್ತಿ ಅನಂತವುಳ್ಳ ಪರಮಾತ್ಮದೇಹದಲಿ ।
ನಕ್ಷತ್ರಾದಿಗಳನುದ್ಧರಿಸಿ ಕಾವುತಲಿಪ್ಪ ।
ಅಕ್ಕಟ ಬಾಲಾಗ್ರದಲಿ ಧ್ರುವರಾಯ ಬಾಲದಲಿ ।
ಶಕ್ತಿಧರ ಪ್ರಜಾಪತಿ ಇಂದ್ರಧರ್ಮ ।
ತಕ್ಕವರೆನ್ನು ಪುಚ್ಛಮೂಲಧಾತಾ ವಿಧಾತ ।
ತರ್ಕೈಸಿದಂತೆ ಕುಕ್ಷಿಯಲಿ ಸಪ್ತಋಷಿಗಳು ।
ಶುಕ್ರ ನಾಭಿಯಲ್ಲಿ ಮನಸಿನಲಿ ಚಂದ್ರಮ ।
ಅರ್ಕ ವಕ್ಷಸ್ಥಳದಲ್ಲಿ ಕಕುಭ ಬ್ರಹಸ್ಪತಿ ।
ರಕ್ತಾಂಗ ಮುಖದಲ್ಲಿ ಶಶಿ ಉಪಸ್ಥದಲ್ಲಿ ।
ಮಿಕ್ಕಾದವರುಂಟು ಬುಧರಾಹುಕೇತು ತಾ ।
ರಕ್ಕಿಗಳು ವೊಂದೊಂದು ಸ್ಥಾನ ವಿಶೇಷದಲಿ ।
ಸಿಕ್ಕಿಕೊಂಡಿಪ್ಪರು ಯೆಲ್ಲಕಾಲದಿ ಬಿಡದೆ ।
ಚಕ್ರದಂತೆ ತಿರುಗಿ ಹೊತ್ತುಗಳ ನಡಿಸುತ್ತ ।
ಚಕ್ರಧರ ಸೃಷ್ಟಿಕಾ ಕಾರನಾಗಿ ।
ಮುಕ್ತರಿಗೆ ದರುಶನವ ಕೊಡುವ ವಿಜಯ ವಿಠಲ ।
ಲೆಖ್ಖವಿಲ್ಲದೆ ವೈಮಾನಿಕರ ಪಾಲಿಪನು ॥ ೧೧ ॥

ತ್ರಿವಿಡಿ ತಾಳ

ಸುರಲೊಕೋತ್ಪಾದಕ ತದಾಶ್ರಯ ತದ್ಭಿನ್ನ ।
ಪರಮ ಸುಂದರ ವಿಗ್ರಹ ನಿತ್ಯ ಇಂ ।

ದಿರೆ ಭುಜಾಂತರ್ಗತ ಅನಘರತ್ನಮಯ ವನಮಾಲ ।
ಸರಿ ಪರಿ ಹಾರ ವಿಸ್ತಾರ ಬೂಷಣ ವಕ್ಷ್ಯ ।
ಪುರುಹೂತನಲ್ಲಿ ವಾಸುದೇವನ ಪೂಜಿಸುವ ।
ಸರಿ ಸರಿ ಬಂದಂತೆ ಭೋಗದಲ್ಲಿ ನಲಿವ ।
ಕರಿ ಐರಾವತ ಉಚ್ಚೈಶ್ರವನೆಂಬ ತುರಗ ತಳೋ ।
ದರಿ ಶಚಿ ಸೂತ ಮಾತಳಿ ನಂದನ ವನವು ।
ಪುರವೆ ಅಮರಾವತಿ ಸಿಂಹಾಸನದಿ ಶ್ರೀಂ ।
ಗರದಿಂದ ಕುಳಿತು ಲೋಕದಲಿ ನಾನಾರೂಪ ।
ಧರಿಸಿದ ನಿರ್ಜರರು ಇಂದ್ರದೇವನ ಬಲು ।
ಹರುಷವುಳ್ಳವರಾಗಿ ಭಜಿಸುವರು ।
ತರಣಿ ಪ್ರಕಾಶ ನಮ್ಮ ವಿಜಯ ವಿಠಲರೇಯನ ।
ನಿರುತ ಧ್ಯಾನವ ಮಾಡಿ ದಿವ ಲೋಕವ ।೧೨॥

## ಧ್ರುವತಾಳ

ಮತ್ತೆ ಮಹರ್ಲೋಕೋತ್ಪಾದಕ ತದಾಶ್ರ ।
ಯ ತದ್ಭಿನ್ನ ಕಂಬು ಸನ್ನಿಭ ।
ಕಂಸ್ತೂಭ ಭೂಷಣ ಅಖಿಳ ವೇದೋಚ್ಚಾರ ಕಂಠ ।
ವೃತ್ರ ವಿರೋಧಿ ಇಂದ್ರ ಪ್ರಭುವಾಗಿಯಿಪ್ಪ ಸ ।
ಮಸ್ತ ದೇವತೆಗಳು ಪ್ರದ್ಯುಮ್ನ ಅನಿರುದ್ಧ ।
ಉತ್ತಮ ನಾರದ ಋಷಿ ಅಲ್ಲಿಯಿದ್ದು ಶ್ರೀ ಹರಿಯ ।
ಚಿತ್ತದಲಿ ಧ್ಯಾನ ಮಾಡುವರಯ್ಯಾ ।
ಇತ್ತ ಲಾಲಿಸಿ ಕೇಳಿ ಇಂದ್ರಾಗ್ನಿ ಬ್ರಹ್ಮಾಣಿ ಸರ ।
ಸ್ವತ್ಯೋತ್ಪಾದಕ ಜ್ಞಾನನಿಧಿ ಮಹ ಪರಮ ।
ಕತ್ತಲೆ ನಾಥ ಸಹಸ್ರ ಮಿಗೆ ಕಾಂತೆ ।
ಭಕ್ತರ ಭವ ತಾಪ ನಾಶ ಜನಲೋಕೋತ್ಪಾದಕ ಮುಖ ।
ಮೈತ್ರೇಯ ಸನಕಾದಿ ಋಷಿಗಳು ರುದ್ರ ಅಧಿ ।

ಸತ್ಯನಾಗಿ ಯಿಪ್ಪ ಲೋಕದಲ್ಲಿ |
ಶಕ್ರಾದ್ಯಾದಿ ದೇವತೆಗಳು ಭೂತಗಣ ಸಮಸ್ತ |
ಸ್ತೋತ್ರ ಮಾಡುವರು ಶಿವನ ಬೃಹಸ್ಪತಿ ವಾಸ |
ಚಿತ್ರವಾದ ಉದ್ಯಾನವನಗಳಿಪ್ಪವು ವಿ |
ಚಿತ್ರ ಧ್ವನಿಮಾಡುವ ಖಗ ಮೃಗ ಜಾತಿ |
ಚಿತ್ತದೊಡೆಯ ನಮ್ಮ ವಿಜಯ ವಿಠಲರೇಯನ |
ನಿತ್ಯ ಈ ಪರಿಯಿಂದಲಿ ಧ್ಯಾನವ ಮಾಡಿರೋ ||೧೩||

### ತ್ರಿವಿಡಿ ತಾಳ

ರುದ್ರೋತ್ಪಾದಕ ತಪೋಲೋಕ ಲಲಾಟ |
ಪದುಮ ಸಂಭವನಲ್ಲಿ ಅಧಿಪತಿಯು |
ರುದ್ರನ ಯಿರುತಿಪ್ಪ ಸಕಲ ಋಷಿಗಳೊಡನೆ |
ರೌದ್ರಮೂರುತಿ ನೃಕೇಸರಿಯ ಪೂಜಿ |
ನಿರ್ದೋಷ ಮನದಲ್ಲಿ ಮಾಡುತ್ತಲಿ ತನ್ನ |
ಪೊದ್ದಿಕೊಂಡು ಸ್ತೋತ್ರಗೈವುತಲಿ |
ತ್ರಿದ್ದೇಶನಾಯಕನು ದೇವತೆಗಳಕೂಡ |
ರುದ್ರನ್ನ ಭಜಿಸುವರು ವಿನಯದಿಂದ |
ಬುದ್ಧಿವಂತರುವುಂಟು ವೇದಾಭಿಮಾನಿಗಳು |
ಉಧ್ಯಾನವ ಮತ್ತೆ ಪುರಗೋಪುರ |
ಪದ್ಮಗರ್ಭನ್ನ ನೋಡೋ ಗೋಸುಗ ಸುರರೆಲ್ಲ |
ರುದ್ರನ್ನ ಬಳಿವಿಡಿದು ಪೋಗುವರು |
ಭದ್ರಮೂರತಿ ನಮ್ಮ ವಿಜಯ ವಿಠಲನಂಘ್ರಿ
ಪದ್ಮ ಪೊಂದಬೇಕಾದರೆ ತಪೋಲೋಕ ಚಿಂತಿಸು ||೧೪||

### ಝಂಪೆತಾಳ

ವಿರಂಚಿ ಸತ್ಯ ಲೋಕೋತ್ಪಾದಕ ಶೀರ್ಷ |
ಸರ್ವ ಅವತಾರ ಶ್ರೀಹರಿ ಮೂರ್ತಿಯ |

ಪರಿ ಪರಿಯಿಂದಲಿ ಚತುರ್ಮುಖ ಪೂಜಿಪನು ।
ಸುರರಾದಿ ಗಣದಿಂದ ಸ್ತುತಿಸಿ ಕೊಳುತ ।
ಮರುತ ದೇವನು ಅಲ್ಲಿ ವಾಸವಾಗಿಯಿಪ್ಪ ಅತಿ ।
ಪರಮ ಪ್ರಧಾನತನ ಮಾಡಿಕೊಳುತ ।
ವಿರಜೆಯೆಂಬೋ ನಾಮದಿಂದ ಗಂಗೆಯು ಬಿಡವೆ ।
ಕರಸಿಕೊಂಬುವಳು ಪವಿತ್ರಳಾಗಿ ।
ತರುವಾಯ ಮಹ ಮಹಿಮೆ ತೋರಿಕೊಳುತ ಭಜಿ ।
ಕರ ಪಾಪವು ಭೂಲೋಕದಲಿ ಕಳೆವುತ್ತ ।
ಎರಡೇಳು ಭುವನದ ವರ್ತಮಾನವ ತಿಳಿದು ।
ಇರಳು ಹಗಲು ಯೋಚನೆ ಮಾಡಿರಯ್ಯಾ ।
ವರ ಶೀರ್ಷ ಪಾದ ಮೂಲ ಮಧ್ಯದಲಿದ್ದ ವಿ ।
ಸ್ತರವೆಲ್ಲ ಧೇನಿಸು ಸರ್ವಾಂಗದಿ ।
ಪುರುಷ ಪಾಲಕ ಸಿರಿ ವಿಜಯ ವಿಠಲರೇಯನ ।
ಚರಿತೆಯನು ಕೊಂಡಾಡಿ ಮನದಣಿಯ ನೋಡಿ ॥೧೫॥

## ಮಟ್ಟತಾಳ

ಪಾ (ಪ) ದದಲಿ ಜಯಂತ ಮೇಂಡ್ರದಿಂದ ದಕ್ಷ ।
ಉದುಭವಿಸಿದನು ಮಿತ್ರ ವೃಷಣದ್ವಯ ದಿಂದ ।
ಒದಗಿ ರೇತಸು ರುದ್ರ ಜರಾಯುಜ ಶಶಿ ।
ನದಲಿ ಪುಟ್ಟಿತು ನೋಡು ರೇತಸಿನಿಂದಲ್ಲಿ ।
ಉದಕ ಜನನ ವಿರ್ಯದಿಂದಲಿ ಬ್ರಹ್ಮಾಂಡ ।
ತ್ರಿದಶ ಗಣದಿ ಅನ್ನ ವುಧ್ಭವ ವೆನ್ನು ।
ಸ್ವಧ ಸ್ವಹಾ ವೆರಡು ವಿರ್ಯ ಗುಣದಿಂದ ।
ಉದಧಿಗಳು ತನುವ ಧರದಿಂದಲಿ ಸಿದ್ಧ ।
ಇದೆ ಪಾರ್ಶ್ವಗಳಲ್ಲಿ ಶೇಷ ಗರುಡಾದಿ ವಾಸ ।

ಹೃದಯದಲ್ಲಿ ಮೂಲ ಪ್ರಕೃತಿ ಆಶ್ರಯವು ।
ವಿಧಿ ರುದ್ರಾದಿಗಳು ಮಧ್ಯದೇಹದಿಂದ ।
ಮುದದಿಂದಲಿ ಕೇಳಿ ಸ್ತನದಿಂದಲಿ ಧರ್ಮ
ಉದಸಿದ ಕಾರಣ ಗೊಳಕದಿಂದ ಶಬ್ದಗಳು ।
ವಿಧಿ ಮೊದಲಾದ ದಿಗ್ದೇವತಿ ಕರ್ಣೇಂದ್ರಿಯದಲ್ಲಿ ।
ಪದುಮ ಬಾಂಧವ ಚಂದ್ರ ಚಕ್ಷುರೇಂದ್ರಿಯದಲ್ಲಿ ।
ಉದಶಿದರುದ್ವಯ ಈ ಗೋಳಕದಿಂದ ।
ಹೃದಯ ನಿವಾಸ ಸಿರಿ ವಿಜಯ ವಿಠಲರೇಯ ।
ಸದಮಲ ಮೂರ್ತಿಯ ಸರ್ವದ ಕೊಂಡಾಡಿ ॥೧೬॥

### ರೂಪಕತಾಳ

ನಾಸದಿಂದಲಿ ವೈದ್ಯರು ಪ್ರಸಾದದಿಂದ ಕಮ ।
ಲಾಸನ ಕ್ರೋಧದಿಂದಲಿ ರುದ್ರ ಪುಟ್ಟಿದರು ।
ನಾಶಿಕೇಂದ್ರಿಯದಿಂದ ಗಂಧದೇವಾನ್ನ ಮಾ ।
ನಿಸಾನ್ನ ಪಕ್ಷದಿಂದಲಿ ಜನಿಸಿತು ನೋಡ ।
ಶ್ವಾಸದಿಂದಲಿ ವಾಯು ಪ್ರೀತಿಯಲ್ಲಿ ಲಜ್ಜಾ ।
ಹಾಸದಿಂದಲಿ ಮಾಯ ಲೋಭ ಔಷ್ಠ್ರದಿಂದ ।
ಲೇಸು ಜಿಹ್ವೆಯಿಂದ ಉದಕೇಶ ಉದ್ಭವ ।
ಆ ಸಮಸ್ತ ಮಧರ ರಸ ಜಿಹ್ವೇಂದ್ರಿಯದಲ್ಲಿ ।
ಮಿಾಶೆಯಿಂದಲಿ ಮಿಂಚು ಮಕುಚದಿಂದಲಿ ಮೇಘ ।
ಔಷಧಿ ಮಹಿರೂಹ ವನಸ್ಪತ್ಯಾದಿ ಸರ್ವ ।
ಕೇಶದಿಂದಲಿ ಜನಿಸಿದವು ಕ್ರಮವಾಗಿ ।
ವಾಸಲ ವೈಶ್ವಾನರ ವಾಕ್ಯದಿಂದಲಿ ಜನನ ।
ಈಶ ವಂದಿತ ಪಾದ ವಿಜಯ ವಿಠಲರೇಯ ।
ವಾಸವಾಗಿಪ್ಪರು ಈ ಪರಿ ಧ್ಯಾನಿಸೆ । ॥೧೭॥

### ಅಟ್ಟತಾಳ

ಮನದಿಂದ ಬ್ರಹ್ಮ ಚಂದ್ರ ಮಿಕ್ಕಾದವರೈಯ್ಯ ।
ಅನಿಲ ಸ್ವಯಂಭುವ ಬುದ್ಧಿಯಿಂದ ।
ಲಿ ನಾಡಿ ಗಣದಿಂದ ನದಿಗಳು ಅಸ್ಥಿಯಿಂದಲಿ ಅದ್ರಿ ।
ಗುಣತ್ರಯಂಗಳ ವ್ಯಾಪಾರದಿಂದಲಿ ತಾರ ।
ಗಣ ಪುಟ್ಟಿತು ನೋಡಾ ದಂತಗಳಿಂದ ವ ।
ಚನದಿಂದ ಗಾಯತ್ರ್ಯಾದಿ ಛಂದಸ್ಸು ಕೇಳಿ ।
ಘನಗಿರಿ ವಿಜ್ಞಾನ ಶಕ್ತಿನಾಮಕ ಬ್ರಹ್ಮ ।
ಜನನ ವಾದನು ಅಂತಃಕರುಣದಿಂದಲಿ ಅಂದು ।
ಮನುಜ ಅಥರ್ವ ಪೃಷ್ಠದಿಂದ ಉದುಭವ ।
ಗುಣಿಸು ತ್ವಕ್ಕಿನಿಂದ ಪ್ರಾಣ ಇಂದ್ರಿಯದಿಂದ ।
ಜನನವಾಯಿತು ಲೋಮ ಸ್ಪರಿಶಬಿಡದೆ ತಿಳಿ ।
ತನುರೂಹ ಕೂಪದಿಂದಲಿ ಪ್ರಳಯೋದಕ ।
ಎಣಿಸು ವೈದಿಕ ಲೌಕಿಕ ವ್ಯವಹಾರ ।
ಜನಿಸಿದವು ನೋಡಾ ದೌಂಷ್ಟ್ರದ್ವಯದಿಂದ ।
ವನಜನಾಭನ ರೂಪ ವಿರಾಟ ಮೂರ್ತಿಯ ।
ತನುವಿನಿಂದಲಿ ಯಾವತ್ತು ಪುಟ್ಟಿತು ।
ಮನುಜಾ ಎಣಿಕೆ ಮಾಡುವದಕ್ಕೆ ।
ಮನಕೆ ಅಗೋಚರ ।
ಗಣಿತ ಮಾಡುವದೇನೋ ಸರ್ವಾಂಗದಿಂದಲಿ ।
ಜನನ ವಾದರು ಕೇಳಿ ಸರಿ ಸರಿ ಬಂದಂತೆ ।
ಬಿನಗು ಜೀವರಿಗೆ ಈ ಪರಿ ಶಕ್ತಿಯುಂಟೆ ।
ಗುಣನಿಧಿ ವಿಜಯ ವಿಠಲರೇಯನ ವಿಗ್ರಹ ।
ಅನುದಿನ ಧ್ಯಾನವ ಗೈಯ್ಯೋ ನಿರ್ಮಲನಾಗಿ ॥೧೪॥

### ಆದಿತಾಳೆ

ಆಪಾದ ಮೌಳಿ ಪರಿಯಂತ ವಿರಾಟ ದ್ವಿ ।
ರೂಪವನ್ನೆ ಧ್ಯಾನಿಸು ಎರಡೊಂದು ಬಗೆಯಲ್ಲಿ ।
ಅಪಾರ ಜಡಜೀವ ಯಿದರೊಳಗಿಪ್ಪವೆಂದು ।
ತಾಪಸ ಜನರಿಂದ ತಿಳಿದು ಅನಂತ ಜನುಮದ ।
ಪಾಪೌಘ ಪೋಗಗಳೆದು ಪರಮ ಶುದ್ಧಾತ್ಮಕನಾಗಿ ।
ತಾಪತ್ರಯ ತಂದೀವ ಅಹಂಭಾವವೆ ಬಿಟ್ಟು ।
ಶ್ರೀ ಪತಿ ಶ್ರದ್ಧಪತಿ ಗತಿಯೆಂದು ನಂಬಿ ಜ್ಞಾನ ।
ದೀಪ ಸಂಪಾದಿಸಿ ನಾನಾ ಪ್ರಕಾರದಿಂದ ।
ರೂಪ ಕರ್ಮಕಾಲ ಗುಣಕರ್ಮ ದೇಹಾದಿಯ ।
ವ್ಯಾಪಾರವೆಲ್ಲ ಹರಿಯ ಆಧೀನವೆಂದು ಚಿಂತಿಸಿ ।
ಆಪದ್ಧರ್ಮರಕ್ಷಕ ಹರಿ ಸ್ವಾತಂತ್ರ ಪುರುಷ ।
ಕೋಪ ದಾನವ ಭಂಗ ಸರ್ವದಾನಂದ ವಿಗ್ರಹ ।
ಗೋಪಾಲ ಗುಣಪೂರ್ಣ ಪೂರ್ಣ ಜಗನ್ಮಂಗಳ ಮಂಗಳ ಪ್ರ ।
ತಾಪ ಪ್ರಾಕೃತ ರಹಿತ ನಿರ್ದೋಷ ಮುಖ್ಯದೈವ ।
ಈ ಪರಿಯಿಂದಲಿ ಪ್ರಾಣಾಧಿಷ್ಠಾನದಲಿ ।
ವ್ಯಾಪುತನಾಗಿದ್ದ ಅನಾದಿ ಪುರುಷನ್ನ ।
ರೂಪತಿಶಯಗಳನೆಲ್ಲ ನೆನದು ನೆನದು ಜಂಬು
ದ್ವೀಪ ದಕ್ಷಿಣ ಭಾಗದಲ್ಲಿ ಸಾಧನ ಮಾಡು ।
ಆಪತ್ತು ಎತ್ತವಯ್ಯ ಯಿಂತು ಯೇಕಾಂತ ಧ್ಯಾನ ।
ಪೋಪಗೊಡದೆ ಮಹದೃಢತರದಲ್ಲಿ ಮಾಡೆ ।
ಕೂಪಾಂಧ ವೆಂದೆಂಬೊ ಸಂಸಾರ ವುತ್ತರಿಪ ।
ದ್ರೌಪತಿ ಪತಿ ಪ್ರೀಯ ವಿಜಯ ವಿಠಲರೇಯನ
ಆಪಾದ ಸೇರುವದಕ್ಕೆಯಿದೆ ಯಿದೆ ವುಪಾಯ । ॥೧೯॥

### ಜತೆ

ಪ್ರತಿ ಪ್ರತಿ ಪ್ರತೀಕಾದಲ್ಲಿ ಅಪ್ರತಿ ಹತನಾದ
ಪತಿ ವಿಜಯ ವಿಠಲ ವಿರಾಟ ಮೂರ್ತಿಯ ಧ್ಯಾನಿಸು ॥೨೦॥

## ಮೇರು ಪರ್ವತದಿಂದ ಭೂಭಾಗ ವಿವರಣ

### ೪೮) ಸುಳಾದಿ

ರಾಗ: ಭೈರವಿ ಧ್ರುವ ತಾಳ

ಮೇರು ಪರ್ವತ ಲಕ್ಷಯೋಜನೋಚ್ಛಿತ್ರ ಹದಿ ।
ನಾರು ಸಾವಿರ ಯೋಜವ ಭೂಮುಗ್ನಾ ।
ಚಾರುವಾಗಿಪ್ಪದು ಕನಕಮಯದಿಂದ ।
ಸಾರಿದ್ಧೆ ವುಳಿದ ಲೆಖ್ಖ ವೂರ್ಧ್ವಭಾಗ ವಿ ।
ಸ್ತಾರವಾಗಿದೆ ನಾಲ್ಕು ಯೆಂಭತ್ತು ಸಹಸ್ರ ವಿ ।
ಚಾರ ಯೋಜನವಲ್ಲಿ ಸುರ ಮಂದಿರ ।
ಈರೆರಡು ನಾಲ್ಕು ಶೃಂಗದಿಂದೊಪ್ಪುವದು ಶೃಂ ।
ಗಾರ ವನಗಳುಂಟು ವಾಪಿಕೂಪ ।
ವಾರಿಜ ಸಂಭವನ ಸದನ ವೀರೈದು ಸಾ ।
ವೀರ ಯೋಜನದಗಲ ಮಧ್ಯ ಗಂಗೆ ।
ಹಾರಿ ಯೊಜನ ಪರಿಮಿತ ಧುಮುಕಿ ವಿ ।
ಹಾರ ದಿಂದಲಿ ಚತುರ ಭಾಗವಾಗಿ ।
ವಾರಿಧಿ ಕೂಡಿಹಳು ಪೂರ್ವದಿಕ್ಕಿನ ಲ್ಲಿ ।
ಮೂರೊಂದು ನಾಮ ಭೇದ ನಿರ್ಮಳವಾಗಿ ।
ಐರಾವತಗನುನ ದಿಕ್ಪಾಲಕರ ಆ ।
ಗಾರ ಸಹಸ್ರ ಯೆರಡುವರೆ ಯೋಜನ ।
ಸೂರ್ಯನ ರಥದ ಕೀಲು ಕವಿಸಿದೆ ಈ ಗಿರಿಗೆ ।
ವಾರ ವಾರಕ್ಕೆ ಸುತ್ತ ತಿರುಗುವದೊ ।
ಆರರೆಡಾದಿತ್ಯ ಜನ ಮಾಸ ಮಾಸಕ್ಕೆ ವ್ಯಾ ।
ಪಾರ ಮಾಡುವರು ಕರ್ಮ ಸಾಕ್ಷಿ ।
ನಾರಾಯಣ ಗುಣಪೂರ್ಣ ಮೆರುವಿಗೆ ತಾನೆ ಆ ।

ಧಾರನಾಗಿ ಯಿಪ್ಪದು ಶಿಂಶುಮಾರ ।
ಮೂರುತಿಯಾಗಿ ಮುದದಿ ಪೊಳೆವ ಯೋಜನ ಮುವ್ವ ।
ತ್ತಾರು ಲಕ್ಷ ಪರಿಮಿತ ನಾನಾಮಹಿಮ ।
ಸೇರಿ ಕೊಂಡಿಪ್ಪ ತನ ವಾಲಾಗ್ರದಲ್ಲಿ ಮಂತ್ರ ।
ಈರಾರು ವರಣ ಜಪಿಸಿದ ಬಾಲಕ ।
ಆರಿಗೆ ವಶವಲ್ಲ ಆ ಪದವಿ ಮಗುವಿಗೆ ।
ನಾರದ ಮುನಿಯಿಂದ ಪ್ರಾಪ್ತವೆನ್ನಿ ।
ಈ ರೀತಿಯನ್ನೆ ಗ್ರಹಿಸು ಯಿತ್ತ ಲಾಲಿಸು ।
ಮೇರು ಶೈಲದ ಅಧೋಭಾಗದಲ್ಲಿ
ಪೌರಸ್ತ ಮಿಗಿಲಾದ ಚತುರ ಕಕುಭದಲ್ಲಿ ।
ಈರೈದು ದಳ ಕೇಸರ ಪರ್ವತ ।
ಬ್ಯಾರೆ ಬ್ಯಾರೆ ವೊಂದೊಂದು ನಾಮದಿಂತೊಪ್ಪುತಿದೆ ।
ಕುರಂಗ ಕುರವ ವೈಕಂಕ ಕುಸುಂಭಕಾದ್ರಿ ।
ಮೂರುಕೂಟ ಸಮೇತ ಯಿಂದ್ರದಿಶಿಗೆ ।
ಸಾರು ಪತಂಗ ಶಿಖರ ಉತ್ಸಂಗ ನಿಷೇಧಮತ್ತೆ !
ತೋರುವ ಶಿತ ವಾಸುಕಿ ದಕ್ಷಿಣ ದಿಶಿಗೆ ।
ವಾರೀಶನ ಕಾಷ್ಟಕ್ಕೆ ಕಪಿಲ ಶಂಖ ವೈಡೂರ್ಯ ।
ಜಾರುಧಿ ಹಂಸವೆಂಬೊ ಪರ್ವತಾವೈದು ।
ಓರಂತೆ ಗುಣಿಸು ವೃಷಭ ನಾಗ ಕಾಲಾಂಜನ ।
ನಾರದಾಖ್ಯಗಿರಿ ಚಂದ್ರನ ಕಡಿಗೆ ।
ದಾರಢ್ಯಮಾಡು ಕೇಸರ ಪರ್ವತಗಳನಿತು ।
ವಾರಿತಿಕೇಳು ಮುಂದೆ ಮಂದರಾದ್ರಿಮೇರು ಮಂ ।
ದಾರ ಪಾರ್ಶ್ವ ಕುಮುದ ನಾಮದಿಂದ ।
ಮೂರೊಂದು ಕೀಲ ಗೋತುರ ಸಿದ್ಧವೆನ್ನಿ ।
ಬ್ಯಾರೆ ಯೇಕಕ್ಕೆ ಲೆಖ್ಖ ಹತ್ತು ಸಾ ।
ವಿರ ಯೋಜನ ವುನ್ನತ ನೋಡಿರೊ ।

ಕಾರಣವಾಗಿವೆ ಇಷ್ಟುಯೋಜನ ಸುತ್ತ ।
ಭಾರಣಿಯಾಗಿರ್ದ ಜಂಬು ಚೂತ ಕದಂಬ ।
ಚಾರು ನ್ಯಗ್ರೋಧಯಿತ್ತ ಗಿರಿ ಗಿರಿಯಲ್ಲಿ ।
ಭೂರುಹ ವುಂಟಾಗಿವೆ ವೊಂದೊಂದು ಹನ್ನೊಂದು ।
ನೂರು ಗಾವುದ ವುದ್ದ ಶಾಖೆಯಿಂದ ।
ಕ್ಷೀರ ಮಧು ದಿವ್ಯ ಘೃತ ಶುದ್ಧೋದಕ ಹೃದ ।
ನೂರು ಗಾವುದ ವೊಂದೊಂದು ಕಾಣೋ ।
ಸರೋವರವು ನಾಲ್ಕು ಅರುಣೋದೆಯು ಭದ್ರೆ ।
ಚಾರು ಸೀತೋದೆ ಮಾನಸವೆಂದು ।
ನೀರೆ ಹೊಳೆವ ಸನಂದನ ಚಿತ್ರರಥ ವಿಭ್ರಾಜಿಕ ।
ಮೀರಿದ ಸರ್ವತೋಭದ್ರ ಪೆಸರು ।
ಚಾರು ಸುರರಿಂದೊಪ್ಪುವ ಚೂತಾದಿ ವೃಕ್ಷ ನಿತ್ಯ ।
ಕೋರಿದ ಜನಕೆ ಮನೋಭಿಷ್ಟಿ ಸಲಿಸಿ ।
ದಾರಾದಿ ವೊದಲಾದ ಬಂಧು ಬಳಗ ಸರಿ ।
ವಾರದೊಡನೆ ಸರ್ವ ದೇವಾದ್ಯರು ।
ತಾರತಮ್ಯದಿಂದ ಕ್ರೀಡಿಸುವರು ಭಂ ।
ಗಾರ ಭೂಷಣ ನಾನಾ ಭೋಗದಿಂದ ।
ವೈರತ್ವವನ್ನು ಮರೆದು ಖಗ ಮೃಗ ಜೀವಿಗಳು ।
ಘೋರನೆ ಆಡುತಿವಕೊ ತತ್ಕಾಲಕ್ಕೆ ।
ತೇರು ಶೃಂಗರಿಸಿದಂತೆ ವನಗಳ ಸಂಭ್ರಮ ।
ಆರಿಗಾದರು ಸರಿಯೆ ತುತಿಸ ಸಲ್ಲ ।
ಮ್ಯಾರೆ ದಪ್ಪದೆ ನಾಲ್ಕು ಕೀಲ ಪರ್ವತದಂತೀ ವಿ ।
ಚಾರ ವೆಣಿಸೆ ಮುಂದೆ ಪರಿಸ್ತೀರ್ಣದ ।
ಧಾರುಣಿ ಧರಗಳು ಎರಡೆರಡು ಯಿವೆ ಯಿವು ।
ಈರಾರು ಸಾವಿರ ಯೋಜನ ಅಗಲ ವುದ್ದ ।
ಮೂರು ಮೂರು ವೊಂಭತ್ತು ಆಯುತ ಯೋಜನದಿಂದ ।

ಗಿರಿಗಳು ಯಿದರಲ್ಲಿ ದಕ್ಷಣಭಾಗಕೆ ನಿಷಧ ।
ಸರಿ ಹೇಮಕೂಟ ಹಿಮಾಲಯ ಪೆಸರು ಉ ।
ತ್ತರಕೆ ನೀಲ ಶ್ವೇತ ಶೃಂಗ ಮಾಲ್ಯವಂತ ವೆಂದು ।
ಕರಸಿ ಕೊಳುತಿಪ್ಪವು ವೊಂದೊಂದು ಯೋಜನ ।
ಎರಡು ಸಾವಿರ ವೃದ್ಧ ವಿಸ್ತೀರ್ಣ ಅಷ್ಟೆ ನಿಂ ।
ದಿರಂದೆ ನೀಳ ಲಕ್ಷ ತೊಂಬತ್ತಾರು ಸಾ ।
ವಿರ ಮತ್ತೇ ವೊಂದಕ್ಕೆ ಹತ್ತು ಕಡಿಮೆ ಲೆಖ್ಖ ।
ಚರಿಯ ವಾಗಿದೆ ಪೂರ್ವ ಅಪರ ಭಾಗಕೆ ಆರು ।
ಶರಧಿ ಪರಿಯಂತ ಸಮ್ಮಂಧವಾಗಿವೆ ।
ಭರತ ಖಂಡಗಳಲ್ಲಿ ಪಾಪ ಪುಣ್ಯಗಳಿಂದ ।
ನರರಿಗೆ ಸಾಧನ ಸ್ವರ್ಗಾಪವರ್ಗ ಬಲು ।
ನರಕಕ್ಕೆ ಆವಾವ ಸುಖ ದುಃಖಾನುಭವಕೆ ।
ಸುರರಾದಿಗಳು ಪುಟ್ಟೆ ಕರ್ಮ ತೀರುವದಕ್ಕೆ ।
ಹರಿ ಅವತರಿಸಿ ನಾನಾಲೀಲೆ ತೋರುವ ।
ಭರತ ಖಂಡ ಕರ್ಮ ಭೂಮಿ ಕಾಣೊಯಿಲ್ಲಿ ।
ಸುರನದಿ ಮಿಗಿಲಾದ ನದಿ ಪುಣ್ಯಕ್ಷೇತ್ರಗಳು ।
ವರತೀರ್ಥರಾಜ ವೆಂದೆನಿಸುವ ಪ್ರಯಾಗ ।
ಪರಿ ಪರಿ ವ್ರತದಾನ ಆಚಾರ ವಿಚ್ಯಾರ ।
ಕರಣ ಶುದ್ಧಿಗೆಯಿಲ್ಲಿ ಸಂಸಾರದಲಿ ಬೇಕು ।
ಹರಿಯ ಕಾಂಬುವದಕ್ಕೆ ಯಿದೆ ಮಹ ವುತ್ತಮ ।
ಧರಣಿ ಕಾಣುವರು ಜ್ಞಾನ ಭಕ್ತಿ ವೈರಾಗ್ಯಗಳು ।
ಗುರುದ್ವಾರದಿಂವಲಿ ದೊರಕುವವು ನಿತ್ಯ ।
ತರುವಾಯ ಕೋಲ ಕಮಠ ಮತ್ಸ್ಯ ಹಯಗ್ರೀವ ।
ನರಸಿಂಹ ರಾಮ ನರನಾರಾಯಣ ಪ್ರದ್ಯುಮ್ನ ।
ವರ ಮೂರ್ತಿಗಳಕ್ಕು ಧರಣಿ ಅರ್ಯಮ ಮನು ।
ಅರಸು ಭಧ್ರಾಶ್ವ ಪ್ರಲ್ಹಾದಾಂಜನೇಯ ।

ಸುರಮುನಿ ನಾರದ ರತಿದೇವಿಯಿವರೆಲ್ಲ ।
ಪರಮ ಭಕುತಿಯಿಂದ ವೊಂದೊಂದು ಖಂಡದಲಿ ।
ಹರಿಯ ಪೂಜಿಸುವರು ಪಂಚಬೇಧದಿಂದ ।
ಎರಡೇಳು ಖಂಡಾತುಮಕ ಜಂಬುದ್ವೀಪಕ್ಕೆ ।
ಪರಿವೇಷ್ಟವಾಗಿದೆ ಲಕ್ಷಯೋಜನ ಲವಣ ।
ಶರಧಿಯೆನಿಸುತಿದೆ ಯಿದರ ಮಧ್ಯದಲಿನ್ನು ।
ಪುರಗಳೆಂಟು ಉಪದ್ವೀಪ ನಾಮವೆಂದು ।
ಕರೆಸಿ ಸ್ವರ್ಣಪ್ರಸ್ಥ ಚಂದ್ರ ಶುಕಾವರ್ತನ ।
ಉರಗ ಸೇರಿದರಮಣಕ ಮುದಹರಣ ಆಮ್ಯಾಲೆ ।
ವಿರಚಿಸುವ ಪಾಂಚಜನ್ಯ ಸಿಂಹಲ ಮುಖ ದಶ ।
ಶಿರನು ಆಳಿದ ನಗರ ಲಂಕಾದ್ವೀಪವು ಸತ್ಯ ।
ತುರಗ ವರಸಲಿ ಪೋಗಿ ಸಗರನ ಮಕ್ಕಳು ।
ಅರವತ್ತು ಸಾವಿರ ಜನ ವೊಂದಾಗಿ ಅಂದು ।
ಶರನಿಧಿ ಖನನವ ಮಾಡಿ ಹಾಕಿದ ಮೃತ್ತಿಕೆ ।
ಯಿರತಕ್ಕವಾದವು ಉಪದ್ವೀಪಗಳೆಂದು ।
ಕರುಣಿಗಳು ಕೇಳಿ ಜಂಬೂದ್ವೀಪದ ಮಹಿಮೆ ।
ಸರುವ ಬಗೆಯಿಂದ ವಿಸ್ತರಿಸ ಬೇಕಾದರೆ ।
ಮರಿಯಾದೆ ಕಾಣೆನೋ ಪೇಳಿದರೆ ವುಂಟು ।
ಉರಗಶಾಯಿ ನಮ್ಮ ವಿಜಯ ವಿಠಲನ್ನ ।
ಚರಣಾಬ್ಜ ಬಲಗೊಂಡ ಪ್ಲಕ್ಷ ವರ್ಣಿಸಬೇಕು । ।೩॥

ಝುಂಪಿತಾಳ

ದ್ವಿತಿಯ ದ್ವೀಪವು ನೋಡು ಪ್ಲಕ್ಷವೆಂಬೋನಾಮು ।
ಅತಿಶಯವಾಗಿ ಜಂಬುದ್ವೀಪದ ದ್ವಿಗುಣ ।
ಕ್ಷಿತಿರುಹಯಿದೆ ಪೆಸರಿನಿಂದ ವೊಪ್ಪುತಿದೆ ।

ಶತಯೇಕದಶ ಯೋಜನ ವುನ್ನತ ।
ಮಿತಿಯಾಗಿವೆ ವರ್ಷ ಪರ್ವತ ನದಿಗಳು ।
ಸಪುತ ಸಂಖ್ಯ ವೊಂದೊಂದು ಪ್ರಥುಕುನಾಮ ।
ತುತಿಸುವದು ಶಿವ ಈಶ ಸುಭದ್ರ ಶಂತನು ಕ್ಷಮ ಅ ।
ಮೃತ ಅಭಯ ವೆಂತೆಂಬೊ ಯೇಳು ಖಂಡ ।
ಹಿತವಹದು ಮಹಿ (ಣಿ) ಕೂಟ ಪವಿಕೂಟ ಯಿಂದ್ರಶಯನ ।
ಜತೆ ಜೋತಿ ಭಾನು ಧೂಮ್ರವರ್ಣ ಪ್ರ ।
ಕಾಶಿತ ಹಿರಣ್ಯಗ್ರೀವ ಮೇಘಮಾಲಾ ಪ ।
ರ್ವತಗಳು ಅರುಣ ವಿಮಲ ಅಂಗಿರಸ ಸುಶೋ ।
ಭಿತ ಸಾವಿತ್ರಿನಾಮಕ ಸುಪ್ರಭಾ ಋತುಂಭರ ।
ಅತುಳ ಸತ್ಯಂಭರ ಈ ಪರಿ ಸಪ್ತಸರಿತುಗಳು ।
ತಿಳಿವುದು ಈ ದ್ವೀಪದಲ್ಲಿಯಿದ್ದ ।
ಕ್ಷಿತಿ ಪಾಲಕರು ವರ್ಷನಾಮಕರು ಯೇಳು ಜನ ।
ಸತತ ಸೂರ್ಯಾಂತರ್ಗತ ನಾರಾಯಣ ಮೂ ।
ರುತಿಯ ಅರ್ಚಿಸುವರು ತಮ ತಮ್ಮ ಸ್ಥಳದಲ್ಲಿ ।
ರತಿ ಪತಿ ಪಿತ ಸಿರಿ ವಿಜಯ ವಿಠಲರೇಯನ ಸ ।
ದ್ಗತಿಯ ಬೇಡುವರು ತ್ರಿವಿಧ ಭಕುತಿಯಿಂದ ॥೪॥

### ತ್ರಿವಿಡಿ ತಾಳ

ಇದಕೆ ಇಕ್ಷುಸಾಗರ ವಲಯಾಕಾರದಲಿ ಸು ।
ತ್ತಿದೆ ಯೋಜನ ಲಕ್ಷ ಎರಡು ಮುಂದೆ ।
ಇದನೆ ಪೋಗಾಗಳಿದು ಶಾಲ್ಮಲೀ ದ್ವೀಪ ಚಿ ।
ತ್ತದಲಿ ಗ್ರಹಿಸುವದು ಯೋಜನ ನಾಲ್ಕು ।
ಶದ (ದಶ) ಶತ ಪತ್ತು ಯೋಜನ ವಕ್ಕಣಿಸುವದು ।
ಯಿದೆ ದ್ವೀಪದ ಪೆಸರುಳ್ಳ ವೃಕ್ಷ ಪರಿಮಳದಿಂದ ।
ಮುದದಿ ರಂಜಿಸುತಿದೆ ಯೆನಂಜೆನಯ್ಯಾ ಮ ।

ತ್ರಿದಲೊಳು ಯೇಳು ಖಂಡಗಳು ಅದ್ರಿ ।
ನದಿಗಳು ವೊಂದೊಂದು ಅಭಿದಾನದಿಂದಲಿ ।
ಸದಮಲತನದಿಂದ ವೊಪ್ಪುತಿಪಕೊ ।
ಒದಗಿ ಉಚ್ಚರಿಸು ಸುರೋಚನ ಶಶಿನಸ್ಯ ಬ್ರಹ್ಮಣ್ಯಮಾನೆ ।
ಬದಿಯಲ್ಲಿ ರಮಣಕ ದೇವ ಬರ್ಹಃ ।
ಅಥಟ ಪಾರಿಭದ್ರ ಅಭಿಬರ್ಹ (ಪ್ಯಮಾನ್) ಪ್ಯರದಾನು ।
ವಿದಿತವಾಗಿವೆ ಯಿವೆ ಯೇಳು ಖಂಡಗಳು ।
ಯಿದರ ಶೀಮಾಶೈಲ ಸುರ ಶತಶೃಂಗ ವಾ ।
ಮದೇವ ಕುಂದಕ ಮುಕುಂದ ದಿವ್ಯ ।
ಉದಿತ ಪುಷ್ಪವಂತ ಸಹಸ್ರತಿ ಸಪ್ತಾದ್ರಿ ।
ನದಿ ಶಿನಿವಾಲಿ ಸರಸ್ವತಿ ಕದ್ರುಜೆ ।
ಚದುರೆ ರಂಜಿನಿ ನಂದ ರಾಕಾ ವೆಂಬೊ ಸಪ್ತ ।
ಮೊದಲು ಅನುಮತಿ ಕೂಡಿಸಿ ಯೆಣಿಕೆ ಮಾಡು ।
ವದು ಸನ್ನಿಧಿಯಾಗಿ ಖಂಡಾಖ್ಯ ನೃಪರುಯಿಲ್ಲಿ ।
ವಿಧು ದೇವನೊಳಗಿದ್ದ ಮೂರ್ತಿಯ ಭಜಿಸಿ ಸಂ ।
ಪದವಿಗೆ ಸಾಧನವ ಗೈಯ್ಯುವರೋ ।
ವಿಧಿನಿಷೇಧ ಜ್ಞಾನದಿಂದ ತಮ ತಮ್ಮಾ ।
ಸದನದಲ್ಲಿ ಪ್ರತ್ತ್ಯೇಕ ದೈವದ ಭಜನೆ ।
ಯಿದಕೆ ಆವರ್ಕು ನಾಲ್ಕುಲಕ್ಷ ಯೋಜನ ।
ಉದಧಿ ಯಿಪ್ಪುದು ಕಾಣೊ ಸುರಸಾಮುದಿ ।
ತ್ರಿದಶ ವಂದಿತ ನಮ್ಮ ವಿಜಯ ವಿಠಲರೇಯ ।
ಹೃದಯದಲ್ಲಿ ನಿಲಿಸಿ ಸಾಧಿಸು ಸತ್ಕಥೆ ।೩॥

## ಧ್ರುವತಾಳ

ಕುಶಸ್ತಂಭ ವೊಂದುಂಟು ಕನಕ ಪ್ರಕಾಶ ಯೇಕಾ ।
ದಶ ಶತಯೋಜನ ವುನ್ನತವೋ ।

ವಸತಿಯಾಗಿದೆ ದ್ವೀಪ ವಿದರಂತೆ ಖ್ಯಾತಿಯಾಗಿ ।
ಪೆಸರಿನಿಂದಲಿ ಯೆಂಟು ಲಕ್ಷ ಯೋಜನ ।
ಪುಶಿಯೆಲ್ಲ ಯಿದಕೆ ಯೇಳು ವರ್ಷಗಳುಂಟು ಕೇಳಿ ।
ವಸುಧಾನ ಧೃಪ ರುಚಿ ನಾಭಿಗುಪ್ತ ।
ಮಿಸಣಿಪ ಸತ್ಯವೃತ ವಿಪ್ರ ವಾಮದೇವ ।
ಹಸನಾಗಿ ಚಕ್ರಶೃಂಗ ಕಪಿಲ ಭಿನ್ನತ್ರಿ ।
ದಶ ನಿಕರ ಊರ್ಧ್ವರೋಮ ದ್ರವಿಣ ನಾಮಾ ।
ಋಷಿ ಪರ್ವತ ಮತ್ತೆ ಕುಲ್ಲ್ಯ ಮಧುಕುಲ್ಲ್ಯ ।
ಎಸೆವ ಶೃತ ವಿಂಧ್ಯಾ ಮಿತ್ರವಿಂದ್ಯ ವೇದ ।
ಋಸುರ ಘೃತಾಸುತ್ತಾ ಮಂತ್ರಮಾಲಾ ಸಪ್ತತರಂಗಿಣಿ ।
ಬೆಸಸುವೆಯಿಲ್ಲಿ ಸಪ್ತರಾಯರನ್ನು ।
ಕುಶಲವಂತರು ತಾವು ಖಂಡಾಭಿಧಾನದಿಂದ ।
ದಶದಿಕ್ಕಿನೊಳು ಮಹಭಾಗರಾಗೀ ।
ಎಸೆಸಿನಿಂದಲಿ ಮೆರವುತ್ತಾವಾವ ಬಗೆಯಿಂದ ।
ವಸು ಜೇಷ್ಟಾಂತರ್ಯಾಮಿ ಭಾರ್ಗವನ್ನ ।
ಬೆಸನೆ ಪೂಜಿಸುವರು ತಮ ತಮ ನಗರದಲ್ಲಿ ।
ಕುಸುಮಾದಿ ದ್ರವ್ಯದಿಂದ ಸಂತೋಷದಿ ।
ಅಸಮ ಪ್ರತಾಪ ನಮ್ಮ ವಿಜಯ ವಿಠಲರೇಯ ।
ಶಶಿವರ್ಣದಂತೆ ಪೊಳೆವ ಕೊಂಡಾಡಿದವರಿಗೆ ॥೬॥

ಝಂಪಿತಾಳ

ಒಂದು ನಾಲ್ಕನೇ ದ್ವೀಪ ಕ್ರೌಂಚನಾಮದಿಂದ ।
ಅಂದವಾಗಿದೆ ಹದಿನಾರು ಲಕ್ಷ ।
ಯೆಂದೆಂಬ ಯೋಜನ ಯಿಲ್ಲಿಯಿದೆ ಪೆಸರಿನಲಿ ।
ಒಂದು ಪರ್ವತವುಂಟು ಖಂಡಾದ್ರಿನದಿಗಳು ।
ಒಂದೊಂದು ಗುಣದಲ್ಲಿ ಸಪ್ತಪ್ರಭೇದ ಗ ।
ಳಿಂದ ಲೊಪ್ಪುತಲಿವೆ ಅಗಮುಸಿದ್ಧ ।

ನಿಂದಿರದೆ ಅಮೋಘ ಮಧುರುಹ ಮೇಧ ಪೃಷ್ಟ ।
ಚಂದವಾದ ಸುಧಾಮ ಋಷಿ ಮೋಹಿತಾರ್ಯಕ ।
ಮುಂದೆ ವನಸ್ಪತಿಯೆನ್ನಿ ಸಪ್ತ ಖಂಡ ।
ಸಂದಿದೆ ಶುಕ್ಲಗಿರಿ ವರ್ಧಮಾನ ।
ಒಂದೊಂದು ಉಪಬರ್ಹಣ ಉಪಭಾಜವು ।
ನಂದ ನಂದನ ಸರ್ವತೋಭದ್ರ ಪರ್ವತವು ।
ವೊಂದಿದೆ ಅಭಯ ಅಮೃತೋದಿ ಆರ್ಯಕು ।
ಮುಂದಗಮನ ತೀರ್ಥವತಿ ರೂಪ ನತಿಶುಚ ।
ವಂದಿಪೆನು ಶುಕ್ಲಾವತಿ ಸಪ್ತನದಿಯು ।
ಕುಂದದಲೆ ಈ ದ್ವೀಪದಲಿ ಮಹರಾಯರು ।
ಸುಂದರ ಗಾತುರದಿಂದ ಬಾಳುತ್ತಿಹರು ।
ಹಿಂದೆ ಪೇಳುಯೇಳು ಖಂಡದ ಪೆಸರುಕಾಣೋ ।
ಸಂದೇಹವಿಲ್ಲ ಸಮಸ್ತ ನೃಪರು ।
ಮಂದಾಕಿನೀ ಪತಿಯ ವೊಳಗಿದ್ದ ಮತ್ಸ್ಯನ್ನ ।
ವಂದಿಪರು ತಮ ತಮ್ಮ ಸಭೆಗಳಲ್ಲಿ ।
ಇಂದು ವರ್ನದಂತೆ ಕ್ರೌಂಚ ದ್ವೀಪದ ಸುತ್ತ ।
ಸಿಂಧು ಯಿಪ್ಪದು ದಧಿನಾಮದಲ್ಲಿ ।
ಒಂದು ಹದಿನೈದು ಲಕ್ಷಯೋಜನದಗಲ ।
ಸಾಂದ್ರವಾಗಿ ಮನಕೆ ವೊಪ್ಪುತಿದಕೊ ।
ಇಂದಿರೇಶ ಹರಿ ವಿಜಯ ವಿಠಲರೇಯನ ।
ಸಂದರುಶನ ಮಾಳ್ಪ ಜನರಿಂದ ಪೂಜೆಗೊಂಬ

### ರೂಪಕತಾಳ

ಅನುಶಾಕ ದ್ವೀಪ ಮೂವತ್ತೆರಡು ಲಕ್ಷಯೋ ।
ಜನಯಿದೆ ನಾಮದಲಿ ಶಾಕವೃಕ್ಷವಕ್ಕು ।
ಎಣಿಸು ಯೇಳುಖಂಡ ಪರ್ವತನದಿಗಳು ।

ನೆನೆಪು ರಾಜೀವ ಮನೋಜವನೆ ಪವಮಾನ ।
ಘನ ವಿಚಿತ್ರರೂಪ ಬಹುರೂಪ ವಿಶ್ವಧಾರ ।
ಗಣನೆಯಿಲ್ಲಿಗೆ ಸರಿಮುಂದೆ ಅದ್ರಿ ।
ಗುಣಿಸು ಈಶಾನ ವರಶೃಂಗ ಬಲಭದ್ರ ।
ವೆಸಿಪ ಶತಕೇಶರ ಸಹಸ್ರೋತ ದೇವ ಪಾ ।
ಲಣ ಮಹಾಮಹ ಸಪ್ತಂಬುಧರ ಸಂಖ್ಯೆಯು ।
ಯಿನಿತರ ಮ್ಯಾಲೆ ಅಮೋಘ ಆಯುರ್ಧಾನದೀ ।
ವನ ಪೂರ್ಣ ಉಭಯ ಸ್ಪೃಷ್ಟಾ ಪರಾಜಿತೆ ಪಂಚ ।
ಜನಾ ಸಹಸ್ರಶ್ರೋತಿ ನಿಜಧೃತಿ ಸಪ್ತಸರಿತಗಳು ।
ಜನಪತಿಗಳು ಯಿಲ್ಲಿ ವರ್ಷನಾಮಗಳಿಂದ ।
ಮಿನಗುತಿಪ್ಪರು ನೋಡಿ ಯೇಳು ಜನರು ।
ಸನುಮತವಿಲ್ಲಿ ಪ್ರಾಣಾಂತರ್ಗತ ದೇವನ ।
ಕ್ಷಣಕ್ಷಣಕೆ ಪೂಜಿಪರು ಬ್ಯಾರೆ ಬ್ಯಾರೆ ।
ವಿನಯದಲಿ ಯಿದಕೆ ವರ್ತುಳಾದಿ ದುಗ್ಧ ।
ವನಧಿ ಸುತ್ತಿದೆ ದ್ವೀಪ ಪರಿಮಿತ ಲೆಖ್ಖ ।
ಮನೋಹರ ಶ್ವೇತದ್ವೀಪ ಯಿದರೊಳಗೆ ।
ಮಣಿಗಣ ಪ್ರಕಾಶದಂತೆ ಸಿದ್ಧ ।
ಮುನಿಗಳ ಸಮ್ಮತ ಯಿದರ ವಿಸ್ತಾರ ಯೋ ।
ಚನೆಯ ಮಾಡಲಿಬೇಕು ಸಾವಕಾಶದಿ ।
ಮನೋಭವ (ಜವ) ನೈಯ ಸಿರಿ ವಿಜಯ ವಿಠಲನ್ನ ।
ಅನುಗ್ರಹವಾದರೆ ವೊಂದು ದುರ್ಲಭಕಾಣೆ ॥೮॥

### ತ್ರಿವಿಡಿ ತಾಳ

ಪರಮ ಶೋಭಿತವಾದ ಪುಷ್ಕರಾಖ್ಯ ದ್ವೀಪ ।
ಅರವತ್ತು ನಾಲ್ಕು ಲಕ್ಷಯೋಜನ ।
ಪರಿಮಿತವಾಗಿದೆ ಯಿದಕೆ ರಮಣಕ ಧಾತ ।
ಎರಡು ವರ್ಷಗಳುಂಟು ಅರ್ಧಾರ್ಧದಿ ।

ವರ ಪುಷ್ಕರಣಿ ವೊಂದಲ್ಲಿಹ ಹನ್ನೊಂದು ನೂರು ವಿ ।
ಸ್ತರಯೋಜನ ದಗಲಾ ಸ್ವರ್ನಕಮಲ ।
ಭರಿತವಾಗಿಪ್ಪವೊ ನಾನಾ ಶಕುನಿ ಜಾತಿ ।
ಸರಸ ವಾಡುತಲಿವೆ ಸೌಮ್ಯಗುಣದಿ ।
ವರುಷ ನಾಮಕ ರಾಯರು ಬ್ರಹ್ಮಾಂತರ್ಗತ ।
ಹರಿಯ ಕರಣ ಶುದ್ಧಿಯಲಿಂದ ಅರ್ಚಿಸುವರು ।
ಗಿರಿವೊಂದುಂಟು ಮಧ್ಯದಲಿ ಮಾನಸೋ ।
ತ್ತರವೆಂದು ಕರೆವುತ ವಲಯಾಕಾರ ।
ಎರಡೈದುಸಾವಿರ ಅಗಲಯಿಷ್ಟೇ ಉದ್ದ ।
ಹಿರಿದು ಕಾಂತಿಯಿಂದ ಕಂಗೊಳಿಪದು ।
ತರಣಿಯಿದರ ಮ್ಯಾಲೆರಥದಲ್ಲಿ ಕುಳಿತು ಸಂ ।
ಚರಿಸುವ ವೊಂದು ಚಕ್ರವ ಪೊಂದಿಸಿ ।
ಸರುವೋತ್ತಮ ಹರಿ ನಾಲ್ಕು ರೂಪದಿ ಸುತ್ತ ।
ಇರುತಿಪ್ಪನುಕೇಳಿ ವಾಸುದೇವ ಸಂ ।
ಕರುಷಣ ಪ್ರದ್ಯುಮ್ನ ಅನಿರುದ್ಧ ಪೆಸರು ।
ಚತುರದಿಕ್ಕಲಿ ಸುರರು ಸೇವಿಸುವರು ।
ಸರಸಿಜ ಬಾಂಧವನ ಗತಿರಥದ ವಿಚಾರ ।
ಅರುಹು ಮಾಡಲಿಬೇಕು ಮುಂದೆ ತಿಳಿದು ।
ಮರಳೆ ಈ ದ್ವೀಪದ ಪರಿಮಿತ ಶುದ್ಧೋದಕ ।
ಶರಧಿ ಕಂಕಣಾಕಾರ ಮಹಗಂಭೀರ ।
ಅರವತ್ತುನಾಲ್ಕು ಲಕ್ಷ ತರುವಾಯ ।
ಸ್ವರಣಾತ್ಮಕ ಭೂಮಿವುಂಟು ವಿ ।
ಸ್ತರಿಪೆ ಯೋಜನ ತೊಂಭತ್ತಾರು ಲಕ್ಷವೋ ।
ಎರಡೆರಡು ವಜ್ರಧಡಿ ಪಂಚ ಪಂಚ ಸಾ ।
ವಿರ ಯೋಜನದನಿತೆ ಭೂಮಿಯೆನ್ನಿ ।
ಪರಿ ಪರಿ ಸ್ವರ್ನಮಯ ತರುಖಗ ಮೃಗ ಜಾತಿ ।

ಚರಿಸುತ್ತಿವೆ ತಮ್ಮ ಸ್ವಕ್ರೀಡೆಯಲಿ ।
ಸುರ ಗಂಧರ್ವಪ್ಸರ ಪೆಂಗಳೆಯರು ಪೋಗಿ ।
ಸುರತ ಕ್ರೀಡೆಯಿಂದ ಸುಖಿಸುವರೊ ।
ಚರಿಯ ಪೇಳುವದೇನೊ ದೇವತ ಕಾರ್ಯವು ।
ಚ್ಚರಿಸುವದಕೆ ನಾಲಿಗೆ ಸಾಲದೊ ।
ಉರುಕಾಂತೆಯಿಂದೆಸೆವ ಲೋಕಾ ಲೋಕ ವೆಂಬೊ ।
ಪರುವತ ಸೂವರ್ಣಧರಣಿ ಪೊಂದಿ ।
ತಿರಗುವ ಸುಳಿಯಂತೆ ಸುತ್ತಲಿಪ್ಪದು ಅರ್ಧ
ತರಣಿ ಪ್ರಕಾಶ ಅರ್ಧಕೆ ಯಿಲ್ಲವೊ ।
ಕರೆಸುವದರಿಂದ ಲೋಕಾ ಲೋಕವೆಂದು ।
ನಿರುತದಲಿ ಸರ್ವ ಓದಿನಲ್ಲಿ ।
ಪರಮ ಪುರುಷ ನಮ್ಮ ವಿಜಯ ವಿಠಲರೇಯನ ।
ಶರಣರ ಕರುಣಕ್ಕೆ ಎಣೆಗಾಣೆ ಸರ್ವದ ॥೯॥

## ಅಟ್ಟತಾಳ

ಸಪುತ ಸಪುತದ್ವೀಪ ವನಧಿಯ ಮಹಿಮೆಯ ।
ಅಪರಿಮಿತವಾಗಿ ಕೊಂಡಾಡಿ ಹರಿಪಾದ ।
ಗುಪುತದಿ ಭಜಿಪ ಹರಿದಾಸರ ಕೂಡ ।
ತಪವ ಮಾಡುತ್ತ ಚಿತ್ತಶುದ್ಧಾತ್ಮಕರಾಗಿ ।
ಸಪುತ ದ್ವೀಪದಲ್ಲಿ ಅರಸುತನ ವೈದಿದ ।
ನೃಪರು ಖಂಡಾಭಿದಾನದಂತೆ ತಿಳಿವುದು ।
ವಿಪುಳಮತಿಯಿಂದ ಪ್ಲಕ್ಷ ಮೊದಲು ಮಾಡಿ ।
ಅಪರದ್ವೀಪ ವೊಂದಲಿ ವೊಂದೆ ಭಗವದ್ರೂಪ ।
ತಪನ ಜಾಂತರ್ಗತ ಅನೇಕವಾಗಿ ।
ಸಪುತ ಖಂಡ ಐದಕೆ ವೊಂದಕೆದ್ವಯ !
ಗುಪಿತ ಮಂಗಳ ಮೂರ್ತಿ ತತ್ ತತುವರ್ಷದ ।

ನೃಪನಿಂದ ಪೂಜೆಗೊಂಬನು ಈ ದ್ವೀಪಕಬ್ಯಾರೆ ।
ಸಪುತ ದ್ವೀಪಕೆ ವರುಷಗಳು ಲೆಖ್ಖವ ಮಾಡೆ ।
ಸಪುತ ಸಪುತಕೆ ವೊಂದೆರಡು ಕಡಿಮೆ ಪೇಳೊ ।
ಕೃಪ ಪಯೊನಿಧೆ ದೇವ ವಿಜಯ ವಿಠಲನಂಘ್ರಿ ।
ಜಪಿಸು ಈ ಭಾರತ ವರ್ಷದಲ್ಲಿ ಪುಟ್ಟಿ । ॥೧೦॥

ಆದಿತಾಳ

ಸರಸಿಜೋದ್ಭವಗೆ ಸ್ವಾಯಂಭು ಮನು ಆತಗೆ ।
ಪರಮ ವೈರಾಗ್ಯ ನಿಧಿ ಪ್ರಿಯವೃತನೆಂಬೊ ।
ಧರಣೀಶ ಪುಟ್ಟಿದ ನೀತಗೇಳು ಮಂದಿ ।
ಅರುಸು ಮಕ್ಕಳು ಜನಿಸಿದರಿವರಿಗೆ ।
ಎರಡೈದು ದ್ವಿಪಂಗಳು ವಿಭಾಗ ಮಾಡಿಕೊಡಲು ।
ಹರುಷದಿಂದಲಿ ರಾಜ್ಯಭಾರ ಮಾಡಿದರಾಗ ।
ಮರಿಯಾದೆಯಾಯಿತು ಆಮೇಲೆಯಿವರಿಗೆ ।
ವರ ಪುತ್ರರಾದರು ನೃಪ ನಾಭಿಗೊಂಬತ್ತು ।
ತರುವಾಯ ಪಂಚ ಜನಕೆಯೇಳೇಳು ಮಂದಿಕೇಳಿ ।
ಬ್ಬರು ಮಕ್ಕಳಾದರು ವೀತಿ ಹೋತ್ರರಾಯಗೆ ।
ಕರೆದು ತನ್ಮಾತ್ಮಜರಿಗೆ ದ್ವೀಪ ಹಂಚಿಕೊಡಲಾಗಿ ।
ಕರೆಸಿದವು ನೋಡು ವರುಷ ಭೇದದಿಂದ ।
ಗಿರಿ ಮೇರುವಿನಿಂದ ಲೋಕಾ ಲೋಕಾದ್ರಿತನಕ ।
ಮರಿಯಾದೆ ಸಪ್ತದ್ವೀಪ ಸಪ್ತಶರಧಿ ತನಕ ।
ಧರಣಿ ಗಣಿತ ಮಾಡಿಯೆಣಿಸಿ ಕೊಂಡಾಡುವದು ।
ನಿರುತರ ಅಲ್ಲಿದ್ದು ಹರಿ ಕಾವುತಲಿಪ್ಪ ।
ವರಣ ವೊಂದೊಂದರಲ್ಲಿ ಭಗವದ್ರೂಪ ಚಿಂತಿಸಿ ।
ಬರಿದೆ ಯಾಗದು ಕಾಣೊ ಪುಣ್ಯರಾಶಿ ಬಪ್ಪದು ।

ಮುರವೈರಿ ತ್ರಿಜಗಧೀಶ ವಿಜಯ ವಿಠಲರೇಯ ।
ಶರೀರ ದೊಳಗೆ ಯಿನಿತು ಮಾಡಿಪ್ಪ ತಿಳಿದು ನೋಡಿ ॥೧೧॥

**ಜತೆ**

ಸಪ್ತದ್ವೀಪದ ಸತ್ಕಥೆ ಶ್ರವಣಮಾಡಿದ ಜ್ಞಾನಿಗೆ ।
ಆಪ್ತನಾಗಿಪ್ಪನು ವಿಜಯವಿಠಲ ವೊಲಿದು ॥೧೨॥



## ಶ್ವೇತ ದ್ವೀಪ ಸುಳಾದಿ

### ೪೯) ಸುಳಾದಿ

ರಾಗ: ಭೈರವಿ ಧ್ರುವ ತಾಳ

ಸುಧಾಂಬುಧಿ ಮಧ್ಯಈರೈದು (೧೦+೧೦=೨೦) ದಶಲಕ್ಷ ಗಾ ।
ವುದ ಮಿತಿ ವಿಸ್ತಾರ ಶ್ವೇತದೀಪ ।
ಅದರೊಳು ತ್ರಿಭಾಗ ಈರಾರು ವೊಂದೆಂಟು ।
ಭೂದುರ್ಗ ಶ್ರೀಭಾಗ ವೆಂಟುಲಕ್ಷ ।
ಉದಧಿ ಎರಡು ಉಂಟು ಅರಂಣ್ಯ ವೆಂ ।
ಬದರಗಲಾಲಕ್ಷ ವೊಂದೊಂದು ಗಾವುದ ।
ವಿದಿತ ದಿಂದಲಿ ಶ್ರೀ ಭಾಗದೊಳಗೆ ಲಕ್ಷ ।
ತದನಂತರದಲ್ಲಿಹೊ ಕದಲಕ್ಷದ್ವಯದೊಳು ।
ಪದುಮ ನಿಭೇಕ್ಷಣ ವಿಜಯ ವಿಠಲನು ।
ಮುದವಣಿಗನಾಗಿ ಶ್ರೀಭಾಗಿದೊಳಿಪ್ಪ ॥೧॥

## ಮಟ್ಟತಾಳ

ಲಕ್ಷತ್ರಯ ಗಾವುದ ರನ್ನದ ಮಂಚ ।
ಚಕ್ಷು ಶ್ರವನು ಆದರ ಪರಿಮತಿ ।
ಲಕ್ಷದ್ವಯ ಸಾರ್ಧ ಗಾವುದ ವುನ್ನತ ।
ಅಕ್ಷರ ಪುರಷ ಶತಿ (ಸಿತ) ವಾಸುದೇವ ।
ಅಕ್ಷ(ಯ) ಮೂರುತಿ ಪವಳಿಸಿ ನಲಿವ ।
ದಕ್ಷಣನಾಮಾ ವಿಜಯ ವಿಠಲ ।
ಕುಕ್ಷಿಯೊಳು ತ್ರಿಭುವನ ತಾಳುವ ।
ಮೋಕ್ಷಾದ್ಯರಿಗೆ ಈತನೆ ಸಿದ್ಧ ॥೨॥

## ತ್ರಿವಿಡಿ ತಾಳ

ವರ ಮೂರ್ತಿ ಎರಡು ವರೆ ಲಕ್ಷಯೋಜನದುದ್ದ ।
ಪರಿಯಂಕದಲಿ ವಿಗ್ರಹದ ವಿವರ ।
ಚರಣ ದುನ್ನತಗಾವುದ ಮುವತ್ತಾರು ಸಾ ।
ಸಿರಮೇಲೆ ಕಟಿ ಪರಿಯಂತರ ಲಕ್ಷ ।
ಪರಿಮಿತ ನಾಭಿ ಆಲ್ಲಿಗೆ ಹದಿನೆಂಟು ಸಾ ।
ಸಿರ ಗಾವುದ ಮತ್ತೆವಕ್ಷ ಉದರ (ಉರ) ಸಹ ।
ಅರಿವುದು ಐವತ್ತೆರಡು ಸಾವಿರ ಎಪ್ಪ ।
ತ್ತೆರಡು ಸಾವಿರ ಮುಖ ನಯನ ಸಾಹಸ್ರ ಈ ವಿ ।
ವರ ದಿರುವ ಬಗೆ ತಿಳಿದು ಬ್ರಹತಿ ವಿಜಯ ವಿಠ್ಠಲ್ಲ ।
ಪರದೈವವೆಂದು ಸ್ಮರಿಸಿರಿ ನಿರುತ ಸಾರಿ ॥೩॥

## ಅಟ್ಟತಾಳ

ಮುನ್ನೂರು ಯೋಜನ ಲಲಾಟದಲಿ ಸಂಖ್ಯೆ ।
ಕರ್ನಗಳು ಯೆರಡು ವೊಂದೊಂದು ಸಾವಿರ ।

ಕಣ್ಣು ದ್ವಯಂಗಳು ಕರ್ನದ ಪರಿಮಿತ |
ಚನ್ನ ಭ್ರೂಗಳದ್ವಯ ಸಾವಿರ ವೊಂದೊಂದು |
ಇನ್ನೇನು ವುಸರುವೆ ನಾಶಿಕ ಕೂಡಿಸಿ |
ಮುನ್ನೂರು ಗಾವುದ ವೆಂಬೋದು |
ಪುಣ್ಯಶ್ರವಣ ಕೀರ್ತಿ ವಿಜಯ ವಿಠಲನ್ನ |
ಆನಂತ ಶಯನನ್ನ ಆದಿ ಮೂರುತಿಯು ||೪||

**ಆದಿತಾಳ**

ಬಾಹುಗಳು ಯೆರಡು ಲಕ್ಷ ವೊಂದೊಂದು ಪರಿಮಿತ |
ಸಾಹಸ್ರಗಾವುದನ್ನತ ವೊಂದೊಂದು ಬೆರಳ್ಗಳು |
ಮೋಹನ ದಿವ್ಯಮಂಟಪ ಯೇಳು ಲಕ್ಷಗಾವುದ |
ಮಾಹ ವಿನಾನ ವುನ್ನತ ಲಕ್ಷ ಐವತ್ತೊಂದ್ಯೋಜನ |
ಮಹ ವೀರ್ಯ ವಿಜಯ ವಿಠಲವಾಸವಾಗಿ ತಾನೆ ವ್ಯಾಪಿಸಿ |
ಮಹಿಯೊಳು ಬಂದು ಮೆರೆವ ಕ್ಷಿರವಾರಿಧಿ ಶಯನ ||೫||

**ಜತೆ**

೧ ಜಂಭಾರಿ ೨ ಶಂಭು ೩ ಸ್ವಾಯಂಬು ೪ ನಿರ್ಜರ ಹೃದಯ |
೫ ಅಂಬುಜವಾಸ ಲಕ್ಷ್ಮೀಶ ವಿಜಯ ವಿಠಲ ||೬||

ಜಂಭಾರಿ=ಇಂದ್ರ
ಶಂಭು=ರುದ್ರ
ಸ್ವಾಯಂಭು=ಬ್ರಹ್ಮ
ನಿರ್ಜರಹೃದಯ=ದೇವತೆಗಳು
ಅಂಬುಜವಾಸ=ಕಮಲ

## ಶ್ರೀ ಅಭಿನವ ಜನಾರ್ದನ ವಿಠಲ ಕೃತ
## ಚತುರ್ದಶ ಲೋಕ ವರ್ಣನಾ ಸುಳಾದಿ.

### ೫೦) ಸುಳಾದಿ

ರಾಗ: ಮುನದಿಚ್ಛಿ ಧ್ರುವ ತಾಳ

ಜಲಜಲೋಚನ ಪ್ರಳಯ ಜಲಧಿಯೊಳಗೆ ಅಂದು |
ಜಲಜ ಜಾಂಡವ ವುದರದೊಳಗೆ ಬಚ್ಚಿಟ್ಟುಕೊಂಡು |
ಜಲಜಾಕ್ಷಿಯರಾದ ಲಲನೆ ಶ್ರೀ ದುರ್ಗೆಯರ |
ಕಲೆತು ಭೂರೂಪ ಆಲದೆಲೆಯಮ್ಯಾಲೆ ಸುಖದಿ |
ಮಲಗಿ ಮುಕ್ತರ ತನ್ನೊಳಗೆ ಬಚ್ಚಿಟ್ಟುಕೊಂಡು |
ಬಲು ಕಾಲ ಕ್ರೀಡಿಸುವ ಲೀಲೆಯಲ್ಲಿ |
ಕಲುಹ ಹರಿಯರ ವರಲಿ ಸಮುಳು ಲಕುಮಿ ನಿ |
(ಪಾಠಾಂತರ),(ಕಲುಷಹರ ಹರಿಯ ಸಮಾಸಮಳು ಲಕುಮಿ) |
ರ್ಮಳ ಮುಕ್ತರ ನಿದ್ರೆ ಭಗವನ್ನಿದ್ರೆಯಿಂತೆಂದು |
ತಿಳಿವದು ಹರಿಯ ಸಮಿಾಪ ವೈದಿ |
ಚಲುವ ಜಗತ್ತಿನ ವ್ಯಾಪಾರ ಶೂನ್ಯಳಾಗಿ |
ಕುಳಿತಿರುವದೆ ಸೇವೆ ಅದೆ ನಿದ್ರೆ ಲಕುಮಿಗೆ |
ನಳಿನನಾಭನ ಗರ್ಭದೊಳಗೆ ಬಾಹ್ಯಪ್ರತೀಕ |
ದಲಿ ಹರಿಪೂಜೆಸಲ್ಲ ಸ್ವಬಿಂಬಧ್ಯಾನದಲ್ಲಿ |
ನಲಿದುಂಡು ಕ್ಲುಪ್ತಾನಂದವದಕೆ ಅಭಿವೃದ್ಧಿಯಿಲ್ಲ |
ಒಲಿವಿಂದ ತಿಳಿವುದು ಯಿದೆ ಮುಕ್ತರ ನಿದ್ರೆಯು |
ಅಲರಂಬಿನೈಯ್ಯನ ಮಹಿಮೆ ಆಶ್ಚರ್ಯ ಕಾಣೊ |
ಕೆಲವು ಕಾಲವು ಹೀಗೆ ನಲಿದಾಡಿ ಪುನಹ ತನ್ನ |
ಲಲನೆ ಸಮೇತ ಈ ನಳಿನ ಜಾಂಡ ನಿರ್ಮಿಸಿದ |

ಕುಲದೈವ ನಮ್ಮ ಅಭಿನವ ಜನಾರ್ದನ ವಿಠಲ ।
ಲಲನೆ ಕಾಣಳು ಯಿವನ ಮಹಿಮೆ ಯೇನಂತೆಂಬೆ ॥೧॥

## ಮಟ್ಟತಾಳ

ಶ್ರೀರಮಣ ಪುನಹ ವಾರಿಜ ಜಾಂಡದಲಿ ।
ನೀರೊಳಗೇವೆ ಸಾಸಿರ ವರುಷ ಮಲಗಿ ।
ವಾರಿಜ ಸಖ ತೇಜ ತನ್ನ ಪೊಕ್ಕಳಿಂದ ।
ವಾರಿಜ ಪುಟ್ಟಿಸಿ ಅದರೊಳು ಬ್ರಹ್ಮನಾ ।
ಕಾರವ ನಿರ್ಮಿಸಿ ಆದರ ದಳಗಳಿಂದ ।
ಈರೇಳು ಲೋಕವನ್ನೆ ಸೃಜಿಸಿ ಅದಕಾ ।
ಧಾರ ಶೇಷನಮಾಡಿ ಆತಗ ಗತಿ ವಾಯು ।
ಕೂರುಮನಾ ನಿಲಿಸಿ ಯಿವರಿಗೆಲ್ಲ ನೀನೆ ।
ಭಾರಕರ್ತನಾದೆ ಕಚ್ಛಪರೂಪದಲಿ ।
ಧೀರ ಶ್ರೀ ಅಭಿನವ ಜನಾರ್ದನ ವಿಠಲಾ ।
ಪಾರ ದಯಾಂಬುಧಿ ಈ ರೀತಿಯ ಮಾಡ್ವ ॥೨॥

## ರೂಪಕತಾಳ

ನೂರು ಸಾವಿರ ಕಡಿಮೆ ಈರಧಿಕ ವಿಂಶತಿ ।
ಮೂರುಕೋಟಿ ಯೋಜನ ನೀರಿನೊಳು ಶೇಷ ಸಾ ।
ಸಿರಿ ಮುಖ ನೀಳ ಪಂಚಾರು ಸಾವಿರ ಯೋಜನ ।
ಭಾರ ಪೊತ್ತಿಹ ಈರೇಳು ಪುರದ ।
ಮೂರು ನಾಲ್ಕು ಲೋಕ ವೊಂದೇಕ್ರಮವು ದ್ವಿಸಾ ।
ಸಿರ ಯೋಜನ ಪ್ರಥಕ ಪ್ರಥಕ್ ಪುರದ ।
ಘೋರ ಅಯುತ ಯೋಜನ ಒಂದಕ್ಕೊಂದವಕಾಶ ।
ಈರೀತಿ ಯೇಳು ಲೋಕದ ಕೆಳಗೆ ।

ಘೋರ ನರಕ ಕಂದ ನಾಲ್ಕುಸಾವಿರ ಯೋಜನ ।
ಈರಾರು ಸಾವಿರಯೋಜನ ಪಾತಾಳಕ್ಕೆ ।
ಸಾರಿಗುಣಿಸೆ ಯಿಲ್ಲಿಗೆ ಲಕ್ಷವಾಗೆ ।
ಮಾರಜನಕ ಅಭಿನವ ಜನಾರ್ದನ ವಿಠಲ ।
ಸೇರಿಸಿದನು ತತ್ತಸ್ಥಳದಲ್ಲಿ ಜೀವರ ॥೩॥

ಝಂಪಿತಾಳ

ಹದಿನಾರು ಸಾವಿರ ಯೋಜನವು ಭೂಕಂದ ।
ದ್ವಿದಶಸಹಸ್ರ ಯೋಜನ ಮೆಘ ಮಂಡಲವು ।
ಇದರಷ್ಟೆ ಯೋಜನದಮ್ಯಾಲೆ ಯಕ್ಷರಮನಿಯು ।
ಹದಿನೆಂಟು ಹನ್ನೆರಡು ಸಾವಿರಯೋಜನವು ।
ಮುದದಿ ವಿದ್ಯಾಧರ ಚಾರಣ ಸಿದ್ಧರು ರಾಹುಕ್ರಸು ಕ್ರ ।
ಮದಿ ಹತ್ತುಸಾವಿರ ಯೋಜನ ।
ಆದರಿಂದ ಹತ್ತುಸಾವಿರ ಸೂರ್ಯಮಂಡಲವು
ಇದನೆಲ್ಲ ಗುಣಿಸೆ ಅಲ್ಲಿಗೆ ಲಕ್ಷವೊ ।
ವಿಧು ಮಂಡಲವು ಲಕ್ಷ ನಕ್ಷತ್ರ ಮೇಷಾದಿ ।
ದ್ವಿದಶ ರಾಶಿ ಶುಕ್ರಮಂಡಲದ ಪರಿಯಂತ ।
ಇದರ ಗಣಿತವೆಲ್ಲ ಲಕ್ಷ ಲಕ್ಷ ।
ಬುಧ ಅಂಗಾರಕ ಬೃಹಸ್ಪತಿ ಶನೇಶ್ಚರ ಮಂಡ ।
ಲಿದರ ಗಣಿತವು ಯೆರಡೆರಡು ಲಕ್ಷ ।
ವಿಧುಗಳಾದ ಸಪ್ತಋಷಿ ಯೇಕಾದಶ ಲಕ್ಷ ।
ಹದಿಮೂರು ಲಕ್ಷ ಅಲ್ಲಿಗೆ ಧ್ರುವನ ಮನೆಯು ।
ಅದುಭೂತ ಸ್ವರ್ಗ ಅಲ್ಲಿಗೆ ತ್ರಯೋದಶಲಕ್ಷ ।
ಯಿದರ ಕ್ರಮುವನೆಲ್ಲ ತಿಳಿವದು ಸುಜನರು ।
ಪದುಮಾಕ್ಷ ನಮ್ಮ ಅಭಿನವ ಜನಾರ್ದನ ವಿಠಲ ।
ವಿಧಿತಪ್ಪದಲೆ ನಡೆಸಿದನು ಯಿವರಿವರ ಗತಿಗಳನು ॥೪॥

## ತ್ರಿವಿಡಿ ತಾಳ

ಸುರಲೋಕ ಭುವಿಗೆ ದಶಪಂಚ ಲಕ್ಷವ ।
ಪರಕಂದ ಅಗಲವು ಐವತ್ತು ಸಾವಿರ ।
ಸುರಲೋಕದತ್ತ ಎಪ್ಪತ್ತೈದು ಲಕ್ಷ ವು ।
ಹರಲೋಕ ಕಂದ ಕೋಟೆರಡ್ಡತ್ತೈದುಲಕ್ಷಾ ।
ಪರಮೇಲೆ ಜನೋಲೋಕ ಕೋಟಿದ್ವಾದಶಲಕ್ಷ ।
ಎರಡಧಿಕ ಮೂದತ್ತು ಸಾವಿರ ಯೋಜನ ।
ಇರುತಿಪ್ಪದು ಸ್ಥೂಲ ಕೋಟ್ಯೈವತ್ತು ಲಕ್ಷ ।
ತರುವಾಯ ತಪೊ ಕೋಟಿ ಅರುವತ್ತೆಂಟುಲಕ್ಷ ।
ಎರಡಧಿಕ ಐವತ್ತು ಸಾವಿರ ಯೋಜನ
ಇರುವದು ಕೆಳಗಿನದೊಂದು ಮ್ಯಾಲಿಪ್ಪ ದ್ವಿ ।
ಪುರದೊನ್ನತವೆಲ್ಲ ಪೊಂದೆ ಸಮೂಪೆನ್ನು ।
ಅರಿವುದು ಇಲ್ಲಿಗೆ ಸತ್ಯಲೋಕವು ।
ಎರಡೆರಡು ಕೋಟ್ಯಾರು ಲಕ್ಷಯಿಪ್ಪತ್ತೈದು ಸಾ ।
ಸಿರದ ಯೋಜನದ ಮ್ಯಾಲಿಪ್ಪುದು ।
ಸಿರಿಪತಿ ಮಹಿಮೆಯ ಅರಿದವರಾರಿನ್ನು ।
ಸ್ವರಮಣ ಅಭಿನವ ಜನಾರ್ದನ ವಿಠಲ ।
ನಿರುತ ಈ ಪರಿಯಲ್ಲಿ ಸ್ಮರಿಸಿದವರ ಕಾವ ॥೫॥

## ಅಟ್ಟತಾಳ

ಸರಸಿಜೋದ್ಭವನ ಸುಪುರಯೆಂಟು ಕೋಟಿ ।
ಎರಡಾರುಲಕ್ಷ ಐವತ್ತು ಸಾವಿರದ ಮ್ಯಾ ।
ಲಿರುತಿಪ್ಪ ವೈಕುಂಠ ಪುರದ ವಿವರ ಕಂದ ।
ಎರಡುಕೋಟಿ ತೊಂಭತ್ತೊಭತ್ತು ಲಕ್ಷವು ।
ಅರಿವದು ಮೇಲೆ ಐವತ್ತುಸಾವಿರ ಯೋಜನ ।
ಎರಡೊಂದು ಭಾಗವು ಯಿದರೊಳು ತಿಳಿವದು ।
ಸಿರಿ ಭಾಗವು ಐವತ್ತು ಲಕ್ಷವೆನ್ನು ।

ಧರಣಿ ಭಾಗವು ಒಂದು ಕೋಟಿಗುಣಿಸುವದು ।
ದುರಗ ಭಾಗವು ಕೋಟಿ ನಾಲ್ತೊಂಭತ್ತು ಲಕ್ಷ ।
ದರವ್ಯಾಲಿ ಐವತ್ತು ಸಾವಿರ ಯೋಜನ ।
ಪರಮ ಪುರುಷ ಅಭಿನವ ಜನಾರ್ದನ ವಿಠ ।
ಲರವಿಂದ ನಾಭನ ಸೃಷ್ಟಿಗೆ ನಮೋನಮೋ ॥೬॥

**ಆದಿತಾಳ**

ಪರಿಮಾಣಯಿಲ್ಲಿಗೆ ಐವತ್ತುಕೋಟಿ ವಿ ।
ಸ್ತರದೊಳಗೆ ಈ ಲೋಕಗಳು ಸೃಜಿಸಿ ।
ತರುವಾಯ ಯಿದರೊಳು ಸಾತ್ವಿಕ ರಾಜಸ ।
ನರಕ ಭಾಗಿಗಳನ್ನುಯಿಟ್ಟ ಅವರ ಕೈಯ್ಯಾ ।
ವರಾವರ ಮಿಶ್ರಸಾಧನ ಮಾಡಿಸಿ ।
ಅರಿದು ಕೊಡುವೆ ಅವರವರ ಗತಿಗಳನು ।
ಸರು ಸ್ವತಂತ್ರನೆ ಸರುವ ಲೋಕೇಶ್ವರ ।
ನಿರುಪಾಧಿಕ ಭಕ್ತರ ವಶವಾಗುವೆ ।
ಪರಮ ಮಂಗಳ ಮೂರ್ತಿ ಸರಿಯಿಲ್ಲ ಸರಿಯಿಲ್ಲ ।
ಸುರ ನರರೊಳಗೆಲ್ಲ ಸರುವ ದೇಶಕಾಲ ।
ಸರುವ ವೇದಗಮ್ಯ ಕ್ಷರಅಕ್ಷರ ಪುರುಷೋತ್ತಮ ನಾನಿನ್ನ ।
ಮೊರೆಬಿದ್ದೆ ಮೊರೆಬಿದ್ದೆ ಪೊರವದೊ ಪೊರವದೊ ।
ಶರಣನ ದೋಷವ ಸ್ಮರಣೆಗೆ ತಾರದೆ ।
ಕರುಣ ಸಾಗರ ನೀಕರುಣವ ಮಾಳ್ಪದು ।
ಪರತರ ಅಭಿನವ ಜನಾರ್ದನ ವಿಠಲ ।
ಪರಮ ಜ್ಞಾನಿಗಳ ಶ್ರೀ ಚರಣಸೇವೆಯ ಕೊಡೊ ॥೭॥

**ಜತೆ**

ಗುಣಗಣ ನಿಲಯ ಸಿರಿ ಅಭಿನವ ಜನಾ ।
ರ್ದನ ವಿಠಲನೆ ನಿನ್ನ ಮಹಿಮೆಗೆ ನಮೋನಮೋ ॥೮॥

## ಶ್ರೀ ಅಭಿನವ ಜನಾರ್ದನ ವಿಠಲ ಕೃತ

## ವೈಕುಂಠ ವರ್ಣನೆ

## ಸುಳಾದಿ ೫೮

ರಾಗ :- ಶಂಕರಾಭರಣ ಧ್ರು

ರತ್ನ ಖಚಿತ ಏಳು ಸುತ್ತಿನ ಕೋಟೆ ಆಯುತ ।
ಮಾರ್ತಾಂಡರ ಪೂರ್ಣ ಗಭಸ್ತಿ ಧಿಕ್ಕರಿಸುವ ।
ಶಕ್ತಿ ವೈಕುಂಠ ಪರಮಾತ್ಮಕ ವಾಗಿಪ್ಪದು ।
ಎತ್ತ ನೋಡಿದರತ್ತ ಮುಕ್ತರ ಸಂದಣಿ ।
ಮುಕ್ತಾ ಮುಕ್ತರು ಕೂಡಿ ಪುರುದೊಳು ತುಂಬಿಹರು ।
ಸುತ್ತಾಮುತ್ತಾ ಚೌಕ ಕೋಟಿಯೊಳಗೆ ।
ಉತ್ತಮ ಸಿರಿ ಪರಮಾತ್ಮ ನಿನ್ನಂಗದಿ ಜ
ನಿತ್ತಳಾಗಿ ಬಂದು ಅಯೋಧ್ಯ ನಗರಿಗೆ ।
ಮತ್ತೆ ಪರಿಘರೂಪವಾಗಿಹ್ಯಳು ಬಿಡದೆ ।
ಸಪ್ತ ಪ್ರಾಕರವೆಲ್ಲ ಮುಕ್ತಮಯ ।
ಭೃತ್ಯ ಜಯ ವಿಜಯರು ಸ್ತೋತ್ರ ಮಾಡಲು ಹೊರಗೆ ।
ಚಿತ್ರ ಚಾವಡಿಗೆ ಬರಲು ಅಮುಕ್ತರ ।
ವೊತ್ತವು ಸೇವಿಸೆ ಕೈಕೊಂಡು ಪುನಹ ಒಳಗೆ ।
ಚಿತ್ತೈಸುವ ಮಹ ಪ್ರಭುವೆ ವಿಭುವೆ ।
ಸಪ್ತ ಪ್ರಾಕಾರದೊಳಗೆ ವಿರಜಾನದಿ ಆದರಿಂ ।
ದತ್ತ ಮುಕ್ತಸ್ಥಾನ ನಿರ್ನೈಸಿ ।
ಮುಕ್ತಿಯೊಳಗೆ ಚತುರ್ವಿಧ ಮಾಡ್ದೆ ಸಾಲೋಕ್ಯವು ।
ಹತ್ತಿಲಿಪ್ಪಾದೊಂದು ಸಾರುಪ್ಯವೆಂದು ।
ಉತ್ತಮ ಸಾಯುಜ್ಯ ಪ್ರಭೇದ ಸಾರಿಷ್ಣ ।

ತತ್ವ ಅಭಿಮಾನಿ ಬ್ರಹ್ಮ ದಿವಿಜ ಗಣಕೆ
ಪೊತ್ತು ಲಿಂಗಾಂಗ ಬ್ರಹ್ಮ ಮುಕ್ತರ ಗೂಡಿ ವಿರಜೆ।
ತೀರ್ಥ ಸ್ನಾನವ ಮಾಡದನಕ ಸಲ್ಲ ।
ಕ್ಲಿಪ್ತಿ ಈ ಬಗೆ ಮಾಡ್ದೆ ಮುಕ್ತ ಬ್ರಹ್ಮರು ವೇ ।
ದೋಕ್ತಿಯಿಂದಲಿ ನಾನಾ ಬಗೆಗಳಿಂದ ।
ಸ್ತೋತ್ರ ಪಾಠಗಳಿಂದ ಪೂಜಿಸುತಲಿಪ್ಪರು ।
ಹೋತ್ರಾದಿಗಳ ನಿತ್ಯ ಮಾಡುತಿಹ್ಯರು ।
ಮುಕ್ತ ವರ್ಗವು ನಿನ್ನ ಕಾರುಣ್ಯದಿಂದ ಶುದ್ಧ ।
ಸತ್ವಾತ್ಮಕ ದೇಹವನ್ನೇ ತೆತ್ತು ।
ಛತ್ರ ಚಾಮರ ವ್ಯಜನ ಹಸ್ತಿವಾಜಿ ಸ್ಯಂದನ ।
ಹತ್ತಿ ನಾನಾಪರಿ ಕ್ರೀಡಿಪರೋ ।
ಸ್ವಸ್ತ್ರೀಯರುಗಳಿಂದ ವಿಹಾರ ಮಾಳ್ಪರು ಅ ।
ನ್ಯ ಸ್ತ್ರೀಯರಲ್ಲಿ ಮನವೆರಗದವರ ।
ಭಕ್ತ ವತ್ಸಲ ನಿನ್ನ ಭಕ್ತರು ಹೇಗೆ ಭೋಗಿ ।
ಸುತ್ತ ನಿನ್ನನ್ನು ಸೇವಿಸುತ್ತಲಿಹರು ।
ಸತ್ವಾತ್ಮಕ ಶುದ್ಧ ಪರಮ ಸನ್ಮಂಗಳ ಮ (ವ್ಯ) ।
ದುತ್ತರವಾದ ಕಾಯ ಅಬ್ಜಾಜನನ ಭಕ್ತರ ಕಾಯದ ನಿನ್ನ ।
ನಿತ್ಯಾ ವಿಯೋಗಿ ಸೇವಿುತ್ತಲಿಪ್ಪಳು ನಾನಾಭರಣವಾಗಿ ।
ನಿತ್ಯ ಬ್ರಹ್ಮಚಾರಿ ಸ್ವರಮಣ ಸ್ವಾತಂತ್ರ ।
ಸತ್ಯ ಸಂಕಲ್ಪ ಮಹಶಾಂತದಾಂತ ।
ಅತ್ಯಂತ ಮಹಮಹಿಮ ವೇದ ಗೋಚರ ನಿತ್ಯ ।
ತೃಪ್ತ ನೀಮಾಡುವ ಕೃತ್ಯ ತಿಳಿಯದು ಎನಗೆ ।
ಚಿತ್ತಜನೈಯ್ಯ ಅಭಿನವ ಜನಾರ್ದನ ವಿಠಲ ।
ಶಕ್ತ ದಶಾವತಾರ ಕೃತ್ಯ ತೋರಿದನೇನೂ ॥೧॥

## ಮಟ್ಟತಾಳ

ಎಸೆವ ಸುಗಂಧಾಗಿ ಮತ್ಸ್ಯನಾದದೇನೋ ।
ಸುಸುಮು ಕಾಯ ಬಲು ಕಠಿಣಾದದ್ದೇನೋ ।
ಹಸಿವಿ ಇಲ್ಲಗ ದೈವ ಬೇರು ಮೆಲುವರೆ ಸುಮು ।
ನಸರು ತುತಿಸೆ ತುಟಿಮಿಸುಕದ ಬಲು ಸುಲಭಾ ।
ಬೆಸನೆ ಬಾಯಿದೆರದಂಜಿಸುವರೇನೊ ಕಲ್ಪ ।
ವಸುಧಿಜ ದಿಂಬೇಡಿದಾರ್ಥವ ಕೊಡಿಸುವೆ ।
ವಸುಧಿಗೆ ಬಲಿಯ ಯಾಚಿಸಿದ ಬಗೆಯೇನೋ ।
ಋಷಿಕುಲ ಶಿರೋರತುನ ಕೊಡಲಿ ಪಿಡಿದದೇನು ?
ಕುಸುಮನಯನ ಅಭಿನವ ಜನಾರ್ದನ ವಿಠ ।
ಲಸಮು ದೈವವೆ ನಿನಗೊಂದಿಸುವೆ ಪ್ರತಿ-ದಿನ ॥೨॥

## ತ್ರಿವಿಡಿ ತಾಳ

ದುರುಳರ ದುಃಖಸಾಗರದೊಳು ಮುಳುಗಿಸಿ ।
ಪರಿಪರಿ ಬಗೆಯಿಂದ ಮರುಳು ಗೊಳಿಪ ಶಕ್ತ ।
ನರನುನುಜಾನಂತವತರಿಸಿ ಸತಿ ಅನುಜನ
ಬೆರಸಿ ತಲೆಜಡೆಗೈಸಿ ಧರಿಸಿ ಚೀರಾಂಬರ ।
ಚರಿಸಿ ವನವನ ಫಲ ತರಿಸಿ ಸೇವಿಸಿ ಸತಿಯ ।
ದುರುಳ ರಾವಣ ಅಪಹರಿಸೆ ಕ್ಲೇಶಿತನಂತೆ ।
ಮರುತ ದೇವನ ಲಂಕಾ ಪುರಕೆ ಕಳುಹಿ ಸುದ್ಧಿ ।
ತರಿಸಿ ಕಪಿ ಕಟಕವ ನೆರಸಿ ಪರ್ವತಗಳ ।
ಹೊರಸಿ ಅವರ ಕೈಯ್ಯ ಶರಧಿ ಸೇತುವೆ ಬಿಗಿಸಿ ।
ತರಿದು ದುಷ್ಟರನೆಲ್ಲ ಶರಣಗೆ ಪುರವಿತ್ತು ।
ಬೆರಸಿ ಸೀತೆಯೊಡೆಯೋಧ್ಯ ಪುರಕೆ ಮರಳಿ ಬಂದ ।
ಸಿರಿಯ ಹರಿಯೆ ನಿನಗೀಚರಿಯು ಸಲ್ಲುವದೇನೋ ।

ಪರಮ ಕರುಣಿ ಅಭಿನವ ಜನಾರ್ದನ ವಿಠಲಾ |
ಘೋರೆಯೆ ನೀ ಮಾಡಿದ್ದೆ ಮರಿಯಾದಿ ಸರಿ ಇನ್ನು ||೩||

## ಅಟ್ಟತಾಳ

ಭುವನ ದೊಳಗೆ ನೀನೆ ತ್ರಿವಿಧ ಜೀವರ ತ್ರಿಗು |
ಣವ ಮೊನೆಮಾಡಿ ಅವರ ಪುಟ್ಟಿಸಿ ಕೃಷಿ |
ಭವನ ಧನ ಸುತಯುವತಿ ಬಂಧು ಬಳ |
ಗವ ನಿರ್ಮಿಸಿ ಅವರವರಿಗನ್ಯೋನ್ಯ ಸ್ನೇ |
ಹವ ಕೊಟ್ಟು ಭವದೊಳಿಡುವ ಮಹಾಮಹಿಮ ಮಾ |
ನವನಂತೆ ಮಥುರಿಲಿ ಅವತರಿಸಿ ಗೋಕು |
ಲವಸಾರಿ ಕ್ಷೀರ ನವನೀತ ಮೆದ್ದು ಆ
ಯುವತಿ ಯರನ ಕೂಡಿ ನಾನಾ ಲೀಲೆಯ ಮಾಡಿ |
ಹವಣಿಸಿ ಕಂಸನಸುನ ಹೀರಿ ಕಾಲ
ಯವನನ ಮುಚಕುಂದ |
ಅವನಿಪನಿಂದಲಿ ಕೊಲಿಸಿ ದ್ವಾರಕ ಪಟ್ಟ |
ಣವ ಮಾಡಿ ಅಲ್ಲಿಂದ ಅವನಿಜನ ಕೊಂದು
ಯುವತಿಯರನೆ ತಂದು ದಿವಿಜಾಧಿಪನ ಪು |
ರವ ಸಾರಿ ಅಲ್ಲಿಯ ತರುವ ತಂದು ಭೀಷ್ಮಕ |
ಕುವರಿ ಸತ್ಯಭಾಮೆ ನವನವಸ್ತ್ರೀಯರೋ |
ಳವರಂತೆ ಕ್ರೀಡಿಸಿದವನೆ ಮತ್ತೆ ಪಾಂ |
ಡವರ ಬಂಧುತ್ವ ಸಲ್ಲುವದೆ ಈ ಚರಿಯ ವು |
ಪವನ ವಂದಿತ ಅಭಿನವ ಜನಾರ್ದನ ವಿಠಲಾ |
ಅವಿವೇಕರಿಗೆ ಮೋಹಕವ ತೋರಿ ಕೆಡಿಸಿದ ||೪||

### ಆದಿತಾಳ

ರಿತ ಸಂಕಲ್ಪ ರಿತ ಸುಭಾಷ |
ರಿತ ಲೋಕೇಶ ಪಿತ ಸುದುಕೂಲಿ |
ಅತಿ ರೋಹಿತ ಸುಮತಿ ಸಂಪೂರ್ಣ |
ತೃತಿಯ ಪುರದೊಳು ಜನಿತ ನೀನಾಗಿ |
ಅತಿ ದುರುಳರಿಗೆ ಅನೃತ ನೀನಾದಿ
ಹತಗೈಸಿದೆ ಸಂತತಿ ಸಹನೋಡಿ |
ಜಿತ ಕಲಿ ಕ್ರೋಧ ದೃತದವನಂತೆ |
ಅತಿ ಅದ್ಭುತರಾವುತ ನೀನಾಗಿ |
ಮತಿ ಹೀನರ ಕೊಂದತಿ |
ಅತಿ ಶಿವ ಸುಚರಿತ |
ರಿತ ಅಭಿನವ ಜನಾರ್ದನ ವಿಠಲಾ
ರತ ರಾದವರಿಗೆ ಗತಿ ಪ್ರದ ನೀನೆ ॥ ||೫||

### ಜತೆ

ನಿನ್ನ ಮಹಿಮೆ ನೀನೆ ಬಲ್ಲಿ ಅಭಿನವಜನಾ |
ರ್ದನ ವಿಠಲ ಎಣಿಸಾಲೆನ್ನೊಶವಲ್ಲ ವೊ ||೬||



ರಿತ–ತದ್ಧಿತ ಶಬ್ದ (ವಿ) ಋತ ಸಂಸ್ಕೃತ ಶಬ್ದ ಋತ ಎಂದರೆ ಸತ್ಯ
ಕ್ರೋದದೃತ–ಬಹುತ್ಸರ ಕೋಪವುಳ್ಳವನಂತೆ
ಮುಂಗೋಪಿ ಬಹುಸಿಟ್ಟಿನವನಂತೆ

ಶ್ರೀ ವೇಣು ಗೋಪಾಲ ವಿಠಲ

## ಶ್ರೀ ಹರಿಯು ಸೃಷ್ಟ್ಯಾದ್ಯಷ್ಟ ಕರ್ತೃತ್ವ

### ೫೨) ಸುಳಾದಿ

ರಾಗ :- ಭೈರವಿ ಝಂಪೆತಾಳ

ಅಷ್ಟ ಮಹಾ ಮಂತ್ರಗಳು ನಿಷ್ಟೆಯಿಂದಲಿ ಕ್ಷುತು ।
ತೃಷ್ಣೆಗಳ ಕಟ್ಟಿ ಸಂತತ ಮಾಡಲು
ಸ್ಪಷ್ಟವಾಗುವುದೇನೊ ನಿನಗೆ ಜ್ಞಾನವು ಬಲು ।
ಕಷ್ಟವಲ್ಲದೆ ಬರಿದೆ ಮನುಜ ಕೇಳೊ ।
ದೃಷ್ಟಿಯನು ಮುಚ್ಚಿ ಪ್ರತಿಷ್ಟಿಯಲಿ ಅಂಗಗಳು ।
ಬೊಟ್ಟೆಯಿಂದಲಿ ಯೆಷ್ಟು ಮುಟ್ಟಲೇನು ।
ಬೆಟ್ಟವನು ಯೇರಿ ಬಿಸಲೊಳಗೆ ಬಳಲಿಸಿ ದೇಹ ।
ಪುಷ್ಟವನು ತೊರೆದಾರೆ ಯಿಷ್ಟವಾಹದೆ ।
ಅಷ್ಟ ಮದಗಳು ಮುರಿದು ನಷ್ಟವಿಷಯವ ಜರಿದು ।
ಅಷ್ಟುಯಿಷ್ಟೆಂದು ಹರಿ ಕೊಟ್ಟದೆನ್ನದೆ ।
ಮುಟ್ಟಿಮನವನು ತಿಳಿಯೊ ಸೃಷ್ಟಿಯೆಮೊದಲಾದ ।
ಅಷ್ಟ ಕರ್ತೃ ಜಗಕೆ ವಿಷ್ಣು ಯೆಂದೂ ।
ಘಟ್ಟಿ ಭಕುತಿಯಿಂದ ವಿಠಲನ ದಾಸರಲ್ಲಿ
ಯಿಟ್ಟ ಚಿತ್ತಗೆ ದುರಿತ ಮುಟ್ಟುವವೆ ।
ಶ್ರೀಷ್ಟೇಶ ನಮ್ಮ ಸಿರಿ ವೇಣುಗೋಪಾಲ ವರ ।
ಕೊಟ್ಟು ಬಳಿಕ ಕೆಡದು ಅನಂತ ಕಲ್ಪಕ್ಕು । ॥೧॥

## ಝಂಪೆ ತಾಳ

ಸಿರಿದೇವಿ ತುತಿಸಲು ಕೇಳಿ ಆತುಮ ಸೃಷ್ಟಿಯನು ಮಾಡಿದ।
ತರುವಾಯ ಮೊತ್ತದಿ ಜೀವರಿಗೆ ಯಿತ್ತು ಸೂಕ್ಷ್ಮದೇಹ ತೆತ್ತ।
ವರಗಳ ತೆಗೆದು ವಿಸ್ತಾರ ಮಾಡಿ ಸ।
ರ್ವೋತ್ತಮ ಸಿರಿಹರಿ ಸೃಜಿಸಿದ ಬ್ರಹ್ಮಾಂಡ।
ಹತ್ತು ನಾಲಕು ಲೋಕ ಸಪ್ತಸಾಗರ ಪ
ರ್ವತ್ತವೆ ಮೊದಲಾದ ಜಡಸೃಷ್ಟಿಯನು ಮಾಡಿ ತೆತ್ತಿ।
ಸರ ಸಕಲ ಸ್ಥಾನಗಳ ಸೇರಿಸೆ।
ಯಿತ್ತ ಸಕಲ ಜನಕೆ ಸ್ಥೂಲದೇಹವ ನಿತ್ತು।
ತತ್ತಸ್ಥಾನದಲ್ಲಿ ತಾನು ವ್ಯಾಪಿಸಿ ಸಕಲ।
ಕರ್ತೃತ್ವ ಹರಿಯಾಗಿ ಸೃಜಿಸುವ ಸರ್ವರಿಗೆ।
ಮಿತ್ರನು ತಾನಾಗಿ ಮನುಜ ನೊಳಗೆ ನಿಂದು।
ಚಿತ್ರಪುತ್ರ ಗ್ರಾಹಾ (ಗೃಹ) ವೋದ ಕ್ರೀಮಾ-ಪೊತ್ತು।
ಪತ್ನಿಗೆ ಸರ್ವದ್ವಾರದಿ ಕಾರಣನೊ
ಸತ್ಯ ಸಂಕಲ್ಪ ಸಿರಿ ವೇಣುಗೋಪಾಲನ್ನ।
ಸತ್ಯ ಸೃಷ್ಟಿಯ ವಿವರವನು ತಿಳಿದವ ಬಲು ಧನ್ಯ ॥೨॥

## ರೂಪಕ ತಾಳ

ಸಿರಿ ವಿರಂಚಿ ನೊದಲಾದ ತೃಣಾಂತ ಯಿಾ।
ಗಿರಿ ವನಧಿ ಲೋಕಗಳು ವನಜ ಜಾಂಡವ।
ಹರಿ ತಾನು ವ್ಯಾಪಿಸಿ ವೊಬ್ಬರಿಂದಲಿ ವೊಬ್ಬರ ಪಾಲಿಸುವ।
ನರ ನಾಡಿನೊಳಗಿದ್ದು ಕುಟುಂಬ ರಕ್ಷಿಸುವ।
ಧರೆ ಪಕ್ಷಿ ಗಳೊಳಗಿದ್ದು ಪೊಷಿಸುವ।
ನರ ತಿರಿಯಾದಿ ನಾನಾ ಜೀವರಾಶಿಗೆ ಪರಿ।
ಪರಿಯ ಗ್ರಾಸವ ಸೃಜಿಸಿಟ್ಟು ಅವರವರ।

ಅರಿತು ಕಾಲಗಳನ್ನು ವಿಾರಗೊಡೆ ದೇವನು ।
ಮರೆಯಾಗಿ ಸರುವರನು ಪೊರೆವನು ಭಾರಕರ್ತ ।
ಇರುವದು ಯಿನ್ನಿದರೊಳು ಬಲು ಪರಿವಿಧ ।
ಅರಿತ ಮಾನ್ನವನಿಗೆ ಸರಿಯಿಲ್ಲ ಧರೆಯೊಳು ।
ಪರಮ ಕಾರುಣಿಕ ಸಿರಿ ವೇಣುಗೋಪಾಲ ವಿ ।
ಸ್ತರ ಮಹಿಮನೆಂದು ಪೊಗಳುವನೆ ಸುಗುಣ ||೩||

## ತ್ರಿವಿಡಿ ತಾಳ

ತನ್ನ ಯಿಚ್ಛೆಯಲಿಂದ ಜಗವ ಪಾಲಿಸುವ ।
ತನ್ನ ಯಿಚ್ಛೆಯಲಿಂದ ಜಗವ ಸೃಜಿಸುವ ।
ತನ್ನ ಯಿಚ್ಛೆಯಲಿಂದ ಜಗವ ಕೆಡಿಸುವತೆರ ।
ವನ್ನ ಕೇಳಿ ಸಕಲ ಸಜ್ಜನರು ಅನಂತ ಜೀವರ ।
ಮುನ್ನ ಕಾರಣಗಳನ್ನು ಮಾಡಿ ಸಂಹರಿಸುವನು ।
ಯಿನ್ನು ತತುವಗಳನು ಸೂಕ್ಷ್ಮದಿಂದ ।
ಬಣ್ಣ ಬಣ್ಣಗಳನ್ನು ಐದಿಸುವಹರಿ ।
ತನ್ನ ಭಕ್ತರಾದ ಅನಂತ ಶಾತ್ವಿಕರ ।
ಚನ್ನಾಗಿ ಲಯವ ಐದಿಸುವ ಕಡಿಗೆ ।
ಯಿನ್ನಿತು ಸರ್ವರ ಐದಿಸಿ ಆಮೇಲೆ ।
ತನ್ನ ಸುತನ ಚರ್ಮವನ್ನೆ ತೆಗೆದು।
ಸಣ್ಣಾರಂತೆ ಶಿರಕೆ ಸುತ್ತಿ ಕುಣಿಯುವನು ।
ತನ್ನಿತೆ ಸಿರಿ ವ್ಯಾಪಾರವ ಬಿಡಿಸುವ ।
ಘನ್ನ ಸಂಹಾರದೊಳಗೆ ಆಗುವಲಯ ಕ್ರೀಯು ।
ಅನ್ನಂತ ವಿಧಗಳಿಗೆ ಹರಿ ಕಾರಣವೆನ್ನತಾ ಸುಖಿಸುವ ।
ಗೆನ್ನಿತೊ ಸುಖಗಳು ಬಣ್ಣಿಸಲಳವಲ್ಲ ವೊಬ್ಬರಿಂದ ।
ಪನ್ನಗಾದ್ರಿನಿವಾಸ ವೇಣು ಗೋಪಾಲ ಭವ ।
ವನ್ನೆ ಘಾಟಿಸುವನು ಈ ವಿವರವನ್ನೆ ತಿಳಿಸಿ ||೪||

## ಝಂಪೆತಾಳ

ಕಾಲ ದ್ರವ್ಯಾದಿ ಸುಖ ದುಃಖಾದಿ ಜೀವೇಶ ವಿ |
ಶಾಲದ ಕ್ರೀಯದ ತೊಡರು ಯೊಡು ವಚನ |
ಸೀಲ ದುಸ್ಸಿಲು ಕುಲಾಲ ಕ್ರೀಯಾದಿಗಳು |
ಶ್ರೀ ಲೋಲ ನಿತ್ತರೆ ಜ್ಞಾನ ವಹದೊ |
ಆ ಲಕುಮಿಯೊಳಗೆ ತಾನಿದ್ದು ಪ್ರಳಯಾಂತ |
ಕಾಲ ಜ್ಞಾನವ ನಿತ್ತದಾರಂಭಿಸಿ |
ಬಾಲಕಗೆ ಕ್ಷುಧಿಯಾಗೆ ಬಳಲು ವಾಮಿತಕ್ಕೆ |
ಆ ಲಿಂಗ ದೇಹದಿ ಮನೆಮಾಡಿ ಜೀವರಿಗೆ |
ಕಾಲ ನಾಮಕ ಹರಿ ಯುಗ ಪ್ರವರ್ತ |
ಮೇಲು ಕೆಳಗಾಗದರು ಇದರೊಳಗೆ ಯಿನ್ನು ಬಹು |
ಸ್ಥೂಲ ಸೂಕ್ಷ್ಮಂಗಳು ವುಂಟು ಮತ್ತೆ |
ಆಲದೆಲೆಯ ಶಾಯಿ ವೇಣುಗೋಪಾಲ ಶುಭ |
ಆಲಯವ ಸೇರುವಗೆ ಭಕ್ತರಲಿ ತಿಳಿಸುವ ||೫||

## ಧ್ರುವ ತಾಳ

ಸ್ಮೃತಿರಹಿತಿದಲ್ಲಿ ಕರ್ತು ನಾನಹು ದಿನ್ನು |
ಸತಿಪುತ್ರರಿಗೆ ಮಾತ್ರ ದಯ ಮಾಡುವ |
ತೃತಿಯಾಕ್ಷವುಳ್ಳ ಸರ್ವ ಜೀವರಿಗೆ
ಮತಿ ತಿರೋ ಭೂತ ಮಾಡಿ ತಿರುಗಿಸುವ
ಕ್ಷಿತಿಯೊಳು ಊಚ ನೀಚ ಜೀವರಲ್ಲಿ ಸ್ಮೃತಿ-ಗೆ |
ಖತಿ ಸುಖಗಳು ಕೂಡ ನಾವಲ್ಲವೊ |
ತೃತಿಯಾಗಳವಲ್ಲ ದಿತಿ ಸುತರು ಮೊದಲಿಲ್ಲ
ಕೃತ ಭುಜರಲ್ಲವಯ್ಯ ಸ್ವಾತಂತ್ರದಿ |
ಪತಿತ ಪಾವನ ವೇಣು ಗೋಪಾಲರೇಯಾ |
ದ್ಭುತ ಮಹಿಮನ ಲೀಲೆ ತಿಳಿಯೊ ಭಕ್ತಿಯ ಪಡೆಯೊ ||೬||

## ಅಟ್ಟ ತಾಳ

ಸಿರಿದೇವಿ ಮೊದಲಾಗಿ ತೃಣಜೀವ ಕಡೆಯಾಗಿ ಬ
ಹಿ ರಂತರದಲ್ಲಿ ಪ್ರೇರಕನು ಹರಿ |
ಸರುವರ ಮನ ಮೊದಲಾದ ಯಿಂದ್ರಿ (ಯ) ಗಳೊಳು |
ಬೆರತು ಕೊಂಡಿಹ್ಯನು ಹರಿ ತಾನು ಸ್ಥಿರವಕ್ಕು |
ಪರಮ ಪುರುಷನು ತಾನು ವೊಳಗೆ ನಿಯಾಮಕ |
ಹೊರಗೆ ಅಧಿಷ್ಟಾನದಿಂದ ವುಪದೇಶ |
ವರಾವರ ನರಿತು ಮಾತಾಡುತಲಿ ವಿಹರಿಸುವ ವಿ |
ಹರಿಸುವ ನರನ ತಪ್ಪೇನಯ್ಯಾ ಯಿದರ ಮೇಲೆ ತಿಳಿ |
ದರೆ ವೊಂದು ವ್ಯಾಪಾರ ವೊಬ್ಬರ ವಶವಲ್ಲ
ಹರಿ ಸ್ವಾತಂತ್ರಸಿದ್ಧ ವೆನಿಸಿ ಕೊಂಬ
ಗರುವ ದೈವರ ದೈವ ವೇಣು ಗೋಪಾಲ ವಿ |
ಸ್ತರ ಮಾಡಿ ತೋರುವ ಮತ್ತು ವಿಚಾರಿಸೆ ||೭||

## ಆದಿ ತಾಳ

ಖಗರಾಜ ವರದನ್ನ ಜಗದೊಳು ವ್ಯಾಪ್ತನ್ನ |
ಅಗಣಿತ ಬಂಧಕ್ರೀಯ ವಿಗಡ ಮಾಡುವ ತನ್ನ |
ಬಗೆ ಬಗೆ ಶಕುತಿಯಿಂದ ಬಾಧೆ ಬಡಿಸುನ |
ನಗುವ ನೋಡಿ ತಾನು ಹಗಲಿರಳೆನ್ನದೆ |
ಸಿಗನೈಯ್ಯಾ ವೊಬ್ಬರಿಗೆ ಸಿಲುಕಾನು ಸಿಲಕೆ |
ಮಿಗೆ ವೊಬ್ಬ ರಾಧೀನವಲ್ಲ ದುನುಜಾರಿ |
ನಿಗಮ ಗೋಚರ ಸಿರಿ ವೇಣು ಗೋಪಾಲ ರೇಯ ಯಿೂ |
ಬಗೆಯಲಿ ಬಂಧಶಕ್ತನಹುದೂ ತಿಳಿಯ ಬೇಕು ||೮||

## ಜತೆ

ಸಿರಿ ಮೊದಲಾದ ಚೇತನ ಜಡಗಳ ಮೋಕ್ಷ |
ಸಿರಿ ವೇಣು ಗೋಪಾಲನಾಧೀನ ತಿಳಿದವ ಸುಖಿಯೊ : ||೯||

ಶ್ರೀ ವ್ಯಾಸ ವಿಠಲ ವಿರಚಿತ

# ಸೃಷ್ಟಿ ಸುಳಾದಿ

## ೫೮) ಸುಳಾದಿ

ರಾಗ: ಭೈರವಿ ಧ್ರುವ ತಾಳ

ತೊಲಗಿ ಪೋಗುವದಲ್ಲ ತೊಂಡನಾದ ಕಾಲಕ್ಕೂ ।
ಜಲಜ ಸಂಭವನು ಅನಾದಿಯಿಂದ ।
ನೆಲೆಯಾಗಿ ಮಾಡಿದ ಸಂಕಲ್ಪ ವೆಂದಿಗು ।
ತಲೆದೂಗಿದರೆ ತಪ್ಪಲರಿಯ ದಿದಕೊ ।
ಕಲಕಾಲಕೆ ತಿಳಿದು ಕಠಿಣವಾದ ಮೋಹ ।
ಬಲೆಯೊಳು ಸಿಗಬಿದ್ದು ಭ್ರಮಣನಾಗಿ ।
ತಿಲಮಾತುರ ದುಃಖ ಅನುಭವ ವಲ್ಲೆಂದು ।
ಹಲವು ಸೌಖ್ಯಗಳ ಹಂಬಲಿಸಿ ।
ಹಲುಬಿ ಹಲುಬಿ ನಿತ್ಯ ತಳಮಳ ಗೊಂಡರಾಗೆ ।
ಫಲವಿಲ್ಲ ಫಲವಿಲ್ಲ ನಿಜ ವಾಹದು ।
ಬಲು ಮೂಢತನ ವುಳ್ಳ ಬಾಲ ಭಾವದ ಚಂ ।
ಚಲ ಬುದ್ಧಿಯನ್ನೆ ಬಿಟ್ಟು ಚತುರನಾಗಿ ।
ತಿಳಿವ ಮಾರ್ಗವ ಕೇಳು ತೀವ್ರದಿಂದಲಿ ನಿ ।
ರ್ಮಳ ಪರಿಚ್ಛೇದದಲ್ಲಿ ನಿಲ್ಲಿಸಿಹ ಮನವೆ ।
ಬಲವಂತಳಾಗಿದ್ದ ಸಿರಿ ಬೊಮ್ಮ ಜಡಜೀವ ।
ಮಿಳಿತ ವಾಗಿದ್ದ ಜಗವೆ ಚಿದ ಚಿದಾತ್ಮಕ ವೆಂದು ।
ಪೊಳವುತ್ತಲಿಹೆ ಬಲ್ಲ ಜ್ಞಾನಿಗಳಿಗೆ ।
ಜಲಧರ ವರ್ಣ ನಮ್ಮ ವ್ಯಾಸವಿಠಲನಂಘ್ರಿ ।
ಸಿಲಿಸಿ ನಿನ್ನ ಮುಂದೆ ತಿಳಿಯೊ ಯಿದರ ವಿವರ ॥೧॥

## ಮಟ್ಟ ತಾಳ

ದ್ವಿವಿಧಾತ್ಮಕವಾದ ಜಗವು ನಾಲ್ಕುಬಗೆ ।
ವಿವರದಲಿಪ್ಪದು ಪ್ರಾಕೃತ ಅಪ್ರಾಕೃತ ವೈಕೃತ ।
ತ್ರಿವಿಧವು ಅತಿಸ್ಥೂಲ ವೈಕೃತವೆಂದು ಸಂ ।
ಭವಿಸಿಪ್ಪದು ಗಡ ವೊಂದು ಮಾತುರ ಬಿಟ್ಟು ।
ತವಕದಿ ನೀಕ್ಷಿಸಲು ವೊಂದಕೆ ವೊಂದಧಿಕ ।
ದ್ವಿವಿಧವು ಸರಿಯೆನ್ನು ಅನುಮಾನವೆ ಸಲ್ಲ ।
ಪವನಂತರ್ಯಾಮಿ ವ್ಯಾಸ ವಿಠಲ ಯಿಸಿತು ।
ನವ ನವ ಕೃತ್ಯವನ್ನು ಮಾಡುವ ನೆಂದರಿಯೊ ॥೨॥

## ತ್ರಿವಿಡಿ ತಾಳ

ವರಣಾತ್ಮಕವಾದ ವೇದ ದೇಶ ಕಾಲ ।
ಪರಮಾಣು ಪುಂಜ ಪ್ರಕೃತಿಯು ನಾಲ್ಕು ಬಗೆ ।
ಕರಿಸಿ ಕೊಳುತಲಿವೆ ಪ್ರಾಕೃತ ನಾಮದಲಿ ಚ ।
ತುರ ಪದಾರ್ಥಂಗಳು ಚಿರ ಕಾಲದಿ
ಪರಿಮಿತ ತೋರದು ಬ್ರಹ್ಮಾದ್ಯರಿಗೆ ಅ ।
ಪರಿಚ್ಛಿನ್ನ ವಹದು ಆಗಮ ವಾಕ್ಯವೆ ಸಿದ್ಧ ।
ಪರಿಯ ಕೇಳಿದು ವೊಂದರಂತೆ ವೊಂದಲ್ಲ ಮುಂ ।
ದರಿಯೊ ವಿಕಾರವು ಯೆಂದಿಗಾದರು ।
ಚಿರ ಪದಾರ್ಥಂಗಳ ಚಿನ್ಮಯ ಹರಿಯಿಂದ ।
ಪರಿಯಿಂತು ಜಡದ ವಿಚಾರವನ್ನು ।
ಮರಳೆ ಮರಳೆ ಕೇಳು ನಿತ್ಯ ಮುಕ್ತಳು ।
ಭರಿತಳಾಗಿ ಹರಿಯ ಧೇನಿಸುತ್ತ ।
ಸ್ಥಿರವಾಗಿಯಿಪ್ಪಳು ಯಿವುಗಳಲಿ ಸಿದ್ಧ ।
ಅರಿಯಲಾಗದು ಯಿತರ ಜಡಚೇತನಗಳಲ್ಲಿ ।

ಮರೆಯಲಾಗದು ಚತುರ ಬಗೆ ತತಿ ಜಗದೊಳು ।
ಪರಿಯಿಂತು ಪ್ರಕೃತಿಯು ಚೇತನಾ ಚೇತನ ।
ಪರಮ ಪುರುಷ ವ್ಯಾಸ ವಿಠಲನಂಘ್ರಿಗೆ ।
ಎರಗಿ ತಿಳಿಯೋ ಪ್ರಾಕೃತ ವಿಚಾರವ ॥೩॥

## ಅಟ್ಟತಾಳ

ಸಾದಿಗುಣತ್ರಯ ಮಹದ ಅಹಂಕಾರವು ।
ಮೋದದಿಂದಲಿ ಮನ ಗಗನಾದಿ ಪಂಚ ।
ವಾದುದೆ ಸರಿ ಆವರಣ (ಅವರ್ಣ) ಬೇಧದಿಂದಂ ।
ಶೋಧಿಸು ಬುಧರೊಳು ಪ್ರಕೃತಿ ಭಾಗಗಳೆಲ್ಲ ।
ಭೇದಿಸಿಪ್ಪವು ನಿತ್ಯವಹುದು ನಾಶವಿಲ್ಲ ।
ಸಾಧಿಸಿ ತಿಳಿಮುಂದೆ ಚೇತನದ ವಿಚಾರ ।
ವೇದ ಗರ್ಭನಿಂದ ಶನಿಪರಿಯಂತ ವಿ ।
ವಾದವಿಲ್ಲದೆ ದೇವತೆಗಳು ಯಿಪ್ಪರುಯೆನ್ನು ।
ಈ ದೇವತೆಗಳ ಅಂಶಗಳು ವಿಚಾರಿಸೆ ।
ಕ್ರೋಧ ಮೋಹವಿಲ್ಲ ಅಸುರಾವೇಶವಿಲ್ಲ ।
ಸಾಧನಕೆ ಜ್ಞಾನ ತಿರೋಹಿತವಿಲ್ಲ ।
ಆದರಿಸಿ ನೋಡೆ ಪ್ರಾಕೃತ ಜಡ ಚೇತ ।
ನಾದ ಸ್ಥಿತಿಯು ಯಿಂತು ಯಿತರ ಜೀವರುಯಿಲ್ಲ ।
ವಾದವಿಲ್ಲ ವಿಕೃತಯಿದರಂತೆ ಸಿದ್ಧ ವಿ ।
ನೋದದಿಂದ ಜಡವಧಿಕ ಉಭಯದಲ್ಲಿ ।
ಭೋದಮೂರುತಿ ನಮ್ಮ ವ್ಯಾಸವಿಠಲ ಜಗ ।
(ದ್ವಂದ್ವ) ದ್ವೇವನೆಂದು ನಂಬು ಮುಕ್ತಿಲಿಯಿಂಬು ।೪॥

### ಆದಿತಾಳ

ಕೇಳು ವೈಕೃತದೊಳಗೆ ಪಿಂತೆ ಪೇಳಿದ ವೆಲ್ಲ ।
ಸಾಲಾಗಿ ಬಂದಿದೆ ಜಡ ಚೇತನಗಳಲ್ಲಿಗೆ ।
ಶ್ರೀ ಲಕುಮಿ ದೇವಾಂಶಿಗಳು ಮೇಲೆ ತ್ರಿವಿಧ ಜಡವು ।
ಸ್ಥೂಲ ಜಡಜೀವರಲ್ಲಿ ಮಿಳಿತ ವಾಗಿಪ್ಪವು ।
ಹೇಳುವೆ ಯಿದರ ವಿನಹ ಯಿತರ ಮುಕ್ತಿಯೋಗ್ಯರು ।
ಖೂಳಜನರು ನಿತ್ಯಸಂಸಾರಿಗಳು ಯಿಂತು ।
ಆಲಸವಿಲ್ಲದೆ ಸಿದ್ಧವಾಯಿತು ವೈಕೃತ ।
ಲಾಲಿಸು ಜಡಚೇತನ ಯಿವೆ ಸಿದ್ಧಯಿನ್ನೊಂದಿಲ್ಲ ।
ಪಾಲ ಸಾಗರ ಶಾಯಿ ವ್ಯಾಸ ವಿಠಲನಪಾದ ।
ಕೀಲಾಲಜವಿಂತು ಭಜಿ ಕೀಳಯೋಚನೆ ಬಿಡು ॥೫॥

### ಜತೆ

ನಿತ್ಯಾ ನಿತ್ಯಾಗಳಲ್ಲಿ ಸಾರನಿಸ್ಸಾರವ ।
ಅಂತ್ಯದಲಿ ತಿಳಿದು ವ್ಯಾಸವಿಠಲನ್ನ ಭಜಿಸು ॥೬॥



॥ ಶ್ರೀ ಗುರು ಮಧ್ವೇಶ ॥

॥ ಶ್ರೀ ಕೃಷ್ಣಾರ್ಪಣಮಸ್ತು ॥



## ಭೌಕತಿ ದೇಹ ಗರ್ಭ ಉತ್ಪತ್ತಿ ಮತ್ತು ಯಾತನಾ

### ೫೪) ಸುಳಾದಿ

ರಾಗ: ಭೈರವಿ ಧ್ರುವ ತಾಳ

ಆಗರ ಸತಿ ಸುತ ಸೌಖ್ಯ ವೆಂದೆಂಬೊ ದುಃಖ ।
ಸಾಗರದೊಳಗೆ ಮುಳುಗಿ ಇರುಳು ಹಗಲು ।
ಲೊಗರ ಗೋಸುಗ ಚಿಂತಿಸಿ ಕಂಡಕಡೆ
ವಾಗರಕೆ ತಿರುಗಿ ಬೆಂಡಾಗುವೆ ।
ಭೋಗರಹಸ್ಯ ದಿಂದ ಭ್ರಮಣನಾಗಿ ಪ್ರ ।
ಜಾಗರವನ್ನು ಮರೆದು ಮಂದನಾದೆ ।
ಭಾಗಾರ ಮಾಡಿದರು ಸತ್ಸಾಧನ ಧರ್ಮ ।
ಯೋಗಾರಾಧನೆ ಕಾಣೆ ನಕಟಕಟ ।
ರಾಗಿ ರಾಗ ದಿಂದ ನಾನು ನನ್ನದು ಯೆಂಬೊ ।
ಈಗಾರಣ್ಯದ ಮಧ್ಯ ಸುತ್ತುವೆನೊ ।
ಹಾಗರ ಹಾಗದಾಸೆ ಮಲದಿಂದ ಮಾತು ಪೇಳಿ ।
ವೇಗ ರಾಜ್ಯ ಸಂಚರಿಸಿ ಜಠರ ಪೊರೆದೆ ।
ನಾಗರಾಜನ ಪೆಡೆಯ ಛಾಯಾದುಲ್ಲಿದ್ದು ವೈ ।
ಭೋಗದಾಸೆಯ ಬಯಸುವ ಮನುಜ ನಾಹೆ ।
ಸಾಗರ ಶಾಯಿ ನಮ್ಮ ವಿಜಯ ವಿಠಲ ಸ್ವಾಮಿ ।
ಪೂಗಾರರಂತೆ ಮೆಚ್ಚಿಸದೆ ಭವಸಾರ್ದೆ ।೧॥

#### ಮಟ್ಟತಾಳ

ಸ್ವರ್ಗ ನರಕ ಭೂಮಿ ಚರಿಸಿದೆ ಸರ್ವದಲ್ಲಿ ।
ಮುಗ್ಗಿ ಮುಂಗಾಣದೆ ನಾನಾ ಪೊಟ್ಟೆಯಲ್ಲಿ ।
ವೆಗ್ಗಳಿಸಿ ಪೊಕ್ಕ ವ್ಯಥೆ ಪಟ್ಟು ಮತ್ತೆ ।

ನುಗ್ಗಾದೆನೊ ಬಲು ದೇಹವನೆ ಧರಿಸಿ ।
ತಗ್ಗಿ ಪೋಗಲಿಲ್ಲ ತಗಲಿದ ಈ ಕರ್ಮ ।
ಸುಗ್ಗಿಯೊಳಗೆ ಬಿದ್ದು ಸುಖ ದುಃಖವನುಂಬೆ ।
ಹಿಗ್ಗುವೆನೊ ವಿಷಯಾ ಹಿತವೆಂದು ನಂಬಿ ।
ಮುಗ್ಗಲೊಳಗೆಯಿದ್ದ ಮಾರಿಯ ಕಾಣದಲೆ ।
ಸ್ವರ್ಗನರಕ ಭೂಮಿ ಚರಿಸಿದೆ ಕರುಣಾದೆ (ಕಾಣದೆ)
ಕಗ್ಗತ್ತಲೆ ಮಧ್ಯಸಿಲ್ಕಿ ಬಳಲುತಿಪ್ಪೆ ।
ಅಗ್ಗಳಿಕಾದೈವ ವಿಜಯ ವಿಠಲಯೆನ್ನ ।
ಯೋಗ್ಯತಿ ಬಲ್ಲವನೆ ಭಿನ್ನಪವನು ಕೇಳು ॥೨॥

## ತ್ರಿವಿಡಿ ತಾಳ

ಗಗನಾದಿಂದಲಿ ಮೇಘಪ್ರವೇಶವನು ಮಾಡಿ ।
ಮಿಗೆವರುಷದ್ವಾರದಲಿ ಧರಿಗೆ ಯಿಳಿದು ।
ಬಗೆ ಬಗೆ ಫಲದಲ್ಲಿ ಪೊಕ್ಕುಪಕ್ವವಾಗಿ ।
ಹಗಲಿರಳು ಬಳಲಿ ಅನ್ನಮುಖದಿಂದ ।
ವಿಗಡ ಮನುಜಾನಲ್ಲಿ ಪ್ರವಿಷ್ಟನಾಗಿದ್ದು ।
ಮಗುಳೆ ರೇತೋ ಕಣರೂಪದಿಂದ ।
ಜಿಗಳಿ ಮೂತ್ರದ್ವಾರ ಪೊಕ್ಕೆನಯ್ಯಾ ನಕಟ ।
ತ್ರಿಗುಣದಲಿ ಬೆಳೆವಾ ಪರಿಯೇನೆಂಬೆ ।
ರಗಳೆ ವೊಂದುದಿವಸ ತ್ರಿರಾತ್ರಿಗೆಕಲಿಲವು ।
ಬಗೆ ಪಂಚರಾತ್ರಿಗೆ ಬೊಬ್ಬುಳಿಯಂತೆ ।
ಸೊಗಡು ದಶರಾತ್ರಿಗೆ ಪೇಶಾಂಡವು ।
ತಿಂಗಳಿಗೆ ಶಿರಸು ಬಾಹುವಿಗ್ರಹರೂಪ ।
ಮುಗಿದ ತರುವಾಯ ಮೂರನೆತಿಂಗಳಿಗೆ ರೋಮ ।
ಉಗರು ಚರ್ಮಸ್ಥಿ ಸಿರ್ಮಾಣ ಛಿದ್ರ ।
ಚಿಗಿವ ಧಾತುಗಳು ನಾಲ್ಕನೆ ತಿಂಗಳಿಗೆನ್ನಿ ।

ದುಗುಡವಾಹದು ಐದನೆ ಮಾಸಕ್ಕೆ ಹಸಿವಿ ।
ತ್ರಿಗುಣಾತೀತ ನಮ್ಮ ವಿಜಯ ವಿಠಲರೇಯ ।
ಯುಗಳ ಭಾವದಿಂದಲಿ ಈ ಪರಿ ಚರಿಸುವನು

**ಅಟ್ಟತಾಳ**

ಆರನೆ ಮಾಸಕ್ಕೆ ವಾಮಭಾಗದಿಂದ ।
ಭೋರನೆ ದಕ್ಷಣ ಭಾಗಕ್ಕೆ ಆವರ್ತ ।
ಈ ರೀತಿಯಲಿ ಶ್ರಮ ಜರಾಯು ಜನಾಹ ।
ಮೇರೆಯಿಲ್ಲದೆ ಸಪ್ತಮಾಸಕ್ಕೆ ಜೀವಕ್ಕೆ ।
ಪೂರ್ವ ಜನ್ಮದ ಕರ್ಮ ಸ್ಮರಣೆ ವುಂಟು ।
ಭಾರಿ ಭಾರಿಗೆ ನೆನಿಸುವ ಸುಖದುಃಖ ।
ಪಾರಗಾಣದಲಿಪ್ಪ ತಿಂಗಳೆಂಟಕ್ಕೆ ಕಟು ।
ಕ್ಷಾರ ತೀಕ್ಷ್ಣ ಉಷ್ಣ ಸೀತಾಮ್ಲರಸದಲ್ಲಿ ವಿ ।
ಕಾರ ಉಲ್ಬಣ ಯಾತನೆ ಬಾಧೆಯಾಗೋದು ।
ಭೋರನೆ ಒಂಬತ್ತು ತಿಂಗಳಿಗೆ ಕ್ರಿಮಿ ।
ಕ್ರೂರ ಕ್ಷತದಿಂದ ಸರ್ವಾಂಗ ಭಗ್ನದಿ ।
ಮೋರೆ ಕೆಳಗಾಗಿ ಮೊಳಕಾಲ ಸಂದಿಲಿ ।
ಘೋರ ನರಕ ಪೋಲುವ ಗರ್ಭದಲಿ ಬಿದ್ದು ।
ನಾರುವ ದುರ್ಗಂಧ ಸನ್ನಿರುದ್ಧವಾಗಿ ।
ದ್ವಾರಾಭಿ ಮುಖದಿಂದ ಅಳಲಿ ಬಳಲುತ ।
ಶಾರೀರ ಮುರಿದು ಮುಷ್ಟಿಗೆಮಾಡಿ ಕಟ್ಟಿದ ।
ಚೋರ ನಂದದಿ ಯಿಪ್ಪ ಸಿರ್ಭಂದ ತೊಲಗದು ।
ಆರಿಗೆ ದೂರಲಿ ಆರು ಬಿಡಿಪರಿಲ್ಲ ।
ಆರಿಂದ ನಿರ್ವಹಿಸಿ ಆರು ಚಿಂತಿಪರಿಲ್ಲ ।
ಆರು ಯೆನಗೆ ಗತಿ ಕಾಣೆನೊ ಶೌರಿ ಮು ।
ರಾರಿ ಶ್ರೀ ವಿಜಯ ವಿಠಲರೆಯ ।
ತಾರಿ ಬೆಂಡಾಗುವ ತ್ರೈತಾಪ ವೋಡಿಸೊ

## ಆದಿ ತಾಳ

ಸೂತಿಕ ಘಾಳಿಯಿಂದ ಹೊಡಿಸಿ ಕೊಂಡು ಬಲು ।
ಭೀತಿ ಗಾತುರನಾಗಿ ಸಂಕಟ ಬಟ್ಟು ಅಧೋ !
ಪೂತಿ ಗಂಧದಿಂದ ಪೊರಟು ಪ್ರಳಾಪದಿಂದ ।
ಭೂತಳದೊಳು ಬಿದ್ದು ಹೊರಳುವೆನೊ ।
ವಾತ ಶ್ಲೈತ್ಯ ಪೈತ್ಯಾ ಧಾತುವಿನಲ್ಲಿ ಹೀನ ।
ಆತುರ ವಂತನಾಗಿ ಭವದಲ್ಲಿ ಮುಣಗಿ ಸರ್ವ ।
ಜಾತಿಯಲ್ಲಿ ಪುಟ್ಟಿಸುವಿ ಈ ಪ್ರಕಾರದಿ ಗರ್ಭ ।
ಯಾತನೆ ಪೇಳಲಳವೆ ಅಹೊ ಅಹೊ ಅಯ್ಯೋ ।
ಪಾತಕ ಮತಿ ಯಿಂದ ಪುಣ್ಯವ ಕಳಕೊಂಡು ।
ಜ್ಞಾತನುಷ್ಠಾನ ಮರದೆ ಮಮತೆಯಿಂದ ।
ಆತುಮಾ ಅಹಂ ಮಮತೆಯಲ್ಲಿ ಸಂಚರಿಸಿಕಾಲಾ ।
ತೀತನಾದೆ ಸ್ವಧರ್ಮ ತೊರೆದು ।
ಮಾತು ಲಾಲಿಸಿ ಕೇಳೊ ಹೃದಯಾಕಾಶನಾಮಕನೆ ।
ಮಾತುರ ಕಾಲನಾದರೆ ಪೋತತನ ಧರಿಸಿ ಈ ।
ಮಾತೆ ಗರ್ಭದಲ್ಲಿ ಒಲ್ಲೆ ಒಲ್ಲೇ ।
ಭೂತಾದಿ ವರ್ತಮಾನ ಬಲ್ಲ ವೈಕುಂಠ ರಮಣ ।
ಭೌತಿಕ ಕಾಯವೆ ಬಿಡಿಸು ನಿನ್ನ ನಾಮವೆ ನುಡಿಸು ।
ಜೋತಿರ್ಮಯ ಮೂರ್ತಿ ವಿಜಯ ವಿಠಲರೇಯ ।
ಕೌತುಕವಾಗಿದೆ ನಿನ್ನ ವ್ಯಾಪಾರ ನಿತ್ಯ ॥೩॥

## ಜತೆ

ಪುಟ್ಟಿಸುವದು ಬಿಡಿಸೊ ಪೂರ್ಣ ಕರುಣಾಂಬುಧೆ ।
ವಿಠಲ ವಿಜಯ ವಿಠಲ ಮತ್ಪ್ರಿಯಾ ॥ ॥

## ಶ್ರೀ ವಿಜಯ ವಿಠಲ ಕೃತ

## ೫೫) ಸುಳಾದಿ

ರಾಗ :- ಮಾರವಿ ಧ್ರುವತಾಳ

ಹತ್ತೈದು ವಿಂಶತಿ ಮ್ಯಾಲೆರಡು ಸಾವಿರ ।
ಮತ್ತೆ ನೂರೊಂದುನಾಡಿ ದೇಹದೊಳಗೆ ।
ತಥ್ಥಳಿಸುತಿಪ್ಪದು ಬಲಸವ್ಯವಿಡಿದು ಯಿ ।
ನ್ನಿತ್ತು ಕೇಳುವದು ನಾಡಿಗಳಶಾಖಾ ।
ಹತ್ತು ಹತ್ತೊಂದು ಮುಖ್ಯನಾಡಿಯು ನೂರರಿಂದ ।
ಬಿತ್ತರಿಸೆ ಗುಣಿಸೆ ಅಯುತನೂರು ।
ಸತ್ಯನಾಯಿತು ನೋಡಿಯಿದಕೆ ವಿವರವುಂಟು ।
ಉತ್ತುಮ ಗುಣದವರು ತಿಳಿಯಬೇಕು ।
ಹತ್ತು ಹತ್ತು ಗುಣಿಸಿ ಅದರನ್ನು ಅಷ್ಟರಿಂದ ।
ಜತ್ತಾಗಿ ಹೆಚ್ಚಿಸಲು ಸಾವಿರ ವಹುದು ।
ಇತ್ತ ಮುಂದಕೆ ನೂರು ಯಿಟ್ಟುಕೊಂಡು ಒಂ
ಭತ್ತರಿಂದಲಿ ಗುಣಿಸೆ ಒಂಭತ್ತುನೂರು ।
ಸುತ್ತದಿರಿ ಯಿನ್ನು ತ್ರಯನೂರು ಎಂಟರಿಂದ ।
ಚಿತ್ತದಲ್ಲಿ ಗುಣಿಸೆ ಆದಾದಿಕೊ ಯಿ ।
ಪ್ಪತ್ತುನಾಲ್ಕುನೂರು ಆ ತರುವಾಯ ಒಂ ।
ಭತ್ತು ಸಾವಿರದ ಆರುನೂರು ।
ಅರ್ಥಿಯಿಂದಲೆ ಯಿದೆ ಅರಾರಿಂದ ಗುಣಿಸೆ ।
ಹತ್ತೈದು ಯೇಳು ಸಾವಿರಾರುನೂರು ।
ಯಿತ್ತಂಡದಿಂದ ಪೂರ್ವೋತ್ತರ ನೋಡೆ ಅರ ।
ವತ್ತೊಂದು ಸಾವಿರೆಂಟೊಂದು ನೂರು ।
ಮತ್ತೆಯಿದರ ಕೆಳಗೆ ಮ್ಯಾಲಿನ ಅಯುತನೂರು ।

ಇತ್ತರೆ ಸಪ್ತೆರಡು ಅಯುತನಾಡಿಯು ।
ಸತ್ಯವೆಸರಿಯಿದಕೆ ನೂರೊಂದು ಮುಖ್ಯನಾಡಿ ।
ತತ್ತ್ವಳ ಗೊಳ್ಳದಲೆ ಕೂಡಿಸಲು ।
ಮತ್ತೆ ವುಳ್ಳದಕೆ ಹೆಚ್ಚು ವಾದಿಷ್ಟೆ ನಾಡಿಗಳು ।
ಮರ್ತ್ಯಲೋಕದ ಜನರು ಗುಣಿಸಿದರು ।
ಅತ್ಯಂತ ಮಹಿಮಾ ನಮ್ಮ ವಿಜಯ ವಿಠಲರೇಯ ।
ಸ್ತೋತ್ರ ಮಾಡಿದವರ ಮನಕೆ (ಇ)ಯಿಂತು ತಿಳಿವುವಾ ॥೧॥

## ಮಟ್ಟ ತಾಳ

ಇನಿತು ನಾಡಿಯ ಶಾಖ ಭೇದವನ್ನೆ ತಿಳಿದು ।
ಗುಣಿಸುವದು ನಿತ್ಯ ಸಕಲರು ಮನದಲ್ಲಿ ।
ಇನಿತರೊಳಗೆ ಮುಖ್ಯ ನೂರೊಂದು ನಾಡಿ ।
ಅನಿತರ ಮಧ್ಯದಲಿ ಕೇವಲ ಪೆಸರಾಗಿ ।
ಮಿನುಗುತಿಪ್ಪವು ದ್ವಾದಶನಾಡಿಗಳಲ್ಲಿ ।
ಕೊನೆ ಮೊದಲೊಂದಾಗಿ ನವದ್ವಾರವೆ ವಿಡಿದು ।
ಘನನಾಡಿ ವೊಂದೆ ಅಡಿ ಅಂಬರವ್ಯಾಪ್ತಿ ।
ತನವು ವ್ಯಾಪಿಸಿ ಕೊಂಡದು ವಂದುನಾಡಿ ।
ಯನು ತಿಳಿವದು ವಂದೆನಾಡಿಯು ವಂದೇ ತಾ ।
ವಿನಲಿ ಪೊಂದಿಪ್ಪದು ತಿಳಿದರೆ ಬಲು ಸುಲಭ ।
ಕ್ಷಣ ಬಿಡದಲೆ ಕಾವ ವಿಜಯವಿಠಲರೇಯ ।
ಚಿನುಮಯನಾಗಿ ಕಾಣಿಸುವನು ವೊಂದರಲ್ಲಿ ॥೨॥

## ತ್ರಿವಿಡಿ ತಾಳ

ಒಂದೊಂದು ನಾಡಿಯಲಿ ವೊಂದೊಂದು ನದಿಗಳು ।
ಕುಂದದೆ ವುಂಟು ಹನ್ನೆರಡರಲ್ಲಿ ।
ಮಂದಾಕಿನಿ ೧ ಇಡಾ ನಾಡಿಯಲ್ಲಿ ಭಾನು ।

ನಂದನೆ ೨ ಪಿಂಗಳಾನಾಡಿಯಲ್ಲಿ ।
೩ ಗಾಂಧಾರಿಯಲಿ ವುಂಟು ಕಾವೇರಿ ೪ ಹಸ್ತಿನಿಗೆ ।
ಶಿಂಧು ನದಿಯೆನ್ನಿ ತಾಮ್ರಪರ್ಣಿ ।
ಸಂದಿದೆ ಬಹು ಬಗೆ ೫ ಲಂಬುಶಿನಾಡಿಯಲ್ಲಿ ।
ಛಂದುಳ್ಳ ಗೋಮತಿ ೬ ಮಧ್ಯನಾಡಿಯಲ್ಲಿ ।
ಯಿಂದ ಗಂಡಿಕೆ ನೋಡಿ ೭ ಸರಸ್ವತಿ ನಾಡಿಯಲ್ಲಿ ।
೮ ನಂದ ಕೃಷ್ಣವೇಣಿ ೯ ಕುಹದಿ ಸೋಮ ।
ನಂದನೆ ತಪತಿ ೧೦ ಶಂಖಿನಿ ನಾಡಿಯಿಲ್ಲಿ ವಾಸ ।
ವೆಂದು ತಿಳಿಯೊ ಗೋದೆ ೧೧ ವಾರುಣಿ ನಾಡಿಯಲ್ಲಿ ।
ಅಂದವಾದ ೧೨ ಪೂರ್ಣ ಪೂರ್ಣ ಪಯಶ್ವಿನಿ ।
ಯಿಂದ ಪುಟ್ಟಿಪದು ಅಲ್ಲಿಗಲ್ಲಿ ।
ಪೊಂದಿಕೊಂಡಿಪ್ಪವು ಜ್ಞಾನಿಗಳು ಸ್ತುತಿಸಿ ।
ಮಿಂದು ಪರಮ ಪದವಿಯ ಪಡಕೊಂಬುವರೊ ।
ವೃಂದಾರಕವಂದ್ಯ ವಿಜಯ ವಿಠಲರೇಯನ ।
ಸಂದರುಶನ ಮಾಳ್ಪ ಮಾಹತ್ಮ ಬಲ್ಲನು ॥೩॥

## ಅಟ್ಟತಾಳ

ಮಹತತ್ವಾತ್ಮಕ ಬಲಭಾಗದನಾಡಿ ।
ಮಹದೇವ ತತ್ವಾತ್ಮಕ ಎಡಗಡೆನಾಡಿ ।
ಇಹದನು ನೋಡಿ ಯಿವಕಿವಕೆ ಮಾನಿಗಳುಂಟು ।
ಆ ಹಿರಣ್ಯೋದರ ವಾಯು ಯಿವರ ಪತ್ನಿ ।
ಮಹಕೇಶ ಸರ್ಪ ಖಗೇಶ್ವರ ತರುವಾಯ ।
ರೋಹಿಣಿ ನೀಲ ಮೊದಲಾದ ಸತಿಯರು ।
ಶ್ರೀಹರಿಗೆ ಹೆಂಡರು ಕಾಣೊ ತಿಳಿವದು ।
ಗುಹನ ಜವನಿ ವಾರುಣಿ ಸೌಪರಣಿಯು ।

ಮೋಹದಿಂದಲಿ ನಾಡಿ ನಾಡಿಯಲಿಪ್ಪರು ।
ರಹಸ್ಯವಿದು ಬಿಚ್ಚಿ ಬಿಸಾಟದಿರು ।
ಕುಹಕರಿಗೆ ಪೇಳಿದರೆ ಫಲಿಸದು ।
ಮೋಹನ ಮೂರುತಿ ನಮ್ಮ ವಿಜಯ ವಿಠಲರೇಯ ।
ಇಹನೊ ಜ್ಞಾನಾನಂದ ಮಯನಾಗಿ ॥೪॥

ಆದಿ ತಾಳ

ಪೊಕ್ಕಳ ಭಾಗದಿಂದ ನಾಡಿಗಳೊಂದೊಂದು ।
ದಿಕ್ಕಿಗೆ ಪೋಗಿಪ್ಪವು ಶೋದಿಸಿ ನೋಡುವದು ।
ಮುಕ್ಕಣನುತ ವಾಯು ನಿತ್ಯ ಜೀವಿಗಳ ।
ತಕ್ಕ ವ್ಯಾಪಾರವ ಮಾಡುವ ಬಿಡದೆ ದೇ ।
ವಕ್ಕಳ ಕೂಡ ತಾನೆ ಹರಿಪ್ರೇರಣೆಯಿಂದ ।
ಭಕ್ತಿ ಭುಕ್ತಿಯ ಕೊಡುವ ವಂದನೇಕ ರೂಪನಾಗಿ ।
ಸಿಕ್ಕಗೊಡನು ತನ್ನ ಭಕ್ತರ ನರಕದಲ್ಲಿ ।
ರಕ್ಕಸ ಗಣಕೆ ಕುವೃತ್ತಿಯ ಪ್ರೇರಿಸಿ ।
ರಕ್ಕಸ ಗತಿಯಲ್ಲಿ ಸೇರಿಸುವ ಹರುಷದಲ್ಲಿ ।
ಸೊಕ್ಕಿದವರ ಗಂಡ ವಿಜಯ ವಿಠಲರೇಯ ।
ದಕ್ಕುವ ಯಿದರಂತೆ ಥೇನಿಪಸುಜನರಿಗೆ ॥೫॥

ಜತೆ

ನಾಡಿ ಪ್ರಕರಣವನು ತಿಳಿದು ಕೊಂಡಾಡಲು ।
ಗೂಡಿನೊಳಗಿದ್ದಂಥ (ತೆ) ವಿಜಯ ವಿಠಲ ಒಲಿವ (ನೀಲ್ವ) ॥೬॥

—★—

## ಭೌತಿಕ ದೇಹ

### ೫೬) ಸುಳಾದಿ

ರಾಗ :- ಶಂಕರಾಭರಣ ಧ್ರುವ

ಭೌತಿಕಾತ್ಮದೇಹ ಬಹುಜನ್ಮ ಕರ್ಮದಿಂದ ।
ಭೂತಳದೊಳು ಬಂದಸ್ಥಿತಿಯ ನೋಡು ।
ಚಾತುರ್ಭಾಗ ಪ್ರಥವಿ ತ್ರಿಭಾಗವಾರಿ ವಂದು ।
ಜೋತಿರ್ಭಾಗದಿಂದ ಸುತ್ತುತಿದಕೊ ।
ಧಾತು ಸಪ್ತಗಳುಂಟು ಪಂಚಕೋಶಾತ್ಮಕ ಈ ।
ಗಾತುರ ಸಪ್ತೆರಡು ಸಾವಿರ ನಾಡಿ ।
ಮಾತ್ರಾಸ್ಪರ್ಶ ಕರ್ಮ ಜ್ಞಾನೇಂದ್ರಿಯ ಕಾಲಯೋಗ ।
ವಾತ ಗಗನ ವ್ಯಾಪ್ತಿಯಿಂದ ಸಿದ್ಧ ।
ಶ್ವೇತ ರಕುತನೀಲ ವರ್ಣಗುಣತ್ರಯ ।
ಶೀತೋಷ್ಣ ಸೂಕ್ಷ್ಮಸ್ಥೂಲ ಜ್ಞಾನಾ ಜ್ಞಾನಾ ।
ತಾತ್ವಿಕ ಮೊದಲಾವಾದ ದೇವತೆಗಳಿಪ್ಪರು ।
ಸಾತ್ವಿಕ ರಾಜಸ ತಾಮಸದೇಹದಿ ।
ಪೂತುರೆ ವೊಂದೊಂದು ರೂಪಾಂತರ ಆ ।
ಧ್ಯಾತುವು ಅಧಿದೈವ ಅಧಿಭೌತಿಕ ।
ಖ್ಯಾತರಾಗಿ ವೊಂದಂಗವ ಧರಿಸಿ ಪ್ರ ।
ಜ್ಯೋತಿಯಂತೆ ಪೊಳೆವುತ ತ್ರಿಸ್ಥಾನದಿ ।
ಆತುಮಕರಣ ಭೂತ ಪ್ರವೇಶಿಸಿಕೊಂಡು ।
ವ್ರಾತ ಕರ್ಮಗಳೆಲ್ಲ ಮಾಡಿಸುವರೊ ।
ಧಾತ ವಾತರೊಂದಾಗಿ ರುದ್ರಗೆರುದ್ರ ಪುರು ।
ಹೂತ ಈ ಕ್ರಮದಿಂದ ಗ್ರಹಿಸು ಗುಣಿಸು ।
ಭೂತಾದಿ ಹತ್ತೊಂಭತು ತತ್ವಂಗಳು ವಿ ।

ಜಾತಿ ಪೆಸರಿನಲ್ಲಿ ಕರೆಸುತಿವಕೋ ।
ಪ್ರಾತಃ ಕಾಲಾದಿವಿಡಿದು ದಿನಾಂತ ಕಾಲಕ್ಕೆ ।
ಈ ತೆರದಲಿ ತಿಳಿ ನಾಡಿಯೊಳಗೆ ।
ಶ್ರೌತ ನಿರ್ಣಯದಿಂದ ನಿಶ್ಚಯಮಾಡಿ ನಿ ।
ರ್ಭೀತನಾಗೆಲೊ ಮನುಜಾ ಬದ್ಧದಿಂದ ।
ತಾತ ತುಂಗ ಮಹಿಮ ವಿಜಯ ವಿಠಲರೇಯ ।
ಪ್ರೀತನಾಗುವ ಸತತಯಿನಿತು ಕೊಂಡಾಡಲು ॥೧॥

## ಮಟ್ಟತಾಳ

ಏಕೋತ್ತರಶತನಾಡಿಗಳು ಮುಖ್ಯ ।
ಲೋಕಾಂತರದ್ವಯಕೆ ಪೋಪ ಪೋಗಿಬರುವ ।
ಸಾಕಾರ (ಸೌಕರ್ಯ) ಮಾರ್ಗಸಿದ್ಧವಾಗಿದೆ ನೋಡು ।
ಈ ಕಾಯದೊಳಗೆ ಪಂಚ ಪ್ರಬೇಧ ವಿ ।
ವೇಕ ಮತಿಗಳಿಗೆ ತ್ರಿವಿಧ ತೋರುತಲಿದೆ ।
ಏಕ ದ್ವಿತಿಯ ತೃತಿಯ ನಾಲ್ಕು (೧+೨+೩=೬×೪=೨೪) ತತ್ವಾತ್ಮಕ ನಾಡಿಗಳಿನ್ನಿ
ವಾಕು ಮೊದಲು ಮಾಡಿ ಯಿಂದ್ರಿಯಂಗಳಿಗೆ ।
ಆಕಾರವಾಗಿ ಪೊಳೆವುತಲಿವೆ ಭೌ ।
ತೀಕ ಸಂಬಂಧದ ತತ್ವ ಭಾಗ ಪ್ರಚುರ ।
ಪ್ರಾಕೃತ ಬಾಹ್ಯದಲಿ ಸುತ್ತಿಕೊಂಡಿದೆ ನಿತ್ಯ ।
ಶಾಖಾನಾಡಿಗಳನೇಕ ವಾಗಿವೆ ಬಲ ಎಡಭಾಗವೆ ವಿಡಿದು ।
ಶ್ರೀಕಾಂತ ನಮ್ಮ ವಿಜಯ ವಿಠಲರೇಯ ।
ನಾಕ ಜನರೊಡನೆ ವಾಸವಾಗಿಯಿಪ್ಪ ॥೨॥

## ತ್ರಿವಿಡಿ ತಾಳ

ಪ್ರಧಾನ ನಾಡಿಗಳು ಐದು ಅದರ ಮುಸುಕಿ ।
ಭೇದ ನಾಡಿಗಳು ಸಪ್ತೆರಡು ಸಹಸ್ರ ।

ಆಧಾರವಾಗಿವೆ ಶರೀರದಲಿ ಮಹ |
ಬೋಧ ಮಾನವರೆಲ್ಲ ಗ್ರಹಿಸಬೇಕು |
ಈ ದೇಹದಲಿದ್ದ ನವಕೋಟಿ ಛಿದ್ರಗಳು |
ಸಾದಿ ವಿಡಿದುವುಂಟು ನಾಡಿಗಳಲ್ಲಿ |
ಶೋಧಿಸಿ ನೋಡಿದರು ವೊಂದೊಂದರಲಿ ರಂಧ್ರ |
ಪಾದಾದಿ ವಿಡಿದು ಮಸ್ತಕತನಕ |
ಐದ್ಯೆವತ್ತು ವ್ಯಾಲೆ ಭಾವಿಸು ಅಹರ್ನಿಶಿ |
ವೋದಧ್ಯಾನದಿಂದ ಗುಣಿಸು ಯೆಣಿಸು |
ಹಾದಿಯಾಗುವದು ಇಹದಲ್ಲಿ ಸಾಧನಕೆ ಪಾ |
ಪೋದಧಿ ಬತ್ತುವದು ತಡವಿಲ್ಲದೆ |
ಸಾಧಾರಣವಲ್ಲ ಕಂಡವರಿಗೆ ಪ್ರಾಪ್ತಿ |
ವೈದೀಕ ಬಲ್ಲವಗೆ ಬಲುಸುಲಭವೊ |
ಮೇಧ ನಾನಾದಾನ ವ್ರತ ಧರ್ಮಸರ್ವದ |
ಮೇದಿನಿಯೊಳು ಬಲುನೆಸಗಲೇನು |
ಸಾಧನ ವಾಗೋ (ಗ) ದು ಅಪರೋಕ್ಷಕೆ ಜ |
ನ್ಮಾದಿಗೆ ಯಿದು ಕಾರಣ ವಹುದು |
ಆದಿ ಮೂರುತಿ ನಮ್ಮ ವಿಜಯ ವಿಠಲನ್ನ ಪ್ರ |
ಸಾದ ವಾಗದೆ ಯಿದು ದೊರಕಬಲ್ಲದೆ ಮರುಳೆ ||೩||

## ಅಟ್ಟ ತಾಳ

ಮನಸುತ್ರಿವಿಧವೆನ್ನು ಯಿದೆ ಅನಂತವಾಗಿ |
ಅಣುಮಾತ್ರವಾದರು ವ್ಯಾಪಿಸಿ ಕೊಂಡಿದೆ ಅಂಶ ಅಂಶಗಳಿಂದ |
ಕ್ಷಣ ಪ್ರತಿಕ್ಷಣಕೆ ಪಾಪಪುಣ್ಯವಮಾಳ್ಪದು |
ದನುಜಾರಮರಲ್ಲಿ ಅಭಿಮಾನಿಗಳೆನ್ನು |
ಅನಿತರೊಳಗೆ ಕೇಳಿ ತಿಳಿವ ಬಗೆಯುಂಟು |

ಅನುಮಾನ ಯಿದರೆಲ್ಲ ಅಂಡಾಂತರ ಬಾಹ್ಯ ।
ಮನಸು ಸೂಕ್ಷ್ಮಸ್ಥೂಲ ಪೂರ್ವೋತ್ತರ ಕ್ರಮು ।
ಅನಿಮಿಷಗಣ ತಾರತಮ್ಯ ಸಾಂಶರು ।
ಕ್ಷಣಲವ ತೃಟಿಕಾಲ ಕಾಷ್ಟನಿಮಿಷ ಮುಹೂರ್ತ ।
ದಿನ ವಸ್ತ ಮಾನವ ಪಕ್ಷ ಮಾಸ ಋತು ಅ ।
ಯನ ಸಂವತ್ಸರ ವತ್ಸರ ಯಿಳಾ ಪರಿ ।
ಯೋನಿಗಳ ಬೇದ ತತ್ತದ್ಧೇಹಗತಿ ।
ಇನಿತು ಯುಗ ಮಹಯುಗ ಮತ್ತೆ ಚತುರ್ದಶ ।
ಮನುದಿನ ಬ್ರಹ್ಮಾಯು ಪರಿಮಿತದ ಕಾಲ ।
ಘನವಾಗಿ ತಿಳಿವದು ಕಲ್ಪಭೇದಗಳಿಂತು ।
ಎಣಿಸು ಈ ಕರಿ ಪರ್ವ ಸಾಧನ ಮಾಡೋದು ।
ಜನುಮ ಜನುಮಾಂತರ ಸಂಸ್ಕಾರ ಸಂಸ್ಕಾರ ।
ಮನವೆ ಕಾರಣವೆನ್ನು ಯಿದರಲಿಪ್ಪ ದು ।
ರ್ಜನ ಸಜ್ಜನರನುಗಾಲಾ ।
ಹೂಣಿಕೆ (ಹೊಣಿಕೆ) ಯಿಂದಲಿ ಮಾಡಿಸವರು ಯೇನೆಂಟೆ ।
ತನುವಿನ ವಿಚಾರ ಬಹುಜನ ಕಾಶ್ರಯ ।
ಲನಿಮಿತ್ಯ ಬಂಧು ಶ್ರೀ ವಿಜಯ ವಿಠಲರೇಯ ।
ಕುಣಿಸಿ ನೋಡುವ ಸರ್ವ ಜೀವರೊಳಗೆ ಯಿದ್ದು ।

ಆದಿತಾಳ

ನಿತ್ಯ ಮೂರತಿ ನಿತ್ಯ ಕೀರುತಿ ।
ನಿತ್ಯ ಹತ್ತವ ತಾರನೊ ನಿತ್ಯಾನಂತವತಾರನೊ ।
ನಿತ್ಯ ೧ ಶ್ರುತಿ ೨ ಗಿರಿ ೩ ಕ್ಷಿತಿ ೪ ದೈತ್ಯಪುತ್ರ ಉದ್ಧಾರನೋ ।
ನಿತ್ಯ ಬಲಿಯಾಗ ಬಿಕ್ಷಕನೊ ನಿತ್ಯ ನೃಪಕುಲ ರಾವಣ ಕಂಸ ।
ಪುತ್ರ ತ್ರಯ ದುಷ್ಟ ಸಂಹಾರನೊ ।
ನಿತ್ಯ ಭಕ್ತರ ಕಾವನೊ ನಿತ್ಯ ಸತ್ಯವತಿ ನಂದನ ।

ನಿತ್ಯ ಸೃಷ್ಟ್ಯಾದ್ಯಷ್ಟಕರ್ತ ।
ನಿತ್ಯ ಜ್ಞಾನಮಯ ಶರೀರ ನಿತ್ಯ ನವನೀತ ಚೋರ ।
ನಿತ್ಯ ಗೋಪಿಜನ ಜಾರ ।
ನಿತ್ಯ ಮಾತೃ ನಿತ್ಯ ಪಿತೃ ನಿತ್ಯ ಭ್ರಾತಾ ನಿತ್ಯ ಬಂಧು ।
ನಿತ್ಯ ಗುರುವೆ ನಿತ್ಯ ಸ್ವಾಮಿ ನಿತ್ಯ ನಿತ್ಯ ನಿತ್ಯನೆ ।
ನಿತ್ಯ ಮನೋಪಾದಾನ ದಿಂದ ।
ನಿತ್ಯ ವ್ಯಾಪಾರ ಮಾಡುವ ।
ನಿತ್ಯ ಬ್ರಹ್ಮಾದಿ ಕಲ್ಪಾದ್ಯರ ।
ನಿತ್ಯ ಪುಟ್ಟಿಸಿ ಬಡದಾಡಿಸುವ ।
ನಿತ್ಯ ಲೀಲಾ ವಿನೋದ ನಿತ್ಯ ನಿರ್ದೋಷ ಸ್ವತಂತ್ರ ।
ನಿತ್ಯ ಅಂಚಿತ್ಯಾದ್ಭುತ ।
ಸತ್ಯ ಸಂಕಲ್ಪ ವಿಜಯ ವಿಠಲ ।
ನಿತ್ಯ ಸರ್ವೇಶ ಸಾಕಾರ ||೫||

ಜತೆ

ಚಿಂತಿಸು ಈ ಪರಿ ಮನದಲ್ಲಿ ಸೃಷ್ಟಿಯ ।
ಸಂತತ ವಿಜಯ ವಿಠಲ ಮಾಡುವನೆಂದು ।೬||



# ದೇಹಗತ ನಾಡಿ ಪ್ರಕರಣ ಸುಳಾದಿ

## ೫೭) ಸುಳಾದಿ

ರಾಗ: ಭೈರವಿ ಧ್ರುವ ತಾಳ

ಎಪ್ಪತ್ತೆರಡುಸಾವಿರ ನಾಡಿ ಅತೀಂದ್ರಿಯ ।
ಇಪ್ಪವು ದೇಹದೊಳಗೆ ನಾಭಿಮೂಲದಲ್ಲಿ ।
ಒಪ್ಪುತಿವೆ ಕೇಳಿ ಎರಡು ವಿಧವಾಗಿ ।
ಅಪ್ಪಸವ್ಯಾಸವ್ಯಾ ಅರ್ಧರ್ಧಾಲೆಖ್ಖದಲ್ಲಿ ।
ಅಪ್ಪಾರ ಮಹಿಮನು ಪುರುಷಾಯುಷ ಪ್ರಮಾಣ ।
ಸ್ತ್ರೀಪುರುಷರೂಪದಲ್ಲಿ ಮೆರೆವುತಿಹ ।
ಇಪ್ಪತ್ತೊಂದು ಸಾವಿರ ಆರುನೂರು ಮಂತ್ರಜಪಿಸುವ ।
ಅಪ್ರತಿ ಸೂತ್ರವಾಯು ಸತತ ಲಕುಮಿ ಪತಿಯ ।
ಅಪ್ಪಣಿಯಿಂದಲಿ ಜೀವನ ಕೈಯಿಂದ ।
ಸುಪುಣ್ಯ ಮಾಡಿಸುವ ದಾಸೋಹಂ ಯೆಂದಾನುಡಿಗೆ ।
ಸಫಲ ವಾಗುವದು ವೊಂದು ಕಾಸು ಕೊಟ್ಟರೆ ।
ಕೊಪ್ಪರಿಗೆ ಧನಮಾಡಿ ಉಣಿಸುವ ಜಗದ್ಗುರು ।
ಇಪ್ಪತ್ತುನಾಲ್ಕು ನಾಡಿ ಮೊದಲಾದ ನಾಡಿಯೊಳು ।
ತಾಪ್ರಧಾನವಾಗಿ ಯಿಪ್ಪವು ಯಿದರೊಳು ।
ತಪ್ಪದೆ ನಾಲ್ಕು ನಾಡಿ ಬಲಗಡೆ ಪೊಂದಿಪ್ಪವು ।
ಒಪ್ಪದಿಂದಲಿ ನೋಡಿ ಉಳಿದನಾಡಿಗಳು ।
ಇಪ್ಪತ್ತುಯಿವೆ ಊರ್ಧ್ವ ಅಧೋಮುಖ ವರ್ಧರ್ಧಾ ।
ಗಪ್ಪನೆ ಮೇಲುಗಡೆ ಹಬ್ಬಿದ ಹತ್ತುನಾಡಿ ।
ಯಪ್ಪೆಸರು ಲಾಲಿಸುವದು ಶ್ರುತಿ ಸ್ಮೃತಿಸಮ್ಮತ ।
ಅಪ್ರಧಾನನಾಡಿ ಸರ್ವವುಯಿದರೊಳು ।

ಇಪ್ಪದು ಸುಷುಮ್ನನಾಡಿ ಶ್ರೇಷ್ಠ ।
ಅಪ್ಪಡಿಯಾದಿದೆ ಧ್ಯಾನಕ್ಕೆ ಶ್ರೀ ಹರಿ ।
ಬಪ್ಪ ಸ್ಥಾನವೆ ತಿಳಿದು ನೋಳ್ಪರಿಗೆ ।
ಸರ್ಪ ವೈರಿಕೇತನ ವಿಜಯ ವಿಠಲ ಹರಿಯ ।
ಆಪನ್ನನಾಗುವನು ತಿಳಿದರೆ (ಯದೆ) ಗತಿಯಿಲ್ಲ ॥೧॥

## ಮಟ್ಟತಾಳ

೧ ಪಿಂಗಳ ೨ ಗಾಂಧಾರಿ ೩ ಲಂಬುಸ (ಶಿಖ) ೪ ಪೂಂಸ ।
೫ ಹಿಂಗದೆ ೬ ಹಸ್ತಿನಿ ೭ ಕುಹ ೮ ಶಂಖಿನಿ ೯ ಶಾರದೀ ಇಡಾ ।
ಗಂಗೆ ಎನಿಸಿಕೊಂಬ ೧೦ ಬ್ರಹ್ಮನಾಡಿಸಹಿತ ।
ಅಂಗ ವಾಗಿಯಿದ್ದ ಹತ್ತುನಾಡಿಯು ಕಾಣೊ ।
ಪಿಂಗಳ ಬಲಭಾಗ ಎಡಭಾಗಕ್ಕೆ ಇಡಾ ।
ಸಂಗತಿ ಯಾದಂತೆ ಮೂಗಿನಲಿ ಸಂಚಾರ ।
ತಿಂಗಳ ಸೂರ್ಯ ಸ್ವರಗಳೆನಿಸುವವು ।
ಮಂಗಳರಮಣನ್ನ ಚರಣ ಕಾಣುವ ಜ ।
ನಂಗಳು ಜ್ಞಾನದಲಿ ಸ್ವರಭೇದ ಗ್ರಹಿಸುವದು ।
ಅಂಗಜ ಪಿತ ನಮ್ಮ ವಿಜಯ ವಿಠಲ ಅಂತ ।
ರಂಗದೊಳಗೆ ಯಿದ್ದು ತನ್ನ ತೋರಿಸಿ ಕೊಡುವ ॥೨॥

## ತ್ರಿವಿಡಿ ತಾಳ

ನಾಸಿಕದಲಿ ಇಡಾ ೧ ಪಿಂಗಳ ೨ ನಾಡಿಗಳು ।
ಪುಂಸಾ ೩ ಲಂಬುಶಿಖಾ ೪ ಎರಡುಕಣ್ಣಿನಲಿ ।
ಲೇಸು ಗಾಂಧಾರಿ ೫ ಹಸ್ತಿನಿ ೬ ಯೊಂಬೊ ನಾಡಿ ಪ್ರ ।
ಕಾಶವಾಗಿವೆ ನೋಡಿ ಕರ್ಣದಲ್ಲಿ ।
ಆ ಶಾರದ ೭ ಜಿಂಹ್ವೆಯಲ್ಲಿಪ್ಪುದು ।
ಭೂಷಣವಾಗಿದ್ದ ಕುಹವೆ ೮ ಗುದದಲ್ಲಿ ।

ಮೋಸವಿಲ್ಲದೆ ಲಿಂಗದಲ್ಲಿ ಶಂಕಿನಿ (೯) ನಾಡಿ ।
ಈಸು ನಾಡಿಗಳು ಅಲ್ಲೆಲ್ಲಿಪ್ಪವು ।
ಸುಷುಮ್ನ ೧೦ ನಾಡಿ ಮೂಲಾಧಾರ ವಿಡಿದು ।
ಶಾಶಿನಿಯಿಲ್ಲದೆ ಮೂರ್ಧ್ನಿ ತನಕ ।
ಶ್ವಾಸ ಅಲ್ಲಿಂದ ಪೋದವಗೆ ಪೂರ್ಣಜ್ಞಾನ ।
ಮಿಾಸಲ ಪದವಿಗೆ ಅರ್ಹನಯ್ಯಾ ।
ಈ ಸಮಸ್ತನಾಡಿಗಳಲ್ಲಿ ಶಿವಪುತ್ರರು ।
ದಾಸ ಪ್ರಾಣರು ಮತ್ತೆ ಮುಖ್ಯಪ್ರಾಣ ।
ಶ್ರೀಶನ ಸೇವೆ ಗೋಸುಗಾಧಿಷ್ಠಾನ ರಾಗಿ ।
ಈ ಶರೀರದ ಸ್ಥಿತಿ ನಡೆಸುವರು ।
ದೇಶಕಾಲ ಬಿಡದೆ ಆವಾವ ಕರ್ಮಗಳು ।
ಲೇಶ ತಪ್ಪದಂತೆ ಪ್ರೇರಿಪರೋ ।
ಲೇಶಿಗೆ ಯಿವರಯ್ಯಾ ಹೊಲ್ಲಿಗೆ ಯಿದೆನಾಮು ।
ಆಸುರಿ ಜನರಲ್ಲಿ ಮಾಡಿಸುವರು ।
ಈ ಶುಂಠರಿಗೆ ಮುಖ್ಯ ಕಲಿ ಪ್ರೇರಕ ನಾಹ ।
ವಾಸುದೇವನೆ ಅವಗೆ ಶಿಕ್ಷಕನು ।
ದೇಶಕಾಲ ವ್ಯಾಪ್ತ ವಿಜಯ ವಿಠಲ ಹರಿಯ ।
ದಾಸರೊಳಗೆ ಮುಖ್ಯ ಪ್ರಾಣನೆ ಬಲ್ಲಿದಕಾಣೊ ॥೩॥

## ಅಟ್ಟ ತಾಳ

ಪ್ರಾಣ ಹೃದಯದಿ ಶ್ವಾಸ ಕಾರಣ ಅ ।
ಪಾನನು ಮಲ ಮೂತ್ರ ಬಿಡಿಸುವ ಅಧೋದಿಂದ ।
ವ್ಯಾನ ಕಂಠದಲ್ಲಿ ತೃಷ್ಣೆಯ ಮಾಳ್ಪ ಉ ।
ದಾನ ತಾಲು ಸ್ಥಾನದಲ್ಲಿ ಆಹಾರ ।
ವಾನು ಬುಂಜಿಸು ಆಕಳಿಸುವ ।

ಈ ನಾಭಿಯಲ್ಲಿ ಸಮಾನ ವಾಯು ಕೃ ।
ಶಾನುವಿಗೆ ಬೀಸಿ ದೀಪನವ ಮಾಡುವ ।
ಏನಂಬೆ ಸಮಸ್ತ ಸೂಕ್ಷ್ಮನಾಡಿಯಲ್ಲಿ ।
ತಾನಿದ್ದು ಅಹಾರವ ನಾಗನು ಕೊಡುತಿಪ್ಪ ।
ಏಣಿಸಿ (ಎಣಿಸೆ) ಗುಣಿಪದು ಯಿವರಿವರಿದ್ದಂಥ ।
ಸ್ಥಾನಂಗಳು ಅಲ್ಲಿ ಮಾಡುವ ವ್ಯಾಪಾರ ।
ಜ್ಞಾನಾಂಬುಧಿ ನಮ್ಮ ವಿಜಯ ವಿಠಲ ಬಲು ।
ಜಾಣನು ಕಾಣೊ ಜಗದೊಳಗಾಡುವ ।೪॥

**ಆದಿತಾಳ**

ಕಣ್ಣಿನಲಿ ಕೂರ್ಮರೆಪ್ಪೆ ಹಾಕಿ ಮುಚ್ಚಿಸುವ ।
ಮುನ್ನೆ ಕೃಕಲವಾಯು ನಾಶಿಕದಲ್ಲಿ ವಾ ।
ಸನ್ನೆ ತೆಗೆದುಕೊಂಬ ನಾನಾ ವಿಚಿತ್ರವಾದ ।
ಧನ್ನಂ (ಧನಂ) ಜಯ ಯೆಂಬುದು ಎಂಟುದಿಕ್ಕಿನ ಶಬ್ದ ।
ಕರ್ನದಲ್ಲಿ ಶುಭಾಶುಭ ಕೇಳಿಸುವದು ಬಿ ।
ನ್ನಣ ದೇವದತ್ತನು ಜಿಂಹ್ವೆಯಲಿ ।
ಚೆನ್ನಾಗಿ ವಾಕ್ಯಗಳ ನುಡಿಸುವ ಕೊಡಿಸುವ ।
ಬನ್ನ ಬಡಿಸುವರು ಯಿವರೆ ದೈತ್ಯರೊಳಿದ್ದು ।
ಗುಣ್ಣಿಸೆ ದಶವಾಯು ಪ್ರವರ್ತಿಸುವರು ।
ಅನ್ನಂತ ಬಗೆಯಲ್ಲಿ ಸಾಧನ ಮಾಡುತ್ತ ।
ಅನ್ನಂತ ಜಿವರಾಶಿಯೊಳಗೆ ವಾಸವಾಗಿ ।
ಭಿನ್ನ ಭಿನ್ನ ಚೇಷ್ಟೆ ಮಾಡಿಸುವರು ನಿಂದು ।
ಇನ್ನು ಯಿವರಿಗೆ ಅಧಿಷ್ಟಾನ ಮುಖ್ಯಪ್ರಾಣ ।
ತನ್ನೊಳಗೆ ಸಿರಿ ಹರಿಸಹಿತ ಯಿದ್ದಾ ।
ಗಣ್ಯ ವಿಲ್ಲದ ಕರ್ಮ ಮಾಡಿ ಮಾಡಿಸುತಿಪ್ಪನು ।
ಅನ್ಯ ದೈವವೆ ಯಿಲ್ಲ ಈತನೆ ಮುಖ್ಯ ಕರ್ತ ।

ಮನ್ನುಜ ಈ ಪರಿ ತಿಳಿದು ತನ್ನ ಗುರು ।
ವಿನ್ನ ಮೊದಲು ಮಾಡಿ ಮುಖ್ಯಪ್ರಾಣಾಂತರ್ಯಾಮಿ ।
ಸನ್ಮತಿ ಯಿಂದ ಸಮರ್ಪಣೆ ಮಾಡಿದರೆ ಪಾ ।
ವನ್ನ ನಾಗುವ ತನ್ನ ಕುಲಕೋಟಿ ಕೂಡಿಕೊಂಡು ।
ಚೆಣ್ಣಿಗಳ್ಳ ನಮ್ಮ ವಿಜಯ ವಿಠಲನ ಕಾ ।
ರುಣ್ಯ ಪಡೆದು ಮಹಾಧನ್ಯರೆನಿಸುವದು ॥೫॥

## ಜತೆ

ತಿಳಿದು ಈ ಬಗೆಯಿಂದ ಧ್ಯಾನವ ಮಾಡಿರೊ ।
ಒಲಿವನು ವಿಜಯವಿಠಲ ನಾಡಿಯೊಳು ಪೊಳೆವ ॥೬॥





ಶ್ರೀ ಅಭಿನವ ಜನಾರ್ದನ ವಿಠಲ ಕೃತ

## ಅಧ್ಯಾತ್ಮ ಉಪಾಸನೆ, ಬ್ರಹ್ಮಾಂಡ ಪಿಂಡಾಂಡ ವಿ

### ೫೪) ಸುಳಾದಿ

ರಾಗ :- ಶಂಕರಾಭರಣ ಧ್ರು

ವಾರಿಜ ಜಾಂಡದ ವಿಸ್ತಾರವು ಅಂತರ ಬಾ ।
ಹಿರದಲಿ ಯಿದ್ದ ಪ್ರಮೇಯವ ।
ವಾರಿಜಾಲಯಾತ್ಮಕ ಅವ್ಯಾಕೃತಾಕಾಶ ।
ಸಾರುವೆ ಅದರಿಂದಿತ್ತಾವರಣಾದ ।
ನಾರಾಯಣ ವಾಸುದೇವ ಸಂಕರುಷಣ ।
ಧೀರ ಪ್ರದ್ಯುಮ್ನ ಅನಿರುದ್ಧ ತ್ರಿಗುಣಾ
ವಾರಿಜಾನನ ತತ್ವ ಅಹಂಕಾರ ಆಕಾಶ ।
ಈರ ತೇಜಸ್ಸು ಅಪ್ಪು ಧಾರುಣಿಯು ।
ಮೇರು ಪರ್ವತ ಉಪಪರ್ವತ ಅಷ್ಟದಿಕ್ಕು ।
ಈಪೈದು ನಾಲ್ಕು ಲೋಕ ಅಷ್ಟಗಜ ।
ವಾರಿಧಿಗಳು ಸಪ್ತಾ ನದಿಗಳು ಖಂಡಾಹರಿ ।
ಈ ರೊಂದು ಪುರ ಲೋಕಾಲೋಕ ಸ್ವರ್ನ ।
ಧಾರುಣಿ ಶುದ್ಧೋದಕ ಸರ್ವಾಮರರ ಈ
ಶರೀರ ದೊಳಗೆ ವಿಚಾರ ಮಾಡಿ ।
ಶ್ರೀರಮಣನ ಮಹಮಹಿಮೆಂದು ತಿಳಿದು ನೀ ।
ಚಾರು ಮನಸಿನಿಂದ ಧ್ಯಾನಮಾಡೊ ।
ಘೋರ ವಿಷಯ ಕಡೆಗೈದುವದಕ್ಕೆ ಸಾ ।
ಕಾರ ವಾಗುವದು ಈ ಜ್ಞಾನ ಬಂದು ।
ಧೀರ ಶ್ರೀ ಅಭಿನವ ಜನಾರ್ದನ ವಿಠಲ ।
ಸೇರಿಸುವನು ತನ್ನ ಪದಸನ್ನಿಧಾನದಲ್ಲಿ

## ಮಟ್ಟ ತಾಳ

ಹರಣವೆ ಅಜನಾಂಡ ವೆಂದು ತಿಳಿದು ಯಿಲ್ಲಿ ।
ಹೊರಗೆ ಯಿಪ್ಪವದೆಲ್ಲ ಆಕಾಶವೆನ್ನು ।
ಎರಡು ಮೂರು ಕೋಶದಲ್ಲಿ ಯಿದ್ದ ಶಾಂತಿ ।
ವರನೆ ಮೊದಲಾದ ಹರಿಯ ರೂಪವೆ ನಾಲ್ಕಾ ।
ವರಣವೆಂದು ತಿಳಿಯಿದರ ಸಂಖ್ಯ ವಿಲ್ಲ ।
ದರ ತರುವಾಯದಲ್ಲಿ ಕೋಶಕ್ಕಭಿಮಾನಿ ।
ಸುರರು ಪ್ರಕೃತಿ ಬ್ರಹ್ಮಾ ಹರನತತ್ವ ವಿಡಿದು ।
ಧರಣಿಯೆ ಮೊದಲಾದ ಭೂತಗಳೈದು ಈ ।
ಕರಣಗಳೆ ಸಪ್ತಾವರಣ ವೆನಿಸುವದು ।
ಸಿರಿಪತಿ ಅಭಿನವ ಜನಾರ್ದನ ವಿಠಲ ।
ಸರುವ ನಿಯಾಮಕನಾಗಿ ಯಿರುತಿಪ್ಪ ನಿತ್ಯ ॥೨॥

## ತ್ರಿವಿಡಿ ತಾಳ

ಹೃದಯ ದೊಳಗೆಯಿಪ್ಪ ಹದಿನಾಲ್ಕು ದಳದ ಸು ।
ಪದುಮವೆ ಚತುರ್ದಶ ಲೋಕ ವೆಂದು ತಿಳಿ ।
ಇದರಲ್ಲಿ ಪ್ರಾಜ್ಞದೇವ ಅಧಿಪ ವಿರಾಟ ರೂ ।
ಪದ ವಿವರವನೆಲ್ಲ ಯಿಲ್ಲಿ ಚಿಂತಿಸುವದು ।
ಈದರ ಮಧ್ಯದಲ್ಲಿ ಯಿಪ್ಪ ಕರ್ಣಿಕೆ ಸುವ ।
ರ್ನದ ಪರ್ವತವೆಂದು ತಿಳಿದು ನೋಡು ।
ಅದಕೆ ಕೇಸರಗಳು ಉಪ ಪರ್ವತವೆನ್ನು ।
ಮೊದಲಾ ಪದುಮಕೆ ಅಷ್ಟದಳ ವೆಂತೆಂದು ।
ಇದರಲ್ಲಿ ಜ್ಞಾನಾರ್ಕ ಉದಯಾವೆನ್ನು ।
ತ್ರಿದಶ ವರ್ಗವು ದೈತ್ಯರಿಲ್ಲಿಪ್ಪ ನೋಡು ।
ಮುದದಿಂದ ಶ್ರೀಹರಿ ಪಾಪ ಸುಪುಣ್ಯಾ ಕ್ರೀ ।

ಯದ ಪತಿಗಳೆಂದೆನೆಸುತಿಪ್ಪ ।
ಆದುಭೂತ ವಿಶ್ವ ತೈಜಸ ಪ್ರಾಜ್ಞರಿವರು ।
ಅಧಿಪತಿಗಳು ದಿವಾರಾತ್ರಿಯಲ್ಲಿ ।
ಪದುಮಲೋಚನ ಅಭಿನವ ಜನಾರ್ದನ ವಿಠಲಾ ।
ಇದರಂತೆ ಧೆನಿಸೆ ವೊದಗಿ ಕೊಡುವ ಸುಖ ॥೩॥

## ಅಟ್ಟತಾಳ

ಏಳು ಎರಡು ಭಕುತಿಯೆ ನವ ಖಂಡವು ।
ಏಳು ಸಾಗರಗಳು ಏಳು ಧಾತುಗಳೆನ್ನು ।
ಕೀಳು ನದಿಗಳೆಲ್ಲ ನಾಡಿಗಳೆಂತೆಂದು ।
ವ್ಯಾಳೈಸಿ ಯಿರುತಿಪ್ಪ ದ್ವಯ ಪರಿಚ್ಛೇದ ಲೋ ।
ಕಾ ಲೋಕ ಪರ್ವತವೆಂದು ತಿಳಿಯಬೇಕು ।
ಕಾಳಾಗಿಯಿಪ್ಪ ತಮಸು ತಮೋಗುಣವೆಂದು ।
ವ್ಯಾಲೆ ರಜೋಗುಣ ಸ್ವರ್ನಭೂಮಿ ಯೆನ್ನು
ಆಲೋಚಿಸು ಸತ್ವಗುಣವೆ ಶುದ್ಧೋದಕ ।
ಯೇಳು ಧಾತುಗಳೊಳು ಯಿದ್ದ ಕಮಲಗಳೆ ।
ಶ್ರೀ ಲೋಲನಿಹ ಸ್ವೇತ ದ್ವೀಪಾನಂತಾಸನ ।
ಆಲಯ ವೈಕುಂಠವೆಂದು ತಿಳಿಯಬೇಕು ।
ಯೇಳೊಂದು ಗಜಗಳೆ ಅಷ್ಟಮದಗಳು ಯೆನ್ನು ।
ಸ್ಥೂಲ ಅನಿರುದ್ಧ ದೇಹದಿ ಗುಣದಿಂದ ।
ವಾಲಗ ಮಾಡುವ ಸುರರೆ ಜೀವಿಗಳೆನ್ನು ।
ಮೂಲೇಶ ಹರಿಯ ಕಿಲಾಲಜ ಪದದಲ್ಲಿ ।
ಆಳಾಗಿಯಿಪ್ಪ ಪ್ರಾಣನೆ ಮಂತ್ರಿಯೆಂತೆಂದು ।
ಶ್ರೀ ಲತಾಂಗಿ ಶ್ರೀ ಭೂ ದುರ್ಗೆಯರಿಂದಲಿ ।
ಈ ಲಿಂಗದಿ ವಿಷ್ಣು ಬ್ರಹ್ಮ ರುದ್ರನೆಂದು ।
ಪಾಲಣೆ ಸೃಷ್ಟಿಲಯವು ಮಾಳ್ಪ ಹರಿತಾನೆ ।

ಶೀಲ ಮೂರುತಿ ಅಭಿನವ ಜನಾರ್ದನ ವಿಠಲ ।
ಕೇಳುವರಿಗೆ ಅತ್ಯಾಶ್ಚರ್ಯ ತೋರುತಲಿಪ್ಪ ॥೪॥

ಆದಿತಾಳ

ಈ ಪರಿಯಲಿ ನಾನಾಪರಿ ಜೀವರ ।
ಅಪಾರ ದೇಹದಿ ವ್ಯಾಪಕ ತಾನಾಗಿ ।
ವ್ಯಾಪಾರ ಮಾಳ್ಪ ತದ್ರೂಪಾನುಸಾರವಾಗಿ ।
ಸುಪುಣ್ಯ ಜೀವಿಗಳ ಆಪತ್ತು ಪೋಗಾಡುವ ।
ಪಾಪಿಷ್ಟ ಜನರ ಮಹಾಪತ್ತು ಬಡಿಸುವ ।
ಪಾಪ ಪುಣ್ಯಗಳು ನಿರ್ಲೇಪಗೆ ಯಿವು ಬಂದು ।
ಲೇಪಿಸಬಲ್ಲವೆ ತಿಳಿದು ವಿಚಾರಿಸೊ ।
ಈ ಪರಿಯಿರಲಿಕ್ಕೆ ಕ್ಷುದ್ರ ಜೀವರು ತಾವೆ ।
ಶ್ರೀಪತಿ ಎಂತೆಂದು ಬೊಗಳಿ ಕೊಂಬರು ನಿತ್ಯ ।
ಆ ಪಂಚಾನನರನ ಕಂಡು ಸಹಿಸದೆ ಬ ।
ಹೂ ಪರಿನರಿಗಳು ಕೂಗಿದರೇನಯ್ಯ ।
ತಾಪಸ ಜನರು ಹರೀಪರನೆಂದು ಮ ।
ಹಾ ಪದವಿಯಲ್ಲಿ ಸುಖದಲ್ಲಿಪ್ಪರು ಕೇಳಿ ।
ಆ ಪುಣ್ಯ ಶ್ಲೋಕನ ದಯವ ಬೇಕಾದರೆ ।
ಈ ಪದ್ಮಜ ಪಿಂಡಾಂಡ ಸ್ಥಿತಿಯ ವಿಚಾರಿಸು ।
ಶ್ರೀ ಪತಿ ಯಿದ್ದಲ್ಲಿ ಸಕಲ ಕ್ಷೇತ್ರಗಳುಂಟು ।
ಆ ಪದ್ಮ ಸಂಭವ ಸರ್ವ ನಿರ್ಜರರು ಸಾ ।
ರೂಪ ಸಾಲೋಕ್ಯ ಸಾಮೀಪ್ಯ ಸಾಯುಜ್ಯ ವೆಂ ।
ಬೀಪರಿ ಮುಕುತಿ ಗಳುಂಟು । ಪಂಚ ವಿಧ ।
ಕೋಪಿಷ್ಟ ಜನರಿಗೆ ದುರ್ಲಭವೋ ಹರಿ ।
ಶ್ರೀ ಪಾದ ದಾಸರಿಗುಂಟು । ಪ್ರತಿದಿನ ।
ಈ ಪ್ರಕಾರದಲಿ ಸದು ಪಾಶ್ಯ ಜನರಿಗೆ ।

ಭೂಪ ಅಭಿನವ ಜನಾರ್ದನ ವಿಠಲ |
ಗೋಪ ನಾರಿಯರಿಗೊಲಿದ ತೆರ ವೊಲಿವನು

ಜತೆ

ಬೊಮ್ಮಾಂಡ ಪಿಂಡಾಂಡ ಪ್ರಕೃತಿಗಳಿಗೆ ಕರ್ತ |
ಬೊಮ್ಮ ಜನಕ ಅಭಿನವ ಜನಾರ್ದನ ವಿಠಲ

—★—

## ೫೯) ಮಂಗಳ

## ಶೋಭನ ಪದ

ರಾಗ

ಶೊಭನ ವೆನ್ನಿರೆ ಶ್ರೀ ದೇವಿ ಅರಸಗೆ |
ನಾಭಿಯಿಂದಜನ ಪಡೆದನಿಗೆ ||
ಪಡದಾ ಶ್ರೀ ಕೃಷ್ಣಗೆ ಶೊಭನವೆನ್ನಿರೆ ಸುರರೆಲ್ಲ

ಸಿರಿ ತನ್ನ ರಮಣಗೆ ಕಮಲದಾರುತಿ ನೆತ್ತೆ |
ಪರಿ ಪರಿ ಪುಷ್ಪ ರಚಿಸಲು |
ರಚಿಸಲು ಕೈಕೊಂಬ ನರಹರಿ ಗಾರುತಿಯ ಬೆಳಗರಿ

ಹೊನ್ನ ಹರಿವಾಣದಲ್ಲಿ ರನ್ನ ದಾರುತಿ ಯಾನಿಟ್ಟು |
ಕನ್ಯಾ ಸೌಪರಣಿ ವಾರುಣಿ ಉಮಾದೇವಿ |
ಕನ್ಯಾ ಸೌಪರಣಿ ವಾರುಣಿ ಉಮಾದೇವಿ ಆರುತಿಯಾನೆತ್ತಿ |
ಬ್ರಹ್ಮಾಂಡದೊಡೆಯನ ಚರಣಕ್ಕೆ

ಆವರಣ ಪೂಜೆಗಳಿಂದ ಅಮರರು ಮುದದಿಂದ |
ತಾರತಮ್ಯ ಭಾವದಿಂದ ರಚಿಸಲು |
ರಚಿಸಲು ಕೈಕೊಂಬ ನರಹರಿ ಗಾರುತಿಯಾ ಬೆಳಗಿರೆ ||೩||

ಇಂದ್ರ ಮಾಣಿಕ ಬಿಗಿದ ಪೊಸ ಕುಂದಣ ದಾರುತಿಯನೆತ್ತಿ |
ಇಂದ್ರನ್ನ ರಾಣಿ ಶಚಿದೇವಿ |
ಶಚಿದೇವಿ ಆರುತಿಯಾನೆತ್ತಿ |
ಇಂದಿರಾ ಪತಿಯಾ ಚರಣಕ್ಕೆ ||೪||

ಇಂತು ಹಯವದನನ್ನಾ ಎಂತು ನಾಪೊಗಳುವೆ |
ಸಂತೋಷದಿಂದ ಸುರರೆಲ್ಲ |
ಸಂತೋಷದಿಂದ ಸುರರೆಲ್ಲ ಪಾಡಿದರು ಕಾಂತೇರಿಗೈದುತನವೆಂದು ||೫||

—●—



ಶ್ರೀ ಹಯವದನ ಕೃತ

## ಜೋಗುಳ ಪದ

## ೩೦) ಪದ್ಮರಾಗ

**ಆನಂದ ಭೈರವಿ** — **ಛಾಪುತಾಳ**

ಜೋ ಜೋ ಕಂದರ್ಪ ಕೋಟಿಲಾವಣ್ಯ ।
ಜೋ ಜೋ ವೃಂದಾರಕ ಶಿರೋರನ್ನ ।
ಜೋ ಜೋ ಮುನಿ ಹೃತ್ಕಮಲ ಪ್ರದ್ಯೋತ ।
ಜೋ ಜೋ ಎಮ್ಮಣ್ಣಿಗಮೃತ ಪ್ರದಾತ । ||ಪ||

ಪ್ರಳಯ ಜಲಧಿಯೊಳಗಾಲದೆಲಿಯ ಮ್ಯಾಲೆ ।
ಮಲಗಿರೆ ಜಗವು ಜಠರದೊಳಗಿರಲು ।
ಕೆಲವು ದಿವಸ ಯೋಗ ನಿದ್ರೆಯೊಳ್ ಮಲಗೆದ್ದು ।
ಒಲಿದು ಸೃಷ್ಟಿಯ ಮಾಡುವೆನೆಂದು ನೆನದು ||೧||

ಪ್ರಕೃತಿಯ ಮೂಲ ಕಾರಣವನು ಮಾಡಿ ।
ಸಕಳ ತತ್ವಗಳ ಸಮ್ಮೇಳನಗೈಸಿ ।
ವಿಕರಿಸುವಂತೆಲ್ಲ ಪ್ರಕಟವ ಮಾಡಿ ।
ಸಕಲ ಮಹದಾದಿ ತತ್ವಗಳ ನಿರ್ಮಿಸಿದೆ । ||೨||

ಮಹ ತತ್ವದಿಂದ ಹಂಕಾರವ ಸೃಜಿಸಿ ।
ಅಹಂಕಾರ ತತ್ವತ್ರಯದ ಕಾರ್ಯಗಳ ।
ಬಹುವಿಧ ತತ್ವ ನಿರ್ಮಾಣವ ಮಾಡಿ ।
ಮಹುಮಹಿಮೆಯ ತೋರಿದೆ ಜಗನರಿಯೆ ||೩||

ಸೋಮ ಸೂರ್ಯರ ದೇಹ ವೈಕಾರಿಕದಿ ।
ಆ ಮುನ್ನೆ ತೈಜಸ ಇಂದ್ರಿಯಂಗಳನು ।

ತಾಮಸದಿಂದ ಭೂತಾದಿ ಪಂಚಕವ |
ನೇಮಿಸಿ ಅರ್ಥಿಯಿಂದಲಿ ತೋರಿದೆ ||೪||

ಆಲೋಚನೆಯಿಂದ ಸರ್ವಜಗ ವಿಷಯವನ್ನು |
ಲೀಲೆಯಿಂದಲಿ ಕಾಂಬ ಕಮಲ ಸಂಭವನು |
ಮೇಲುನುಡಿಗಳಿಂದ ತಲೆವಾಗಿ ತುತಿಸಲು |
ಶ್ರೀಲೋಲನೆ ಕೃಪೆಯಿಂದ ನೀ ಕಾಯ್ದೆ ||೫||

ದಶದಿಕ್ಕು ನೋಡಿ ತಾಭಯದಿಂದ ಕಮಲಜ |
ಬಿಸಜದೊಳಗೆ ಇಳಿದು ಹಾದಿಯ ಕಾಣದಲೆ |
ದಶಪಂಚ ವರುಷ ನಿನ್ನಾಜ್ಞದಿ ತಪವಿರೆ |
ವಸುಧೀಶ ತನಯಗೆ ನಿಜವ ತೋರಿಸಿದೆ ||೬||

ಒಂದು ಮೂರುತಿಯಿಂದ ಸೃಷ್ಟಿಯ ಮಾಡಿದೆ |
ಒಂದು ಮೂರತಿಯಿಂದ ಪಾಲನೆ ಮಾಡಿದೆ |
ಒಂದು ಮೂರುತಿಯಿಂದ ಸಂಹಾರ ಮಾಡಿದೆ |
ಒಂದೊಂದು ಗುಣವನಂತಾನಂತದ್ಭುತವೊ ||೭||

ಜನನ ಮರಣ ರಹಿತನೆ ದೇವತೆಗಳು |
ಅನುದಿನ ನಿನ್ನ ಸೇವೆಯ ಮಾಡಲೆಂದು |
ಮನನ ನಿಯಾಮಿಸಿ ನಿರ್ಮಾಣಮಾಡಿದೆ |
ಮನುಜನಾಗಿ ತೋರಿದೆ ಜಗವರಿಯೆ ||೮||

ಒಂದೊಂದು ರೋಮ ಕೂಪಗಳಲ್ಲಿ ಬ್ರಹ್ಮಾಂಡ |
ಪೊಂದಿದನಂತ ಬ್ರಹ್ಮಾದಿಗಳಿರಲು |
ಬಂದು ಗೋಕುಲದಲ್ಲಿ ಶಿಶುವಾಗಿ ಜನಿಸಿದೆ |
ನಂದದಿಂದಲಿ ಶರಣೆಂದರು ಸುರರು ||೯||

ನಂದ ಯಶೋದೆ ದೇವಿಯರತಿ ಹರುಷದಿ ।
ಹಿಂದೆ ಬಹುದಿನ ಮಾಡಿದ ತಪಕೆ ।
ಇಂದಿರ ಪತಿಯೇ ತಾ ಜನಿಸಿದನೆಂದು ।
ಬಂದ ಬ್ರಾಹ್ಮಣರ ದಣಿಸಿದರು ದ್ರವ್ಯದಲಿ ॥೧೦॥

ಜಾತ ಕರ್ಮ ಮಾಡಿಸಿದರಾಗ ದ್ವಿಜರು ।
ನೂತನವಾದ ಮಧುವ ಬಾಯೊಳಿಟ್ಟು ।
ಈತನೆ ಸಾಕ್ಷಾದ್ಭಗವಂತನೆಂದು ।
ಸೂತಿಕ ಗ್ರಹದಿ ಪೂಮಳೆ ಕರೆದರಂಬರದಿಂ ॥೧೧॥

ಈರಾರು ದಿನದಿ ಸರಸ್ವತಿ ಭಾರತೀ ।
ವಾರುಣಿ ಪಾರ್ವತಿ ಸೌಪರಣಿಯರು ।
ನಾರಾಯಣನವತಾರ ವೆಂದೆನುತಲಿ ।
ನಾರಿಯರತಿ ಹರುಷದಲಿ ಪಾಡಿದರು ॥೧೨॥

ಬ್ರಹ್ಮರುದ್ರಾದಿ ದೇವತೆಗಳಿಗಾದರು ।
ಒಮ್ಮೆ ನಿಲುಕ ಸಿರಿನಲ್ಲ ಚಲುವನು ।
ಉಮ್ಮಯದಿಂದ ನೋಡುವೆನೆಂಬ ಭರದಿಂದ ।
ಅಮ್ಮ ಮೌನದಿ ತಲೆವಾಗಿ ನಾಚಿದಳು ॥೧೩॥

ನಾಮಕರಣ ದಿನ ಬ್ರಹ್ಮಾದಿ ಸುರರು ।
ಆ ಮನು ಮುನಿಸಿದ್ಧ ಸಾಧ್ಯಚಾರಣರು ।
ಸ್ತೋಮವೆಲ್ಲವು ನೆರದೀ ಮಹಶಿಶುವ
ಪ್ರೇಮದಿಂದಲಿ ನೋಡಿದರು ಅರ್ಥಿಯಲಿ ॥೧೪॥

ವ್ಯಾಸ ಗಾರ್ಗೇಯಾದಿ ಋಷಿಗಳು ನೆರೆದು ।
ಸಾಸಿರ ಕೋಟಿ ಅನಂತ ನಾಮಗಳುಳ್ಳ ।

ವಾಸುದೇವಗೆ ಕೃಷನೆಂಬ ನಾಮನಿಟ್ಟು |
ಸೂಸಿದರು ಮಂತ್ರಾಕ್ಷತೆಯ ಮಸ್ತಕದಿ ||೧೫||

ಪುಟ್ಟ ಪದಗಳಿಂದ ತೊಟ್ಟಿಲ ನೊದೆಯಲು |
ದುಷ್ಟ ಶಗಟನು ನುಗ್ಗುನುಸಿಯಾಗಿ ಬೀಳೆ |
ಕಟ್ಟಿದ ವರಗಳಿಂದ ಮರಗಳ ಕೆಡಹಲು |
ಕೆಟ್ಟೆವೆಂದರು ದಾನವರು ಬೇಗದಲಿ ||೧೬||

ವೇದ ಚತುಷ್ಟಯ ನೇಣುಗಳಾಗೆ ಪ |
ಯೋದಧಿ ಪತಿಯೆ ತೊಟ್ಟಿಲ ರೂಪವಾಗೆ |
ಆದಿಶೇಷ ಬಂದು ಹಾಸಿಕೆಯಾಗಲು |
ಶ್ರೀ ದೇವಿ ಪತಿ ಹಯವದನ ಮಲಗಿದನೂ ||೧೭||

|| ಶ್ರೀ ಗುರು ಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು ||
ಶುಭಂ ಭವತು ಓಂ ಶಾಂತಿಃ ಶಾಂತಿಃ ಶಾಂತಿಃ



